ಶ್ರೀ ಮನ್ನಿಜಗುಣ ಶಿವಯೋಗಿ ವಿರಚಿತ

# ವಿವೇಕ ಚಿಂತಾಮಣಿ

ಸಂಪಾದಕರು
ಜಿ. ಎ ಶಿವಲಿಂಗಯ್ಯ. ಎಂ. ಎ.
ಕನ್ನಡ ಅಧ್ಯಾಪಕರು
ಮರಿಮಲ್ಲಪ್ಪನವರ ಪದವಿ ಪೂರ್ವ ಕಾಲೇಜು
ಮೈಸೂರು.

ಪ್ರಕಾಶಕರು
ಶಿವಕವಿ ಪ್ರಕಾಶನ, ಮೈಸೂರು
1989

# ಭಾರತ ವರ್ಷ

ಹಿಮವತ್ಪರ್ವತದಿಂ ದಕ್ಷಿಣಸಾಗರ ಪರ್ಯಂತವಾಗಿ ನವಸಾವಿರ ಯೋಜನ ಪ್ರದೇಶಮೇ ನಾನಾವರ್ಣಮಯ ಭೂಮಿಯುಳ್ಳ ಭಾರತ ವರ್ಷವದೇ ಏರಿಸಿದ ಬಿಲ್ಲಿನಾಕಾರವಹುದು........................................

......ವೃಷಭನ ಮಗನೇ ಭರತನು ಆ ಭರತನಾ ಪೆಸರಿನಲ್ಲಿ ಈ ಭರತ ಖಂಡವಾಯಿತ್ತು.

# ಮುನ್ನುಡಿ

ಶರಣಸಾಹಿತ್ಯ ಕ್ಷೇತ್ರದಲ್ಲಿ ಪ್ರೊಫೆಸರ್ ಜಿ. ಎ. ಶಿವಲಿಂಗಯ್ಯನವರದು ಕೇಳಿ ತಿಳಿಯಬೇಕಾದ ಹೆಸರು. ಅವರು ಸಂಪಾದಿಸಿರುವ ಕೇಶಿರಾಜನ ಶೀಲಮಹತ್ವದ ಕಂದ, ಗಂಗೇಶ್ವರಾಂಕಿತ ಸ್ವರವಚನಗಳು, ಚೆನ್ನಬಸವಣ್ಣನವರ ವಚನೈಕೋತ್ತರ ಶತಸ್ಥಲ ಎಂಬ ಗ್ರಂಥಗಳು ಪ್ರಕಟಗೊಂಡಾಗ—ಅವು ಅದುವರೆಗೂ ಯಾವ ವಿದ್ವಾಂಸರೂ ಕಂಡರಿಯದ ಅಲಭ್ಯಕೃತಿಗಳಾಗಿದ್ದವು. ಅವರು ಸಂಪಾದಿಸಿರುವ ಷಟ್ಪ್ರಕಾರ ಸಂಗ್ರಹವಂತೂ ವಚನ ಸಂಕಲನ ಪ್ರಕಾರದಲ್ಲಿ ಕೀರ ಬೆಲೆಬಾಳುವ ಕೃತಿ. ಈ ದೃಷ್ಟಿಯಿಂದ ಶಿವಲಿಂಗಯ್ಯನವರ ಸಂಪಾದಿತ ಗ್ರಂಥಗಳೆಲ್ಲಾ-ಕತ್ತಲಿಂದ ಬೆಳಕಿಗೆ ಬಂದಂಥವು. ಈ ಅರ್ಥದಲ್ಲಿ ಅವು ಅವರ ನಿಜವಾದ "ಸಂಪಾದನೆ"ಗಳೇ ಆಗಿವೆ.

ಸಂಶೋಧನಲೇಖನಗಳಿಗೆ ಮೀಸಲಾದ ಸಾಹಿತ್ಯ ಪರಿಷತ್ಪತ್ರಿಕೆ, ಪ್ರಬುದ್ಧ ಕರ್ನಾಟಕ, ಬಸವ ಪಥ ಮುಂತಾದ ನಿಯತಕಾಲಿಕೆಗಳಲ್ಲಿ ಪ್ರೊ. ಶಿವಲಿಂಗಯ್ಯನವರ ಲೇಖನಗಳು ಆಗಾಗ್ಗೆ ಪ್ರಕಟವಾಗಿವೆ. ನಿವೃತ್ತರಾಗಲಿರುವ ಈ ಸಂಧಿಗ್ಧಕಾಲದಲ್ಲಿಯೇ ಶಿವಲಿಂಗಯ್ಯನವರು ನಿಜಗುಣಶಿವಯೋಗಿಗಳ ವಿವೇಕ ಚಿಂತಾಮಣಿಯನ್ನು ಒಂದು ಅಪೂರ್ವವಿಧಾನದಲ್ಲಿ ಪರಿಷ್ಕರಿಸಿ – ಪ್ರಕಟಿಸಿರುವುದು– ಅವರ ಅವಿಚ್ಛಿನ್ನ ಸಂಶೋಧನ ಶ್ರದ್ಧೆಯನ್ನೂ, ಕಾಲ–ಪರಿಸರಗಳ ಮಿತಿಯಿಂದಾಚೆಗೂ ಚಾಚಿಕೊಂಡಿರುವ ಅವರ ಸಾಹಸ ಪ್ರವೃತ್ತಿಯನ್ನೂ ಬೆರಳುಮಾಡಿ ತೋರಿಸುತ್ತಿದೆ.

ಪ್ರೊ. ಶಿವಲಿಂಗಯ್ಯನವರನ್ನು ನಾನು ಅವರ ತಾರುಣ್ಯಕಾಲದಿಂದಲೂ ಬಲ್ಲೆ. ಅವರ ಜ್ಞಾನದಾಹವನ್ನೂ, ಅದನ್ನು ಸಮರ್ಥಿಸಲು ಬೇಕಾದ ಓಲೆಯಗ್ರಂಥಗಳನ್ನು ಸಂಚಯನ ಮಾಡುವ ಅವರ ಉದ್ಯೋಗವನ್ನೂ, ಅವನ್ನು ಪರಿಶೋಧಿಸಿ ಪ್ರಕಟಿಸುವಲ್ಲಿ ಅವರು ವಹಿಸುವ ಜವಾಬ್ದಾರಿಯನ್ನೂ ಕಂಡು ಮೆಚ್ಚಿಕೊಂಡವರಲ್ಲಿ ನಾನೂ ಒಬ್ಬ.

ಶಿವಲಿಂಗಯ್ಯನವರೆಂದಿಗೂ ಅಬದ್ಧವಾದುದನ್ನು ಬರೆದು, ಅಜ್ಞರನ್ನು ಗುಂಪು ಕಟ್ಟಿಕೊಂಡು—ಅನನುಕೂಲವಾಗಿ ವಿಮರ್ಶಿಸಿದವರ ಮೇಲೆ ಛೂಬಿಟ್ಟು— ಆ ಮೂಲಕ ಕೀರ್ತಿಶನಿಗೆ ಪೂಜೆಸಲ್ಲಿಸುವ ಕುಕವಿಯಂತು ಅಲ್ಲವೇ ಅಲ್ಲ. ಕೀರ್ತಿಗಿಂತ ಮರ್ಯಾದೆಗೇ ಬೆಲೆಕೊಟ್ಟ ಪರಿಪಕ್ವಪಾಂಡಿತ್ಯ ಮತ್ತು ಹೃದಯಸಂಸ್ಕಾರ ಅವರದು.

# VIII

ನಮ್ಮವರು ಸಂಸ್ಕೃತವನ್ನು ತಿಳಿಯಲು ಅಮರಕೋಶವನ್ನು ಓದುವಂತೆ— ಲೋಕಜ್ಞಾನವನ್ನು ಪಡೆಯಲು ಓದಬೇಕಾದ್ದು ಈ ವಿವೇಕ ಚಿಂತಾಮಣಿಯನ್ನು. ಅಂದರೆ ಈ ವಿವೇಕಚಿಂತಾಮಣಿ ಕೇವಲ ಒಂದು ಪಾರಿಭಾಷಿಕ ಶಬ್ದಕೋಶವೆಂದೋ ವಿಷಯ ವಿಶ್ವಕೋಶವೆಂದೋ ತಿಳಿಯಬಾರದು. ಅಮರಕೋಶ ಮತ್ತು ಅಭಿಲಷಿತಾರ್ಥಚಿಂತಾಮಣಿಯಂಥ ಗ್ರಂಥಗಳು ವಿಷಯಸಂಚಯದ ಒಂದು ಯಾಂತ್ರಿಕ ಪ್ರಯತ್ನವಾದರೆ— ವಿವೇಕ ಚಿಂತಾಮಣಿಯು ಒಬ್ಬ ಮುಮುಕ್ಷುವನ್ನು ಕೇಂದ್ರವಾಗಿರಿಸಿಕೊಂಡು—ಅವನು ತಾನಿರುವ ಲೋಕದ, ತಾನಾಚರಿಸುವ ಧರ್ಮದ ವಿಶಿಷ್ಟ ಲಕ್ಷಣಗಳನ್ನೂ ಮುಖ್ಯಾಂಶಗಳನ್ನೂ—ಆ ಧರ್ಮದ ತತ್ತ್ವನು ಕ್ರಮದ ಒಂದು ಚೌಕಟ್ಟಿನಲ್ಲಿ ಪ್ರಿಯದರ್ಶನವಾಗುವಂತೆ ಪೇರಿಸಿ ಕೊಟ್ಟಿರುವ ಒಂದು ಜೀವಂತ ಅಧ್ಯಾತ್ಮರಚನೆ.

ವಿವೇಕ ಚಿಂತಾಮಣಿಯಲ್ಲಿ ನಿಜಗುಣಶಿವಯೋಗಿಗಳು ಸಂಗ್ರಹಿಸಲು ಯೋಜಿಸಿಕೊಂಡಿರುವ ವಿಷಯವು— ಆಗಮಪ್ರಣೀತವಾದ ಶೈವ ಧರ್ಮಕ್ಕೆ —ಅದರಲ್ಲೂ ವಿಶೇಷವಾಗಿ ವೀರಶೈವ ಧರ್ಮಕ್ಕೆ ಸಂಬಂಧಿಸಿದುದಾಗಿ ಅದನ್ನೆಲ್ಲ ತಿಳಿಯಬೇಕಾದ ಮುಮುಕ್ಷುವಿಗೆ ಸುಲಭಬೋಧವೂ ಸುಖಬೋಧವೂ ಆಗುವಂತೆ –ವೈದಿಕ ಪರಿಭಾಷೆಯ ಒಂದು ಸ್ಥೂಲಪರಿಚಯವನ್ನು ಮೊದಲನೇ ಪರಿಚ್ಛೇದದಲ್ಲಿ ಸರಳವಾಗಿ ಸಾರವತ್ತಾಗಿ ಮಾಡಿಕೊಡಲಾಗಿದೆ.

ಎರಡನೇ ಪರಿಚ್ಛೇದದಲ್ಲಿ ವೀರಶೈವದ ಪ್ರಕ್ರಿಯೆಗಳು ವಿವರವಾಗಿ ನಿರೂಪಿಸಲ್ಪಟ್ಟಿವೆ. ಮುಂದೆ ಮೂರನೇ ಪರಿಚ್ಛೇದದಲ್ಲಿ ಷಟ್‌ತ್ರಿಂಶತ್‌ತತ್ತ್ವ ವಿಭಾಗವನ್ನೂ, ಅದರ ಸೂಕ್ಷ್ಮಾಂಶದಿಂದಾದ ಪಿಂಡಾಂಡವನ್ನೂ,ಹೇಳಿ ಮುಗಿಸಿ, ಸ್ಥೂಲಾಂಶದಿಂದಾದ ಬ್ರಹ್ಮಾಂಡವನ್ನು ಕುರಿತು ಹೇಳಲು ಪ್ರಾರಂಭಿಸಿ, ಆಮೇಲೆ ನರಕಗಳು ಪಾತಕಗಳು, ವ್ಯಾಧಿಮರಣ ಮತ್ತು ಸಪ್ತಪಾತಾಳಗಳನ್ನೂ ವಿವರಿಸಲಾಗಿದೆ.

ನಾಲ್ಕು–ಐದನೇ ಪರಿಚ್ಛೇದಗಳಲ್ಲಿ ಜಂಬೂಮುಂತಾದ ದ್ವೀಪಗಳು, ಭಾರತ ಮುಂತಾದ ವರ್ಷಗಳು, ಚಕ್ರವರ್ತಿಗಳು, ಅಲಂಕಾರಗಳು, ಕಾವ್ಯಭೇದಗಳು ರಸಗಳು ಕಾವ್ಯ ನಾಯಕರು ವಾದ್ಯ ನೃತ್ಯಗೀತಗಳು ಮುಂತಾದುವನ್ನು ಕುರಿತ ಹಲವು ವಿವರಗಳಿರುವವು. ಇಡಿಯಾಗಿ ಭೂಲೋಕದ ವಿಷಯಗಳೆಲ್ಲ ಈ ಎರಡು ಪರಿಚ್ಛೇದಗಳಲ್ಲಿ ಪ್ರಸ್ತಾಪಗೊಂಡಿವೆ.

ಆರನೇ ಪರಿಚ್ಛೇದದಲ್ಲಿ ಭೂಮಿಯಿಂದ ಮೇಲಿರುವ ದೇವಲೋಕಗಳ ವಿಚಾರ ಪ್ರಾರಂಭವಾಗಿ–ವೀರಸ್ವರ್ಗ, ಸಿದ್ಧರು, ದ್ವಾದಶಾದಿತ್ಯರು, ನಕ್ಷತ್ರ ಮಂಡಲ, ಗ್ರಹಗಳು, ಸ್ವರ್ಲೋಕ ಮಹರ್ಲೋಕ ಸತ್ಯಲೋಕಾದಿ ಲೋಕಗಳು, ಸಿದ್ಧಿಗಳು, ನವಬ್ರಹ್ಮರು, ಶಿವಪುರ, ಶಿವಸಭಾಸ್ಥಾನ ಇತ್ಯಾದಿಗಳನ್ನು ವಿವರಿಸಲಾಗಿದೆ. ಇಲ್ಲಿಗೆ (ಪರಿಚ್ಛೇದ 3–6) ಬ್ರಹ್ಮಾಂಡದ ವಿಚಾರವೆಲ್ಲಾ ಮುಗಿಯುವುದು.

ಏಳನೇ ಪರಿಚ್ಛೇದದಲ್ಲಿ—ಬ್ರಹ್ಮಾಂಡದ ರಕ್ಷಕರಾಗಿ ಅದರ ಬಹಿರ್ಭಾಗದಲ್ಲಿರುವ ರುದ್ರರನ್ನು ಕುರಿತ ವಿವರವಿದೆ. ಹೀಗೆ ಈ ಏಳನೇ ಪರಿಚ್ಛೇದವೂ ಸೇರಿದಂತೆ ಮೇಲಣ ಐದು ಪರಿಚ್ಛೇದಗಳಲ್ಲಿ—ಅಧೋಮಾಯಾಜಾತ ಪದಾರ್ಥ ವಿಚಾರಗಳನ್ನೆಲ್ಲ ತಿಳಿಸಿದಂತಾಗಿರುವುದು.

ಮುಂದಿನ ಎಂಟನೆ ಪರಿಚ್ಛೇದದಲ್ಲಿ ಊರ್ಧ್ವ ಪ್ರಕೃತಿ (ವಿದ್ಯಾ) ಯಿಂದಾದ ಈಶ್ವರ ಮಹೇಶ್ವರ ಸದಾಶಿವ. ಶಕ್ತಿ ಮುಂತಾದ ತತ್ವಗಳ ವಿಚಾರವಿದೆ.

ಒಂಭತ್ತನೇ ಪರಿಚ್ಛೇದದಲ್ಲಿ ಜೀವರು ತಂತಮ್ಮ ಕರ್ಮ ಫಲಗಳನ್ನು ಯಾವ ಯಾವ ಲೋಕಗಳಲ್ಲಿ ಅನುಭವಿಸುವರೆಂಬ ವಿವರವಿದೆ. ಹತ್ತನೆಯದಾದ ಕೊನೆಯ ಪರಿಚ್ಛೇದದಲ್ಲಿ ಜೀವರ ಕಾಲಕ್ರಮವನ್ನೂ ಅವುಗಳ ನಿಶ್ಚಯ ವಿಧಾನವನ್ನೂ ಹೇಳಿದೆ.

ಹೀಗೆ ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿಯ ಹತ್ತು ಪರಿಚ್ಛೇದಗಳಲ್ಲಿ ಜೀವನನ್ನೂ ಅವನ ಧರ್ಮವನ್ನೂ, ಅವನನ್ನು ಸುತ್ತಿರುವ ವಿಶ್ವ ವ್ಯವಸ್ಥೆಯನ್ನೂ, ಪಾಪಪುಣ್ಯಗಳನ್ನೂ, ನರಕ ಸ್ವರ್ಗಗಳನ್ನೂ—ಇಡಿಯಾಗಿ ಜೀವ ಗತಿಯನ್ನು ವಿಶ್ವ ಭಿತ್ತಿಯ ಮೇಲೆ ಚಿತ್ರಿಸಿದ್ದಾರೆ.

ನಿಜಗುಣ ಶಿವಯೋಗಿಗಳಿಗೆ ಕೈವಲ್ಯಪದ್ಧತಿಯನ್ನು ಬಿಟ್ಟರೆ ವೀರಶೈವವನ್ನು ವಿವರವಾಗಿ ನಿರೂಪಿಸುವ ಸದವಕಾಶ ದೊರೆತಿರುವುದು ಈ ವಿವೇಕ ಚಿಂತಾಮಣಿಯಲ್ಲೇ. ಮಿಕ್ಕ ಅವರ ಕೃತಿಗಳೆಲ್ಲಾ ಶಿವಯೋಗವನ್ನೋ ಅದ್ವೈತವನ್ನೋ ಕುರಿತುವಾಗಿವೆಯೆಂಬುದನ್ನು ಮರೆಯಬಾರದು. ಆದ್ದರಿಂದಲೇ ವೈದಿಕ ಮತ್ತು ಶೈವದ ಹಿನ್ನೆಲೆಯಲ್ಲಿ ಮಂಡಿಸಿರುವ ವೀರಶೈವ ವಿಚಾರವು ಇಡಿಯಾಗಿ ವಿವೇಕ ಚಿಂತಾಮಣಿಯ ಅರ್ಧ ಭಾಗಕ್ಕಿಂತಲೂ ಅಧಿಕವಾಗಿದೆ. (ಕೇವಲ ವೀರಶೈವದ ವಿವರವೇ ಆದರೂ ಗ್ರಂಥದ ಮೂರನೇ ಒಂದು ಭಾಗದಷ್ಟಿರುವುದು). ಹೀಗೆ ವಿವೇಕ ಚಿಂತಾಮಣಿಯ ಅರ್ಧಭಾಗ ವೀರಶೈವದ ಧರ್ಮ ಮತ್ತು ಆಚರಣೆಗೇ ಮೀಸಲಾಗಿರುವುದಾದರೂ ಉಳಿದ ಅರ್ಧ ಭಾಗವು ಎಲ್ಲ ಧರ್ಮೀಯರಿಗೂ, ಎಲ್ಲ ರುಚಿ—ಅಭಿರುಚಿಯವರಿಗೂ ಆಕರ ಗ್ರಂಥವಾಗಿ ಮೂರು ಶತಮಾನಗಳಿಂದಲೂ ಅಗ್ರಗಣ್ಯವೂ ಅದ್ವಿತೀಯವೂ ಆಗಿ ನಿಂತು ನಿಜಗುಣ ಶಿವಯೋಗಿಗಳ ದರ್ಶನ ಶುದ್ಧಿಗೂ ವರ್ಣನ ವೈಖರಿಗೂ ಸಾಕ್ಷಿ ನುಡಿಯುತ್ತಿದೆ.

ಬಹುಜನ ವಿದ್ವಾಂಸರ ಸಮ್ಮತದಿಂದ ಬರೆದ ವಿವೇಕ ಚಿಂತಾಮಣಿಯೆಂಬ ಈ ಸತ್ಕೃತಿಯನ್ನು ಓದಿದವರಿಗೆ—ಇದ್ದ ಸಂಶಯವೆಲ್ಲಾ ನಿವಾರಣೆಯಾಗುವುದು. ಅವರಿಗೆ ಬೇರೆ ಬೇರೆ ಶಾಸ್ತ್ರ ಗ್ರಂಥಗಳನ್ನು ಓದುವ ಆಯಾಸ ಬೇಡ. ತಿಳಿಯ ಬೇಕಾದುದೆಲ್ಲಾ ಈ ಒಂದು ಗ್ರಂಥದ ಅಧ್ಯಯನದಿಂದಲೇ ತಿಳಿಯಲೆಂಬುದು

ವಿವೇಕ ಚಿಂತಾಮಣಿಯನ್ನು ಗ್ರಥಿಸುವಲ್ಲಿ ನಿಜಗುಣ ಶಿವಯೋಗಿಗಳು ತಳೆದ ಧೋರಣೆಯಾಗಿತ್ತು.

ಸ್ವಕಪೋಲಕಲ್ಪಿತ ಮಿಶ್ರವಲ್ಲದ, ಸತ್ಯಸಾರ ವಿಚಾರಗಳನ್ನೇ ನಿಜಗುಣ ಶಿವಯೋಗಿಗಳು—ವೇದ ಆಗಮ ಉಪನಿಷತ್ತು ಶಾಸ್ತ್ರ ಪುರಾಣ ಇತಿಹಾಸ ಮತ್ತು ಪುರಾತನೋಕ್ತಿಗಳಿಂದ ಸಂಗ್ರಹಿಸಿ—ಮಣಿಗಳನ್ನು ಮೆರುಗುಗೊಳಿಸಿ ಹವಣರಿತು ಪೋಣಿಸಿ ಕಂಠೀಹಾರವನ್ನು ಮಾಡುವಂತೆ- ಈ ಪುಸ್ತಕವನ್ನು ನಿಜಗುಣ ಶಿವಯೋಗಿಗಳು ಮಾಡಿಧರು. ಇದೂ ಒಂದು ಪ್ರಕರಣ ಗ್ರಂಥವೆಂಬುದೇ ಅವರ ಅಭಿಪ್ರಾಯ. ಅಷ್ಟೇ ಅಲ್ಲ—ಇದು ಅವರ ಪ್ರಕಾರ "ಮಹಾ ಕವಿತಾ ಪ್ರಬಂಧ''ವೇ ಆಗಿದೆ.

ಇನ್ನು ಅವರ ಇತರ ಕೃತಿಗಳಲ್ಲಿ ಕೆಲವನ್ನು ಕುರಿತು ಆಡಬೇಕಾದ ಎರಡು ಮಾತಿದೆ : ವೀರಶೈವದ ಶಿವಯೋಗಕ್ಕೆ ಸಂಬಂಧಿಸಿದಂತೆ ಚೆನ್ನ ಸದಾಶಿವಯೋಗಿಯು ಸಂಸ್ಕೃತದಲ್ಲಿ ವಿರಚಿಸಿದ "ಶಿವಯೋಗ ಪ್ರದೀಪಿಕೆ''ಗೆ ನಿಜಗುಣ ಶಿವಯೋಗಿಗಳು ''ಪರಮಾರ್ಥಪ್ರಕಾಶಿಕೆ" ಯೆಂಬ ವ್ಯಾಖ್ಯಾನ (ಗ್ರಂಥ) ವನ್ನು ಬರೆದಿರುವರು. ಈ ವ್ಯಾಖ್ಯಾನ ಸಹಿತವಾದ ಶಿವಯೋಗಪ್ರದೀಪಿಕೆಯು ಪಾತಂಜಲಯೋಗಸೂತ್ರಗಳಿಗೆ ಸಮಾನವೆನ್ನಬಹುದಾದಷ್ಟು ಆಧಾರ ಗ್ರಂಥವೆಂಬುದರಲ್ಲಿ ಸಂಶಯವಿಲ್ಲ. ಆದರೆ ಈ ವ್ಯಾಖ್ಯಾನವೆಲ್ಲ ಬಸವಾರಾಧ್ಯನೆಂಬೊಬ್ಬನು ಬರೆದುದೆಂಬಂತಾಗಿರುವುದು ಅತ್ಯಂತ ಶೋಚನೀಯ. ಈ ಬಸವಾರಾಧ್ಯನು ಶಿವಯೋಗಪ್ರದೀಪಿಕೆಯ ಸಂಸ್ಕೃತ ಪದ್ಯಗಳಿಗೆ ಪ್ರತಿಪದಾರ್ಥರೂಪವಾದ ಟೀಕೊಂದನ್ನು ಮಾತ್ರ ಬರೆದು ಸೇರಿಸಿದನೆನ್ನಬಹುದು. (ಇಷ್ಟರಿಂದಾದ ವಿಪರ್ಯಾಸವೆಂದರೆ—ನಿಜಗುಣಶಿವಯೋಗಿಗಳು ಬರೆದ ವ್ಯಾಖ್ಯಾನವೂ ಬಸವಾರಾಧ್ಯನೇ ಬರೆದುದೆಂಬಂತೆ ತಪ್ಪು ತಿಳಿಯಲಾಯಿತು). ಇಡಿಯಾಗಿ ಅದನ್ನು "ಚೆನ್ನಸದಾಶಿವಯೋಗಿ ವಿರಚಿತ ಶಿವಯೋಗ ಪ್ರದೀಪಿಕಾ- ಬಸವಾರಾಧ್ಯ ಟೀಕಾಸಮೇತಾ'' ಎಂದು ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿ- ಅದರಲ್ಲಿ ನಿಜಗುಣ ಶಿವಯೋಗಿಗಳ ಪರಮಾರ್ಥಪ್ರಕಾಶಿಕೆಯು ಸೇರಿ ವಾತಾಪಿ ಜೀರ್ಣೋಭವ ಆಗಿ ಹೋಗಿರುವುದು ಅತ್ಯಂತ ದುರದೃಷ್ಟಕರ. ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿರುವ ಆ ಪುಸ್ತಕದಲ್ಲಿ ಚೆನ್ನ ಸದಾಶಿವ ಯೋಗಿಯ ಸಂಸ್ಕೃತ ಪದ್ಯಗಳನ್ನೂ, ಅವಕ್ಕೆ ಬಸವಾರಾಧ್ಯನು ಬರೆದಿರುವ ಪ್ರತಿ ಪದಾರ್ಥರೂಪವಾದ ಟೀಕೆಯನ್ನೂ ಬಿಟ್ಟು, ಉಳಿದ ವಿಸ್ತಾರವೂ ಸ್ವಯಂ ಸಂಪೂರ್ಣವೂ ಆಗಿರುವ ವ್ಯಾಖ್ಯಾನದ ಬಹುಪಾಲು ನಿಜಗುಣ ಶಿವಯೋಗಿಗಳು ಬರೆದ ಪರಮಾರ್ಥ ಪ್ರಕಾಶಿಕೆಯೇ ಆಗಿದೆಯೆಂಬುದನ್ನು ಜನ ತಿಳಿಯಬೇಕು.

ಇನ್ನು ನಿಜಗುಣ ಶಿವಯೋಗಿಗಳನ್ನು ಕುರಿತಂತೆ (ವ್ಯಕ್ತಿದೃಷ್ಟಿಯಿಂದ ಮತ್ತು ಕಾಲದೃಷ್ಟಿಯಿಂದ) ಎರಡು ಮಾತು ಹೇಳುವುದು ಸಮಯೋಚಿತವಾಗಿದೆ ;

ನಿಜಗುಣ ಶಿವಯೋಗಿಗಳು ಚಿಕ್ಕದೇವರಾಜ ಒಡೆಯರ ಕಾಲದಲ್ಲಿದ್ದ ಕವಿಷಡಕ್ಷ
ರಿಯ ಸಮಕಾಲೀನನೆಂಬುದನ್ನು ಈಗ ಬಹುಮಟ್ಟಿಗೆ ಎಲ್ಲವಿದ್ವಾಂಸರೂ ಒಪ್ಪುವಂತಾ
ಗಿದೆ. ಆದರೆ ನಿಜಗುಣ ಶಿವಯೋಗಿಗಳು ಕ್ರಿ. ಶ. 1744 ರಷ್ಟು ಇತ್ತೀಚಿನವರೆಗೂ
ಇದ್ದರೆಂಬಂತೆ ವಿದ್ವಾನ್ ಎಂ. ಎಸ್. ಬಸವರಾಜಯ್ಯನವರು (ನಿಜಗುಣ
ಶಿವಯೋಗಿ ವಿರಚಿತ ಸ್ವರೂಪಸಿದ್ಧಿ ಟೀಕಾಸಹಿತ ಪರಂಜ್ಯೋತಿಯತಿಯ ಅನುಭವ
ಮುಕುರಕ್ಕೆ ಬರೆದ ಪೀಠಿಕೆಯಲ್ಲಿ) ಶ್ರುತಪಡಿಸಿರುವುದು ಚರ್ಚಾಸ್ಪದವಾಗಿದೆ. ಇದ
ಕ್ಕಿಂತಲೂ ಚರ್ಚಾಸ್ಪದವಷ್ಟೇ ಅಲ್ಲ ಅಸಂಭಾವ್ಯವೂ ಆದ ಅವರ ಅಭಿಪ್ರಾಯ
ವೆಂದರೆ ನಿಜಗುಣ ಶಿವಯೋಗಿಗಳ ತಂದೆ ತಾಯಿಗಳು ಮೈಸೂರು ಜಿಲ್ಲಾ ಮಳವಳ್ಳಿ
ತಾಲ್ಲೂಕಿನ ಕಲ್ಲಗುಣಿ ಗ್ರಾಮದ ಗುರುಬಸವಪ್ಪದೇವರು-ಬಸವರಾಜಮ್ಮನವರು
ಎಂಬುದು. ಹೀಗೆಲ್ಲಾ ಹೇಳುವುದಕ್ಕೆ ವಿದ್ವಾನ್ ಬಸವರಾಜಯ್ಯನವರಿಗೆ ದೊರೆತಿ
ರುವ ಆಧಾರವೆಂದರೆ— ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ
ಸಂಸ್ಥೆಯಲ್ಲಿರುವ K. 175 ನೇ ನಂಬರಿನ ಓಲೆಯಕಟ್ಟಿನ ಒಬ್ಬ ಪ್ರತಿಕಾರನು
ಕ್ರಿ. ಶ. 1744ರ ಸುತ್ತುಮುತ್ತಿನಲ್ಲಿ ಆ ಕಟ್ಟಿನೊಳಕ್ಕೆ ಕೆಲವು ಗ್ರಂಥಗಳನ್ನು
ಹೊಸದಾಗಿ ಸ್ವತಃ ಬರೆದು ಸೇರಿಸಿದ ಸಂಬಂಧವಾಗಿ ಅವನು ಆಡಿರುವ ಕೆಲವು
ಮಾತುಗಳು : "ರೇವಣಾರಾಧ್ಯರ ಸ್ಥಳದ ಸಂಪ್ರದಾಯಕರಾದ ಕಲ್ಲುಕುಣಿಯ
ಗುರುಬಸಪ್ಪದ್ಯಾವರವರ ಸುಪುತ್ರರಾದಂಥ ಚೆನ್ನವೀರದ್ಯಾವರವರ ಸಹೋದರರಾ
ದಂಥ ಮತೋದ್ಧಾರಕರಾದಂಥ ನಿಜಗುಣದ್ಯಾವರ ಪುಸ್ತಕಕ್ಕೆ ಸತ್ಯಾಗಾಲದ
ಸ್ಥಳದ ವಡೇರಪಾಳ್ಯದ ಸಿದ್ಧನಂಜಯ್ಯನವರ ಕುಮಾರ ಶಿವಲಿಂಗಯ್ಯ ಸೇರ್ಪಡೆ
ಮಾಡಿದ ಶಾಸ್ತ್ರಗಳ ವಿವರ" ಎಂದು ಮುಂತಾದುದು.

ಅಂದರೆ K. 175ನೇ ಪ್ರತಿಯಲ್ಲಿ ಕುರಿತಿರುವ ನಿಜಗುಣದ್ಯಾವರು
ಸುಪ್ರಸಿದ್ಧರಾದ ನಿಜಗುಣಶಿವಯೋಗಿಗಳಲ್ಲದೆ ಬೇರೆಯಲ್ಲವೆಂದು ಬಸವರಾಜಯ್ಯ
ನವರು ತೀರ್ಮಾನಿಸಿಕೊಂಡಂತಾಯಿತು. ಈ ತೀರ್ಮಾನಕ್ಕೆ ಅವರಿಗಿರುವ ಏಕೈಕ
ಆಧಾರವೆಂದರೆ ಮೇಲೆ ಹೇಳಿದ ಪ್ರತಿಕಾರನ ಒಕ್ಕಣೆಯಲ್ಲಿನ ನಿಜಗುಣದ್ಯಾವರು
"ಮತೋದ್ಧಾರಕ" ರೆಂದು ವಿಶೇಷಿಸಲ್ಪಟ್ಟಿದ್ದಾರೆಂಬುದು— ತೀರ ಹುಲ್ಲುಕಡ್ಡಿಯ
ಆಧಾರವಿದು. ಮತ್ತು (ಷಡಕ್ಷರಿಯು ನಿಜಗುಣರನ್ನು ಸ್ತುತಿಸಿರುವುದು ತಾನು
ಕ್ರಿ.ಶ. 1654ರಲ್ಲಿ ಬರೆದ ರಾಜಶೇಖರ ವಿಳಾಸದಲ್ಲಿಯಾದ್ದರಿಂದ) ಈ ಕ್ರಿ.ಶ.1744ರ
ಹೊತ್ತಿಗೆ ಕಡೆಯಪಕ್ಷ ನೂರುವರ್ಷ ವಯಸ್ಸಿನವರಾಗಿದ್ದ ಶ್ರೀ ನಿಜಗುಣ ಶಿವ
ಯೋಗಿಗಳನ್ನು ಯೋಗಿ-ಶಿವಯೋಗಿ ಎಂಬ ಯಾವ ವಿಶೇಷಣವೂ ಇಲ್ಲದೆ
ಶ್ರೀಕಾರವೂ ಇಲ್ಲದೆ ಕೇವಲ ನಿಜಗುಣದ್ಯಾವರು ಎಂದು ಹೆಸರಿಸಿರುವುದು ಶಿವಾ
ಚಾರ ಸಂಪನ್ನನಾದ ಯಾವನೋ ಒಬ್ಬ ನಿಜಗುಣದೇವರಿಗೆ ಅನ್ವಯಿಸೀತೇ ಹೊರತು
ಶಂಭುಲಿಂಗನ ಬೆಟ್ಟದ ಪ್ರಸಿದ್ಧರಾದ ನಿಜಗುಣ ಶಿವಯೋಗಿಗಳಿಗಲ್ಲ. ಒಬ್ಬ ಶಿವ

ಶಿವಯೋಗಿಯ ಮಹಿಮೆ ವಿದ್ವತ್ತು, ಕೃತಿ ಯೋಗಸಿದ್ಧಿ ಮುಂತಾದುವನ್ನು ಬಿಟ್ಟು ಅವರ ಹುಟ್ಟಿದೂರು ತಂದೆ ತಾಯಿ ಸಹೋದರ ಮುಂತಾದುವನ್ನು "ಮಹೋದ್ಧಾರಕ" ನೆಂಬ ಬಿರುದಾಂಕಿತ ಸಹಿತವಾಗಿಯೇ ಆಗಲಿ ಪ್ರಸ್ತಾಪಿಸಿರುವುದನ್ನು ನಿಜಗುಣ ಶಿವಯೋಗಿಗಳಿಗೇ ಅಲ್ಲ-ಅಂಥವರಾರಿಗೇ ಆಗಲಿ ಸಮನ್ವಯಿಸಿಕೊಳುವುದು ಎಂದಿಗೂ ಸರಿಯಾಗುವುದಿಲ್ಲ.

ನಿಜಗುಣಶಿವಯೋಗಿಗಳು ವೀರಶೈವಧರ್ಮಕ್ಷೇತ್ರದಲ್ಲಿ ಶಿವಯೋಗಿಗಳೆಂದೂ, ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ದಾರ್ಶನಿಕಕವಿಗಳೆಂದೂ, ಕರ್ನಾಟಕ ಸಂಗೀತಕ್ಷೇತ್ರದಲ್ಲಿ ಮಹಾವಾಗ್ಗೇಯಕಾರರೆಂದೂ ಹೆಸರುವಾಸಿಯಾಗಿದ್ದಾರೆ. ಅವರ ಕೃತಿಗಳನ್ನು ಅಧ್ಯಯನ ಮಾಡುವುದು ನಮ್ಮ ಕರ್ತವ್ಯಗಳಲ್ಲಿ ಗಣ್ಯವಾಗಬೇಕು.

ಮೈಸೂರು — ಎಲ್. ಬಸವರಾಜು
3-4-1989

# ಸಂಪಾದಕರ ಅರಿಕೆ

ಶ್ರೀಮನ್ನಿಜಗುಣ ಶಿವಯೋಗಿಗಳು ವೀರಶೈವ ಮಹಾನುಭಾವಿಗಳು ಮತ್ತು ಅನುಭಾವ ಸಾಹಿತ್ಯವನ್ನು ರಚಿಸಿ ಕನ್ನಡ ವಾಙ್ಮಯ ಲೋಕದಲ್ಲಿ ಪ್ರಸಿದ್ಧರೂ ಆಗಿದ್ದಾರೆ. ಇವರನ್ನು ಕವಿಗಳು ಎನ್ನುವುದಕ್ಕಿಂತ "ದಾರ್ಶನಿಕ ಸಾಹಿತಿ" ಎಂದು ಕರೆಯುವುದೇ ಉಚಿತ. ಇವರು ಎಂಟು ಕೃತಿಗಳನ್ನು ರಚಿಸಿದ್ದಾರೆ.

(1) ಅರುವತ್ತು ಮೂರು ಪುರಾತನರ ತ್ರಿವಿದಿ

(2) ಅನುಭವಸಾರ

(3) ಪರಮಾನುಭವ ಬೋಧೆ

(4) ಪರಮಾರ್ಥ ಗೀತೆ

(5) ಪರಮಾರ್ಥ ಪ್ರಕಾಶಿಕೆ

(6) ಕೈವಲ್ಯ ಪದ್ಧತಿ

(7) ವಿವೇಕ ಚಿಂತಾಮಣಿ

(8) ಸ್ವರೂಪ ಸಿದ್ಧಿ ಟೀಕು—ಇದು ಪರಂಜೋತಿಯತಿಯ ಅನುಭವ ಮುಕುರವೆಂಬ ಕೃತಿಯಲ್ಲಿನ ಮೂರನೇ ಭಾಗವಾದ ಮಹಾವಾಕ್ಯ ಕಾಂಡಕ್ಕೆ ಬರೆದ ಟೀಕು. ಇದನ್ನು ವಿದ್ವಾನ್ ಎಂ. ಎಸ್. ಬಸವರಾಜಯ್ಯನವರು, ನಿವೃತ್ತ ಸಹಾಯಕ ಸಂಶೋಧಕರು O.R.I. ಮೈಸೂರು– 1974ರಲ್ಲಿ ಸಂಪಾದಿಸಿ ಪ್ರಕಟಿಸಿರುತ್ತಾರೆ. ಇದುವರೆವಿಗೂ ನಿಜಗುಣರ ಕೃತಿಗಳು ಏಳು ಎಂದೇ ಗ್ರಹಿಸಲಾಗಿತ್ತು. 'ಸ್ವರೂಪ ಸಿದ್ಧಿ' ಕೃತಿಯು ದೊರೆತು ಅವರ ಕೃತಿಗಳ ಸಂಖ್ಯೆ ಎಂಟಾಯಿತು.

ನಿಜಗುಣ ಶಿವಯೋಗಿಗಳು ತಮ್ಮ 'ಕೈವಲ್ಯ ಪದ್ಧತಿ' ಯಿಂದ ಕನ್ನಡ ನಾಡಿನಲ್ಲೆಲ್ಲ ಸುಪರಿಚಿತರು. ಈ ಕೃತಿಯಲ್ಲಿನ 'ಸ್ವರ ವಚನ' ಗಳು ತತ್ವದ ಪದಗಳೆಂದೇ ಹೆಸರುವಾಸಿಯಾಗಿವೆ, ಪಂಡಿತ ಪಾಮರರೆಲ್ಲರ ಹೃದಯದಲ್ಲಿ ನೆಲೆಗೊಂಡಿವೆ. ಇದಕ್ಕೆ ಕಾರಣ ಈ ಹಾಡುಗಳಲ್ಲಿನ ಸರಳವಾದ ಭಾಷೆ ಮತ್ತು ಓದಿದಕೂಡಲೆ ಅಥವ ಕೇಳಿದ ಕೂಡಲೆ ತೊಡಕಿಲ್ಲದೆ ಅರ್ಥವಾಗುವ ತತ್ವ ನಿರೂಪಣೆ.

**ಕಾಲವಿಚಾರ:** ನಿಜಗುಣರ ಕಾಲದ ಬಗೆಗೆವಿಚಾರ ಮಾಡುವುದಾದರೆ,ಇವರು ತಮ್ಮ ಕೃತಿಗಳಲ್ಲಿ ತಮ್ಮ ಬಗೆಗೆ ಯಾವ ಸುಳಿವನ್ನೂ ತಿಳಿಸಿಲ್ಲ. ಹೀಗಾಗಿ ಇದೊಂದು ಜಟಿಲವಾದ ಸಮಸ್ಯೆಯಾಗಿದೆ.ನಿಜಗುಣ ಶಿವಯೋಗಿಗಳು ವೀರಶೈವರಲ್ಲಿ 'ಗುರುಮಠ'ದ ಪರಂಪರೆಗೆ ಅಥವ ಅಚಾರ್ಯ ಪರಂಪರೆಗೆ ಸೇರಿದವರಾಗಿದ್ದಾರೆ. ಈ ಕಾರಣದಿಂದಲೇ ಏನೋ ಇವರು ಬಸವಾದಿ ಶಿವಶರಣರನ್ನು ತಮ್ಮ ಕೃತಿಗಳಲ್ಲಿ ಎಲ್ಲಿಯೂ ಸ್ಮರಿಸದಿರುವುದು ಅಚ್ಚರಿಯ ವಿಷಯವಾಗಿದೆ.

ಸು. 1450 ರಲ್ಲಿದ್ದ ಪರಂಜೋತಿಯತಿಯು "ಅನುಭವ ಮುಕುರಕ್ಕೆ" ಸ್ವರೂಪಸಿದ್ಧಿ ಟೀಕೆಯನ್ನು ನಿಜಗುಣರು ಬರೆದಿರುವುದರಿಂದ ಇವರು 1450 ಕ್ಕಿಂತ ಈಚಿನವರೆಂಬುದು ಖಚಿತ. ಸು 1655 ರಲ್ಲಿ ರಾಜಶೇಖರ ವಿಳಾಸವನ್ನು ಬರೆದು ಮುಗಿಸಿದ ಮಹಾಕವಿ ಷಡಕ್ಷರದೇವನು ಇವರನ್ನು ತನ್ನ ಕಾವ್ಯದಲ್ಲಿ ನೆನೆದಿರುವುದರಿಂದ ಇವರು 1655 ಕ್ಕಿಂತ ಹಿಂದಿನವರೆಂಬುದೂ ಇದರಿಂದ ಸಿದ್ಧವಾಗುತ್ತದೆ.

ಸು. 1650 ರಲ್ಲಿದ್ದ ಸಿದ್ಧನಂಜೇಶನು ತನ್ನ ಗುರುರಾಜ ಚಾರಿತ್ರದಲ್ಲಿ ರೇವಣಸಿದ್ಧ, ಏಕೋರಾಮ, ಮರುಳುಸಿದ್ಧ, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯರನ್ನು ಕಳಶದಾಚಾರ್ಯರೆಂದು ತಿಳಿಸುತ್ತಾನೆ. ಎಂದರೆ 1650 ರ ಹೊತ್ತಿಗೆ ಐವರು ಆಚಾರ್ಯರೆಂದೂ, ಅವರು ಕಳಶಾಚಾರ್ಯರೆಂಬುದು ನಿರ್ವಿವಾದ ವಿಷಯವಾಗಿದೆ. ಆದರೆ, ನಿಜಗುಣರು ತಮ್ಮ ಕೃತಿಯಾದ ವಿವೇಕಚಿಂತಾಮಣಿಯಲ್ಲಿ ವಿಶೇಷ ವೀರಶೈವನ ದೀಕ್ಷಾಕ್ರಮದಲ್ಲಿ" ..........–ಪರಶಿವನ ಸಂಜ್ಞಕನಾಗಿ ಕುಳ್ಳಿರ್ದಾಚಾರ್ಯನೇ ಮಧ್ಯಕಳಶವನುಳಿದು ಪೂರ್ವಾದಿ ನಾಲ್ಕು ಕಳಶಂಗಳನೇ ಕ್ರಮದಿಂದ ರೇವಣಸಿದ್ಧ, ಮರುಳುಸಿದ್ಧ, ರಾಮದೇವ, ಪಂಡಿತಾರಾಧ್ಯರೆಂಬಾಚಾರ್ಯ ಸಂಪ್ರದಾಯಕರಾದ ಬೇರೆ ಬೇರೆ ಮಠ ಪೀಠಾಸನಾದಿ ಲಕ್ಷಣ ಲಕ್ಷಿತರಾದ ———''ಎಂದು ಹೇಳಿರುವುದರಿಂದ ಆಚಾರ್ಯರು ಚತುರಾಚಾರ್ಯರೆಂಬುದು ನಿಜಗುಣರ ನಿಲುವು.ಎಂದರೆ ವಿಶ್ವಾರಾಧ್ಯರ ಸೇರ್ಪಡೆಗಿಂತಮೊದಲೇ ನಿಜಗುಣರಿದ್ದರೆಂಬುದು ಇದರಿಂದ ತಿಳಿದು ಬರುವ ಅಂಶ. ಅಲ್ಲದೆ ವಿವೇಕಚಿಂತಾಮಣಿಯಲ್ಲಿನ ಭಾಷೆಯನ್ನು ಗಮನಿಸಿದರೆ, ಇದರಲ್ಲಿನ ಕನ್ನಡವು ಹೊಸಕನ್ನಡದ ಸಮೀಪಕ್ಕೆ ಬರುತ್ತದೆ. ಆದ್ದರಿಂದ ನಿಜಗುಣ ಶಿವಯೋಗಿಗಳ ಕಾಲವನ್ನು 1600 ಎಂದು ಸಧ್ಯಕ್ಕೆ ತೀರ್ಮಾನಿಸಬಹುದು. ಅಲ್ಲದೆ ನಿಜಗುಣರು ಷಡಕ್ಷರದೇವನ ಕಾಲಕ್ಕೆ ಅತಿದೂರವಾಗಿರಲು ಸಾಧ್ಯವಿಲ್ಲ.

ವಿವೇಕ ಚಿಂತಾಮಣಿ : ವಿವೇಕ ಚಿಂತಾಮಣಿಯು ಒಂದು ಗದ್ಯಗ್ರಂಥ. ಇದರಲ್ಲಿ ಹತ್ತು ಪರಿಚ್ಛೇದಗಳಿವೆ. ಸಮಗ್ರ ಭಾರತೀಯಜ್ಞಾನವನ್ನು ಅಥವಾ ವಿದ್ಯೆಯನ್ನು ಬಹು ಸಂಕ್ಷೇಪವಾಗಿ ತಿಳಿಸಿಕೊಡುವ ಪ್ರಯತ್ನ ಈ ಕೃತಿ ರಚನೆಯ ಉದ್ದೇಶವಾಗಿದೆ. ಇದೊಂದು ಭಾರತೀಯ ವಿದ್ಯೆಯ ವಿಶ್ವಕೋಶವೆಂದೂ ಕರೆಯಬಹುದು. "ಸ್ಮೃತಿ ಪುರಾಣೇತಿಹಾಸ ಪುರಾತನೋಕ್ತಿಗಳನುಸಾರದಿಂದನುಭವಿಗಳಹುದೆಂಬಂತೆ ಸ್ವಕಪೋಲ ಕಲ್ಪಿತವಲ್ಲದ ಸಾರತರಮಾದ ಸತ್ಯಾರ್ಥಗಳನೆ ಸಂಗ್ರಹಿಸಿ— —— ಬೆಳುಗನ್ನಡಮಾದ ವಚನ ರಚನೆಗಳಿಂ ರಚಿಸಿರುವುದಾಗಿ" ನಿಜಗುಣರು ಹೇಳುತ್ತಾರೆ.

ವಿವೇಕ ಚಿಂತಾಮಣಿಯ ಪ್ರಥಮ ಪರಿಚ್ಛೇದದಲ್ಲಿ ಬರುವ "ಸಪ್ತಾವಸ್ಥಾ ಸಮುನ್ವಯ" ವೆಂಬ ವಿಷಯದ ವಿವರಣೆಯನ್ನು ಗಮನಿಸಿದಾಗ ಛಾಂದೋಗ್ಯೋ

ಪನಿಷತ್ತಿನ "ದಶಮಸ್ತ್ವಮಸಿ" ಎಂಬ ವಾಕ್ಯದ ವಿವರಣೆಯನ್ನು ಈ ವಿಷಯದಲ್ಲಿ ನಿಜಗುಣಶಿವಯೋಗಿಗಳು ಕನ್ನಡದಲ್ಲಿ ಬಹು ಸುಲಭವಾಗಿ ಹೇಗೆ ನಿರೂಪಿಸಿದ್ದಾರೆ ಎಂಬುದನ್ನು ಓದಿಯೇ ತಿಳಿಯಬೇಕು. (ಇಲ್ಲಿ, ರಾ|| ಆರ್. ನರಸಿಂಹಾಚಾರ್ಯರು ಬರೆದಿರುವ ನಗೆಗಡಲು ಕೃತಿಯ ಗಾಂಪರ ಒಂದು ಘಟನೆಯು ನೆನಪಿಗೆ ಬರುತ್ತದೆ) ಎಂತಹ ಜಟಿಲವಾದ ವಿಷಯವೇ– ಅದು ಸಿದ್ಧಾಂತವೇ–ಆಗಿರಲಿ ಅದನ್ನು ಎಷ್ಟು ಸುಲಭವಾಗಿ ಕನ್ನಡದಲ್ಲಿ ತಿಳಿಸಬಲ್ಲರು ಎಂಬುದಕ್ಕೆ ಇದೊಂದು ಉದಾಹರಣೆಯೇ ಸಾಕು. ಓದುಗರ ಮುಂದೆ ಅವರ ಈ ಕೃತಿಯೇ ಇರುವಾಗ ಇನ್ನು ಇದರ ಪರಿಚಯ ಸಾಕು.

ಗ್ರಂಥ ಸಂಪಾದನಾ ವಿಚಾರ : ವಿವೇಕಚಿಂತಾಮಣಿಯು ಮೊದಲಿಗೆ 1863 ರಲ್ಲಿ ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳಿಂದ ಸಂಪ್ರದಾಯ ಶುದ್ಧವಾಗಿ ಪರಿಶೋಧಿಸಿ ಪ್ರಕಟಿಸಲಾಗಿದೆ. ಇದು ಬೆಂಗಳೂರಿನಲ್ಲಿ ಮುದ್ರಿತವಾಗಿದೆ.

ಇದನ್ನೇ 1879 ರಲ್ಲಿ ಮದ್ರಾಸಿನಲ್ಲಿ ಮುದ್ರಿಸಿ ಪ್ರಕಟಿಸಲಾಗಿದೆ. ಇದು ವಿವೇಕ ಚಿಂತಾಮಣಿಯ ಎರಡನೇ ಆವೃತ್ತಿ ಎನ್ನಬಹುದು.

ಇದನ್ನೇ 1895 ರಲ್ಲಿ ಬಳ್ಳಾರಿಯಲ್ಲಿ ಮುದ್ರಿಸಿ ಪ್ರಕಟಿಸಲಾಗಿದೆ. ಇದು ವಿವೇಕ ಚಿಂತಾಮಣಿಯ ಮೂರನೇ ಆವೃತ್ತಿ ಎನ್ನಬಹುದು.

ಇದನ್ನೇ 1925ರಲ್ಲಿ ಟಿ.ಎನ್. ಕೃಷ್ಣಯ್ಯಶೆಟ್ಟರು ಬೆಂಗಳೂರಿನಲ್ಲಿ ಪ್ರಕಟಿಸಿರುತ್ತಾರೆ. ಇದು ವಿವೇಕ ಚಿಂತಾಮಣಿಯ ನಾಲ್ಕನೇ ಆವೃತ್ತಿ ಎನ್ನಬಹುದು. ಇವುಗಳಲ್ಲಿ ಕೊನೆಯ ಆವೃತ್ತಿಯು ನನ್ನಲ್ಲಿದೆ. ಹಾಗು ಮೊದಲ ಪ್ರಕಟಣೆಯನ್ನು ನೋಡಿರುತ್ತೇನೆ. ಉಳಿದ ಪ್ರಕಟಣೆಗಳ ಬಗೆಗೆ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ "ಹಸ್ತಪ್ರತಿ'' ವಿಭಾಗದ ಸಂಪಾದಕರಾದ ಶ್ರೀ ಎಸ್. ಶಿವಣ್ಣನವರು ಪತ್ರಮುಖೇನ ತಿಳಿಸಿರುತ್ತಾರೆ.

1969ರಲ್ಲಿ ಪ್ರೊ|| ಜಿ.ಎಮ್. ಉಮಾಪತಿ ಶಾಸ್ತ್ರಿಗಳು, ಪ್ರಕಟಿತ ವಿವೇಕ ಚಿಂತಾಮಣಿಗಳಲ್ಲಿನ ಪ್ರಕ್ಷಿಪ್ತಭಾಗಗಳನ್ನು ಗುರುತಿಸಿ, ಹಸ್ತಪ್ರತಿಗಳಲ್ಲಿದ್ದ ಸರಿಯಾದ ಪಾಠವನ್ನೇ ಆಧರಿಸಿ 12 ಓಲೆ ಪ್ರತಿಗಳಸಹಾಯದಿಂದ ವಿವೇಕ ಚಿಂತಾಮಣಿಯನ್ನು ಸಂಪಾದಿಸಿರುತ್ತಾರೆ. ಇದನ್ನು ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಲದವರು ಪ್ರಕಟಿಸಿರುತ್ತಾರೆ. ಇದು ವಿವೇಕ ಚಿಂತಾಮಣಿಯ ಐದನೇ ಆವೃತ್ತಿ ಎನ್ನಬಹುದು. ಇದೇ ಪುನಃ 1988ರಲ್ಲಿ ಪುನರ್ಮುದ್ರಣವಾಗಿ ಪ್ರಕಟಿತವಾಗಿದೆ.

ವಿವೇಕ ಚಿಂತಾಮಣಿಯು ಎಷ್ಟುಸಾರಿ ಪ್ರಕಟಣಗೊಂಡರೂ ಸಾಲದು. ಇದು ಇನ್ನೂ ಪರಿಷ್ಕರಣಗೊಂಡು ಪ್ರಕಟವಾಗಬೇಕು ಎನ್ನುವ ಸದುದ್ದೇಶದಿಂದ ಈ ಕೃತಿಯ ಸಂಪಾದನಾ ಕಾರ್ಯಕ್ಕೆ ಕೈಹಾಕಿರುತ್ತೇನೆ. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ಭಂಡಾರದಲ್ಲಿರುವ.

1, ಕೆ.1170  2. ಕೆ.753  3. ಕೆ.276

4. ಕೆ.280  5. ಕೆ.763  6. ಕೆ.14021

ಈ ಆರು ಪ್ರತಿಗಳ ಸಹಾಯದಿಂದ ಈ ಕೃತಿಯನ್ನು ಸಂಪಾದಿಸಿರುತ್ತೇನೆ. ಈ ಮೇಲಿನ ಪ್ರತಿಗಳಲ್ಲಿ ಕೆ.1170 ಪ್ರತಿಯೇ ಉತ್ತಮವಾದ ಪ್ರತಿಯಾಗಿದೆ. ಉಳಿದ ಪ್ರತಿಗಳನ್ನು ಸಮಯೋಚಿತವಾಗಿ ಉಪಯೋಗಿಸಿ ಕೊಂಡಿರುತ್ತೇನೆ.

ವಿವೇಕಚಿಂತಾಮಣಿಯ ಹಸ್ತಪ್ರತಿಗಳಲ್ಲಿ ವಿಷಯಗಳ ಶೀರ್ಷಿಕೆಗಳು ಒಂದೇ ತೆರನಾಗಿರುವುದಿಲ್ಲ. ಹೀಗಿರುವಾಗ ಉಚಿತವಾದ ಶೀರ್ಷಿಕೆಗಳನ್ನು ಉಳಿಸಿ ಕೊಂಡಿರುತ್ತೇನೆ. ಈಗ ಪ್ರಕಟಿಸುತ್ತಿರುವ ಈ ಆವೃತ್ತಿಯು ಜನಪ್ರಿಯ ಆವೃತ್ತಿಯಾಗಿರುವುದರಿಂದ ಪಾಠಾಂತರಗಳನ್ನು ಕೊಟ್ಟಿರುವುದಿಲ್ಲ. ಇಂತಹ ಕೃತಿಯನ್ನು ಸಂಪಾದಿಸಿ ಪ್ರಕಟಿಸುವಾಗ ನನ್ನ ಜ್ಞಾನಾಭಾವದಿಂದ ತಪ್ಪುಗಳು ಉಳಿದುಕೊಂಡಿರುವುದು ಸಹಜ. ಅದಕ್ಕೆ ಅನುಕೂಲವಾಗಿ ಮುದ್ರಾರಾಕ್ಷಸನೂ ಸೇರಿಕೊಂಡು ಆ ತಪ್ಪು ಇನ್ನೂ ಹೆಚ್ಚಿರಬಹುದು. ಪ್ರಾಜ್ಞರು ಅವುಗಳನ್ನು ದಯವಿಟ್ಟು ತಿಳಿಸಿಕೊಟ್ಟು ಉಪಕರಿಸಬೇಕಾಗಿ ಪ್ರಾರ್ಥನೆ.

ಇಂತಹ ಒಂದು ಕೃತಿಯನ್ನು ಸಂಪಾದಿಸಬೇಕೆಂಬ ನನ್ನ ಬಯಕೆಯನ್ನು ನನ್ನ ವಿದ್ಯಾಗುರುಗಳಾದ ಡಾ॥ ಎಲ್. ಬಸವರಾಜು ನಿವೃತ್ತ ಪ್ರಾಧ್ಯಾಪಕರು ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಅವರೊಡನೆ. ಭಯದಿಂದ ನಿವೇದಿಸಿಕೊಂಡೆನು. ಅವರು ಕೂಡಲೆ ಬಹಳ ಸಂತೋಷಪಟ್ಟು ನನ್ನ ಬೆನ್ನು ತಟ್ಟಿ ಪ್ರೋತ್ಸಾಹವನ್ನಿತ್ತಿದ್ದಾರೆ. ಈ ಕೃತಿಯ ಸಂಪಾದನೆಗೆ ಅಮೂಲ್ಯ ಸಲಹೆಗಳನ್ನು ಕೊಟ್ಟಿರುತ್ತಾರೆ. ಹಿಂದಿನ ಆವೃತ್ತಿಗಳಿಗಿಂತ ನಿಮ್ಮ ಆವೃತ್ತಿಯಲ್ಲಿ ಏನಾದರೂ ನಾವೀನ್ಯತೆ ಇರಬೇಕೆಂದು ತಿಳಿಸಿ ನನ್ನ ಕಾರ್ಯಕ್ಕೆ ಉತ್ತೇಜನವನ್ನಿತ್ತಿದ್ದಾರೆ. ಈ ಸಂಪಾದನಾ ಕೃತಿಗೆ ನೀವೇ ಮುನ್ನುಡಿಯನ್ನು ಬರೆದುಕೊಡಬೇಕೆಂದು ಕೇಳಿಕೊಳ್ಳಲಾಗಿ, ಶಿಷ್ಯವಾತ್ಸಲ್ಯದಿಂದ ಮುನ್ನುಡಿಯನ್ನು ಬರೆದುಕೊಟ್ಟು ತನ್ಮೂಲಕ ಆಶೀರ್ವಾದಮಾಡಿದ್ದಾರೆ. ಈ ರೀತಿ ಪ್ರೋತ್ಸಾಹವಿತ್ತು ಮಾರ್ಗದರ್ಶನಮಾಡಿ ಕೊಟ್ಟ ವಿದ್ವಾಂಸರೂ, ನನ್ನಗುರುಗಳೂ ಆದ ಡಾ॥ ಎಲ್. ಬಸವರಾಜು ಅವರಿಗೆ ಭಕ್ತಿಪೂರ್ವಕವಾದ ವಂದನೆಗಳು.

ಅತ್ಯಂತ ಶ್ರೇಷ್ಠವಾದ ಈ ಗ್ರಂಥವನ್ನು ಸಂಪಾದಿಸಲು ಹಸ್ತ ಪ್ರತಿಗಳನ್ನಿತ್ತು ಸಹಕರಿಸಿದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರು, ಜ್ಞಾನಭಾರತಿ, ಬೆಂಗಳೂರು ಇವರಿಗೂ, ಮತ್ತು ಹಸ್ತ ಪ್ರತಿವಿಭಾಗದ ಸಂಪಾದಕರಾದ ಶ್ರೀ ಎಸ್. ಶಿವಣ್ಣನವರಿಗೂ ಕೃತಜ್ಞತೆಗಳು.

ಈ ಕೃತಿಯು ಪ್ರಕಟವಾಗಲು ಕಾರಣರಾದ ಮಿತ್ರರುಗಳ ಉಪಕಾರವನ್ನು ಮರೆಯಲಾದೀತೆ ? ಆತ್ಮೀಯ ಗೆಳೆಯರಾದ ಇವರನ್ನು ಈ ಸಂದರ್ಭದಲ್ಲಿ ಸ್ಮರಿಸಿ ಕೊಳ್ಳುವುದು ಶ್ರೇಯಸ್ಕರ. ಶ್ರೀಯುತರುಗಳಾದ, ಶ್ರೀ ಸ್ವಪ್ರಭಾನಂದಾರಾಧ್ಯ, ಮೈಸೂರು ಕಾರನ್ ಮೆಷನರಿ. ಕಂ. ದೇವರಾಜಅರಸ್ ರಸ್ತೆ ಮೈಸೂರು. ಶ್ರೀ ಸಿ.ಶಿವಾನಂದ, ಗಜಾನನ ಸ್ಟೋರ್ಸ್, ಚಾಮರಾಜ ಜೋಡಿ ರಸ್ತೆ, ಮೈಸೂರು. ಶ್ರೀ ಜಿ.ಎನ್. ಕೃಷ್ಣಮೂರ್ತಿ ಕೃಷ್ಣ ಟ್ರೇಡರ್ಸ್, ತ್ಯಾಗರಾಜ ರಸ್ತೆ ಮೈಸೂರು, ಶ್ರೀಯುತ ಎಂ.ಎಸ್. ಸೋಮಶೇಖರ್, ನಾಗಣ್ಣಸ್ಟೋರ್ಸ್, ಚಾಮರಾಜ ಜೋಡಿ ರಸ್ತೆ, ಮೈಸೂರು, ಇವರುಗಳಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಇನ್ನೂ ನನ್ನ ಸಹೋದ್ಯೋಗಿ ಬಂಧುಗಳಾದ ಶ್ರೀಯುತ ಡಿ.ಎಂ ಸುಬ್ಬಯ್ಯ, ಶ್ರೀಯುತ ಜಿ. ತಿಮ್ಮಪ್ಪ, ಶ್ರೀಯುತ ಕೆ. ಸದಾಶಿವಣ್ಣ, ಶ್ರೀಯುತ ಎಂ.ಎಸ್.ಕೆ. ನರಹರಿಬಾಬು, ಶ್ರೀಯುತ, ಎಂ. ಹುಚ್ಚಯ್ಯ, ಶ್ರೀಮತಿ, ಎಂ.ಬಿ. ಸರಸ್ವತಿ, ಇವರ ಉಪಕಾರವನ್ನು ಮರೆಯುವಂತಿಲ್ಲ. ಇವರೆಲ್ಲರಿಗೂ ವಿಶ್ವಾಸಪೂರ್ವಕವಾದ ವಂದನೆಗಳು.

ಇನ್ನು ಕೊನೆಯದಾಗಿ, ಈ ಗ್ರಂಥವನ್ನು ಬಹುಚೆನ್ನಾಗಿ ಮುದ್ರಿಸಿಕೊಟ್ಟ ಹಾಗು ಪ್ರೂಫ್‌ಗಳನ್ನು ಓದುವಲ್ಲಿ ಸಹಕರಿಸಿದ ನಂದಿಕೇಶ್ವರ ಎಲೆಕ್ಟ್ರಿಕ್ ಪ್ರಿಂಟಿಂಗ್ ಪ್ರೆಸ್‌ನ ಮಾಲೀಕರಾದ ಶ್ರೀಮಾನ್ ಎಸ್. ಶಿವಕುಮಾರಸ್ವಾಮಿಗಳು ಮತ್ತು ಇವರ ಪುತ್ರರಾದ ಹಾಗೂ ನನ್ನ ವಿದ್ಯಾರ್ಥಿಮಿತ್ರರಾದ ಶ್ರೀ ಎಸ್. ಜ್ಞಾನಶಂಕರ್ ಅವರಿಗೂ ನನ್ನ ನಮಸ್ಕಾರಗಳು.

ಯುಗಾದಿ
ಶುಕ್ಲ ಸಂವತ್
7–4–1989

ಜಿ.ಎ. ಶಿವಲಿಂಗಯ್ಯ

# ಪ್ರಕಾಶಕರ ನುಡಿ

ನಮ್ಮ ಪ್ರಕಾಶನದಲ್ಲಿ ಅತಿ ಮಹತ್ವದ ಕೃತಿಯಾದ ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯನ್ನು ಪ್ರಕಟಿಸುತ್ತಿದ್ದೇವೆ. ಪ್ರಕಟಣೆಗೆ ಅನುವು ಮಾಡಿ ಕೊಟ್ಟ ಸಂಪಾದಕರಾದ ಶ್ರಿ ಜಿ. ಎ. ಶಿವಲಿಂಗಯ್ಯನವರಿಗೆ ಕೃತಜ್ಞತೆಗಳು. ಅಂದವಾಗಿ ಮುದ್ರಿಸಿಕೊಟ್ಟ ನಂದಿಕೇಶ್ವರ ಎಲೆಕ್ಟ್ರಿಕ್ ಪ್ರೆಸ್‌ನ ಮಾಲೀಕರು ಹಾಗು ಅಲ್ಲಿನ ಸಿಬ್ಬಂದಿ ವರ್ಗದವರಿಗೂ ಅನಂತ ವಂದನೆಗಳು.

7–4–89 ಪ್ರಕಾಶಕರು
ಮೈಸೂರು.

# ವಿಷಯಾನುಕ್ರಮಣಿಕೆ

## ದ್ವಿತೀಯ ಪರಿಚ್ಛೇದ

## ತೃತೀಯ ಪರಿಚ್ಛೇದ

## ಚತುರ್ಥ ಪರಿಚ್ಛೇದ

## ಪಂಚಮ ಪರಿಚ್ಛೇದ



## ಷಷ್ಠಮ ಪರಿಚ್ಛೇದ

## ಸಪ್ತಮ ಪರಿಚ್ಛೇದ



## ಅಷ್ಟಮ ಪರಿಚ್ಛೇದ

## ನವಮ ಪರಿಚ್ಛೇದ



## ದಶಮ ಪರಿಚ್ಛೇದ

॥ ಶ್ರೀ ಶಂಭುಲಿಂಗಾಯ ನಮಃ ॥

# ವಿವೇಕ ಚಿಂತಾಮಣಿ

ಶ್ರೀಮದನೇಕ ಲೋಕಹಿತಮಾಗಿರೆ ವೇದ ಪುರಾಣ ಶಾಸ್ತ್ರದೊಳ್
ನೇಮಿಸಿ ತೋರ್ಪ ವಿಶ್ವವಿಷಯಂಗಳ ಸುಸ್ಥಿತಿಯಂ ವಿವೇಕ ಚಿಂ ।
ತಾಮಣಿಯೆಂದು ಸಲ್ವ ಪೆಸರಿಟ್ಟು ಮಹಾಕವಿತಾ ಪ್ರಬಂಧಮಂ
ಪ್ರೇಮದೆ ಪೇಳ್ವೆನಾನಿದನೆ ನೀನೊಲಿದಾಲಿಸು ಶಂಭುಲಿಂಗವೇ ॥

॥ ಗದ್ಯ ॥

ಶ್ರೀಮದನೇಕ ಭುವನ ಭವನಾರಂಭ ಮೂಲಸ್ತಂಭರೂಪ ಶಂಭುಲಿಂಗವಾದಿಯಾಗಿ ನಿರಾಭಾರಿ ದೇಶಿಕೋತ್ತಮ ಪರಿಯಂತಮಾದ ಗುರು ಪರಂಪರೆಗೆ ಮನೋವಾಕ್ಕಾಯಗಳಿಂದಭಿವಂದಿಸಿ, ೧

ಮತ್ತಮಾ ನಮಸ್ಕಾರಲಕ್ಷಣ ಮಂಗಲಾಚರಣಕ್ಕೆ ನಿರ್ವಿಘ್ನದಿಂ ಪ್ರಕರಣ ಪರಿಸಮಾಪ್ತಿ, ಶಿಷ್ಯ ಪ್ರಶಿಷ್ಯ ಪ್ರವಾಹ ಪರಿವರ್ತನೆ, ಕೇಳ್ವರ ಚಿತ್ತಸ್ವಸ್ಥತೆಗಳೆಂಬ ಫಲತ್ರಯ ಸಿದ್ಧವೆಂದು ನಿರ್ಧರಿಸಿ, ಬಳಿಕ ಅನಾದಿನಿರ್ಮಲ ಚಿದ್ರೂಪನಪ್ಪುದರಿಂ ಸರ್ವೋತ್ಕರ್ಷನಾಗಿ, ಸರ್ವಜ್ಞತ್ವ ಸರ್ವಕರ್ತೃತ್ವ ಸಹಿತನಾದ ಪರಮೇಶ್ವರ ಪ್ರಣೀತತ್ವದಿಂ ಪ್ರಮಾಣವೆನಿಸಿದಾಗಮಾಮ್ನಾಯ ಸಮ್ಮತದಿಂ, ಮತ್ತಮಾ ಉಭಯವೇ ಮೂಲವಾದ ಶ್ರುತಿ ಸ್ಮೃತಿ ಪುರಾಣೇತಿಹಾಸ ಪುರಾತನೋಕ್ತಿಗಳನುಸಾರದಿಂದನುಭವಿಗಳಹುದೆನಿಪಂತೆ ಸ್ವಕಪೋಲ ಕಲ್ಪಿತವಲ್ಲದ ಸಾಂತರಮಾದ ಸತ್ಯಾರ್ಥಂಗಳನೆ ಸಂಗ್ರಹಿಸಿ ಮುನ್ನುಳ್ಳ ಮಣಿಪುಂಜಮಂ ರಂಜನೆಗೆಯ್ದು ತರವರಿದು ಸರಂಗೊಳಿಸಿ ನವೀನ ಕಂಠಾಭರಣವೆನಿಸುವಂತೆ ಮುಮುಕ್ಷುಜನಂಗಳೀ ಜಗತ್ತಿನ ಸ್ಥಿತಿಗತಿಗಳಾವ ಪ್ರಕಾರದಿಂದಹವೆಂದರಸಿ ಬಳಲದಂತಭಿವ್ಯಕ್ತಮಾಗಿಲ್ಲಿಯೆ ಸಲ್ಲೀಲೆಯಿಂದರಿದು ಕೃತಾರ್ಥರಾಗಲೆಂದು, ನಿಜಗುಣಶಿವಯೋಗಿ ಬೆಳುಗನ್ನಡಮಾದ ವಚನರಚನೆಗಳಿಂ ವಿವೇಕ ಚಿಂತಾಮಣಿಯೆಂಬ ಪ್ರಕರಣಮಂ ಪೇಳ್ವನದೆಂತೆಂದಡೆ. ೨

## ಈಶ್ವರ ಕರ್ತೃತ್ವ :

ಪ್ರಥಮದಲ್ಲಿ ಚಕ್ಷುರಾದಿ ಬಾಹ್ಯೇಂದ್ರಿಯ ಗೋಚರಮಾಗಿ ತೋರುವಿ ಸಕಲಜಗತ್ತೆಲ್ಲಂ ಪೃಥು ಬುಧ್ನೋದರಾಕಾರದಿಂ ಸಾವಯವನಪ್ಪುದರಿಂ, ಘಟದಂತೆ ಕಾರ್ಯವಹುದಾಗಿ ಕುಲಾಲನಂತೆ ನಿಮಿತ್ತ ಕಾರಣನಾದೀಶ್ವರನಿಂ, ಚಕ್ರದಂಡಾದಿಕದಂತೆ ; ಪುಣ್ಯಾಪುಣ್ಯರೂಪಕರ್ಮವೆಂಬ ಸಹಕಾರೀಕಾರಣದಿಂ ಮೃತ್ತಿಕೆಯಂತೆ ; ಬಿಂದು ಮಾಯೆಯೆಂಬ ಶುದ್ಧಾಶುದ್ಧಮಾದ ಉಪಾದಾನಕಾರಣದಿಂ, ಗಮನಾಗಮನ ಸುಖದುಃಖಾದ್ಯನೇಕ ವ್ಯವಹಾರ ಭೇದದಿಂ ಭಿನ್ನರಾದಾತ್ಮರ ಭೋಗಮೋಕ್ಷಾರ್ಥಮಾಗಿ ಜನಿಸಿತ್ತೆಂದರಿಯಲ್ವೇಳ್ಕುಂ. ೩

ಬಳಿಕಲ್ಲಿ ಪ್ರಕೃತಿ ಪರಮಾಣು ಕಾಲ ಕರ್ಮಾದಿಗಳೇ ಜಗತ್ಕರ್ತೃಗಳಪ್ಪವು. ಈಶ್ವರನಲ್ಲೆಂದೊಡಾ ಪ್ರಕೃತಿ ಮೊದಲಾದವೆಲ್ಲಂ ಜಡರೂಪಂಗಳಾಗಿ ಚೈತನ್ಯಾಧಿಷ್ಠಾನಮಿಲ್ಲದೆ ತಾನೇ ಜಗನ್ನಿರ್ಮಾಣಕಂಗಳಲ್ಲವೆಂಬುದೇ ಸಿದ್ಧಮಕ್ಕುಂ. ೪

ಬಳಿಕ್ಕಂತಾದೊಡೆ ಚೇತನನಾದ ಜೀವನೇ ಜಗತ್ಕರ್ತೃವಾಗಲೆಂದೊಡೆ, ಆತಂಗೆ ಕಿಂಚಿಜ್ಞತ್ವ, ಅದೃಷ್ಟಪರತಂತ್ರತ್ವ, ಅನೀಶ್ವರತ್ವಾದಿ ದೋಷಗಳುಂಟಾಗಿ ಜಗಮಿಂತು ಸೃಜಿಸಲು ಯೋಗ್ಯಮೆಂಬಾಳೋಚನೆಯಲ್ಲಿ ಹೇಂಗೆ ಸಮರ್ಥನಪ್ಪಂ. ಮತ್ತೇನೆಂದೊಡೆ ಪಾರಿಶೇಷನ್ಯಾಯದಿಂ ಪರಮೇಶ್ವರನೇ ಜಗತ್ಕರ್ತೃವೆಂದು ನಿಶ್ಚಿತಮಕ್ಕುಂ. ೫

ಬಳಿಕ ಜಗದ್ರೂಪ ಮಹಾಕಾರ್ಯಮಾದೊಡೆ, ರಥದಂತೆ ಬಹುಕರ್ತೃಗಳುಳ್ಳುದೆನಲಾ ರಥವು, ಆಚಾರ್ಯನಾದೋರ್ವನ ಸೂತ್ರದಿಂದ ಅಹುದಾಗಿಯುಂ, ಬೇರೆ ಬೇರೆ ಬಲ್ಲತನದ ಅಭಿಮಾನದಿಂ ತಮ್ಮತಮ್ಮನೆ ಪೋಷಿಸಿಕೊಳ್ಳಲುಳ್ಳನೇಕ ಕರ್ತೃಗಳಿಂದೊಂದು ಕಾರ್ಯವನುವಾಗದಾಗಿಯುಂ ಜಗದೀಶ್ವರನೋರ್ವನಾಗಲ್ವೇಳ್ಕುಂ. ೬

## ಈಶ್ವರನ ಗುಣಾವಳಿ :

ಬಳಿಕ ಎಲ್ಲ ಕಾಲದಲ್ಲಿಯೂ ಎಲ್ಲ ಠಾವಿನಲ್ಲಿಯೂ ಕಾರ್ಯೋದಯಮುಂಟಾಗಿಯುಂ ಕರ್ತೃವಾದೀಶ್ವರಂಗೆ ನಿತ್ಯತ್ವವ್ಯಾಪಕತ್ವಂಗಳುಂ ; ಆವಕಾರ್ಯವು ಅರಿವು ತ್ರಿದ್ದ ಸಮರ್ಥನಾದ ಆತನಿಂದಲ್ಲದಾಗದಾಗಿ ಕರ್ತೃವಾದೀಶ್ವರಂಗೆ ಸರ್ವಜ್ಞತ್ವ ಸರ್ವಶಕ್ತಿತ್ವಂಗಳುಂ ; ಕಾಲವೆಂತಮೂರ್ತಮಾಗಿ ಪಲ್ಲವಕುಸುಮಾದಿ ಸಾಧಕಮಪ್ಪುದಂತೆ ಸಕಲ ಕಾರ್ಯೋತ್ಪಾದಕನಾದೀಶ್ವರಂಗೆ ನಿಷ್ಕಲತ್ವಮುಂ ; ಸರ್ವಾತ್ಮರ ಹೃದಯದೊಳಂತರ್ಯಾಮಿಯಾಗಿಯುಂ, ಹೊರಗೆ ಶ್ರುತಿ ಸ್ಮೃತಿ ರೂಪ ಮಾದಾಜ್ಞೆಯಿಂದವೂ ನಿಯಾಮಕನಪ್ಪುದರಿಂದ ಈಶ್ವರಂಗೆ ಸರ್ವಪ್ರೇರಕತ್ವಮುಂ

ಎಂತು ಲೋಕದಲ್ಲಿ ಕುಲಾಲಾದಿ ಕರ್ತೃವಿನಿಂದನ್ಯವಾದ ಘಟಾದಿಗಳ್ನಿಯಾಮಿಸಿ ಕೊಳುತ್ತಿರುವಂತೆ ಅನನ್ಯವಾದ ಶರೀರಾದಿಗಳೇ ನಿಯಾಮಿಸಿಕೊಳುತಿರ್ಪವಂತು ವಿಶ್ವವೆಲ್ಲಂ ವಿಶ್ವೇಶ್ವರನಿಂ ನಿಯಾಮ್ಯವೆಂಬ ಶ್ರುತಿಯುಂಟಾಗಿ ಈಶ್ವರಂಗೆ ಸರ್ವಾತ್ಮ ಕತ್ವಮುಂ ; ಅದ್ವಿತೀಯನಪ್ಪುದರಿಂ ಬೇರೆ ಪಿತೃಕರ್ತೃಗಳಿಲ್ಲಾಗಿ ಈಶ್ವರಂಗೆ ಸ್ವತಂತ್ರಮುಂ ; ಜೀವರ ಕರ್ಮಾನುಗುಣ್ಯಮಾಗಿಯೆ ಸುಖದುಃಖಮನೀವುದರಿಂದ ಈಶ್ವರಂಗೆ ರಾಗದ್ವೇಷ ರಹಿತತ್ವಮುಂ ; ಈಶ್ವರನಿಂ ಸೃಷ್ಟವಾದ ವ್ಯೋಮಾದಿ ವಿಶ್ವಮಂ ಬೇರೊಂದು ಪ್ರಕಾರವಾಗಿ ಮಾಡಲು ಆವಮನುಷ್ಯನು ಸಮರ್ಥನಲ್ಲವ ದರಿಂದ ಈಶ್ವರಂಗೆ ಸರ್ವೇಶ್ವರತ್ವಮುಂ ಸುಸ್ಥಿತಮಕ್ಕುಂ. ೭

ಪ್ರಮಾಣ ಶಾಸ್ತ್ರಂಗಳು :

ಅನಂತರದೊಳಾ ಪರಮೇಶ್ವರನಿಂ ನಿರ್ಮಿತವಾದ ಚೇತನಾಚೇತನ ರೂಪ ಜಗತ್ತಿನಲ್ಲಿ ಭೋಗಮೋಕ್ಷಾರ್ಥಮಾಗಿ ಬೇರೆ ಬೇರೆ ವರ್ತಿಸುತ್ತಿರ್ದ ವಾದಿಗಳಿಗಭಿ ಮತವಾದ ಶಾಸ್ತ್ರಂಗಳಾವಾವವೆಂದೊಡೆ : ಮೊದಲು ಮುಖ್ಯಪ್ರಮಾಣವಾದ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ವೆಂಬವೆ ಸ್ವಯಂಭುವೆಂ ದೀಶ್ವರ ಪ್ರಣೀತವೆಂದು ಪೇಳಿಸಿಕೊಳುತ್ತಿರ್ದ ನಾಲ್ಕುವೇದಂಗಳವರಲ್ಲಿ ಋಗ್ವೇದ ವಿಪ್ಪತ್ತೊಂದು ಭೇದವಾಗಿಹುದು. ಯಜುರ್ವೇದ ಹನ್ನೊಂದು ಭೇದವಾಗಿ ಹುದು, ಸಾಮವೇದ ಸಾವಿರಭೇದವಾಗಿಹುದು ಅಥರ್ವಣವೇದವೆ ನವಭೇದ ಮಾಗಿರ್ಕುಂ. ೮

ವೇದವಾಕ್ಯ ಸ್ವರೂಪ :

ಮತ್ತಮಾ ವೇದಂಗಳಾದೊಡೆ ವಿಧಿವಾದ, ಅರ್ಥವಾದ, ಮಂತ್ರವಾದ ನಾಮಧೇಯಂಗಳೆಂಬ ನಾಲ್ಕು ಭೇದಂಗಳಿಂ ಸಮಸ್ತ ಕರ್ಮಧರ್ಮಂಗಳಂ ಬೋಧಿಸುತ್ತಿರ್ಪವವರಲ್ಲಿ ರಾಜಾಜ್ಞೆಯಂತೆ ಪುರುಷರುಗಳ ನಿಷೇಧದತ್ತಣಿಂ ತಿರು ಗಿಸಿ, ಧರ್ಮವೇ ಮಾಡಲು ತಕ್ಕುವೆಂಬುದೇ ವಿಧಿವಾದವೆನಿಸೂದು. ವಂದಿಗಳಂತಾ ವಿದ್ಯರ್ಥಮಂ ಕೊಂಡಾಡೂದೇ ಅರ್ಥವಾದವೆನಿಸೂದು. ಆಚಾರ್ಯನಂತೆ ಮಾಡಲು ತಕ್ಕುದಂ ತೋರ್ಪುದೇ ಮಂತ್ರವಾದವೆನಿಸೂದು. ಜನನೀ ಜನಕರಂತೆ ಯಾಗಾದಿ ಗಳ್ಗೆ ಪೆಸರಂ ಪೇಳ್ವುದೇ ನಾಮಧೇಯಮಕ್ಕುಂ. ೯

ವೇದಾಂಗಗಳು :

ಮತ್ತಮಾ ವೇದಕ್ಕೆ ಪಾದ, ಹಸ್ತ, ಮುಖ, ಘ್ರಾಣ, ನೇತ್ರ, ಶ್ರೋತ್ರಂಗಳಾದ ಕ್ರಮದಿಂ ಛಂದಸ್ಸು, ಕಲ್ಪ, ವ್ಯಾಕರಣ, ಶಿಕ್ಷೆ, ಜೋತಿಷ, ನಿರುಕ್ತವೆಂಬಿವೆ ಷಡಂ ಗಗಳವರಲ್ಲಿ ಛಂದಸ್ಸೇ ಮಂತ್ರಾದಿಗಳ್ಗೆ ತ್ರಿಷ್ಟುಪ್ ಮೊದಲಾದ ಛಂದಸ್ಸುಗಳಿಂದಕ್ಷರ

ಗಣನೆಗಳಂ ಮಾಡೂದು. ಕಲ್ಪವೇ ಆಶ್ವಲಾಯನೀಯ, ಬೋಧಾಯನೀಯ ಆಪಸ್ತಂಭನೀಯಾದಿ ಸೂತ್ರರೂಪದಿಂ ಯಜ್ಞಪ್ರಯೋಗಾದಿಗಳಂ ಕಲ್ಪಿಸೂದು. ವ್ಯಾಕರಣವೇ ವೈದಿಕ ಶಬ್ದಸಿದ್ಧಿಯಂ ಸಮರ್ಥಿಸೂದು. ಶಿಕ್ಷೆಯೇ ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯಂಗಳೆಂಬ ಚತುರ್ವಿಧ ಸ್ವರಕರಣ ಪೂರ್ವಕಮಾದ ಪದಪಾಳಿಕ್ರಮದಿಂ ವೇದಾಧ್ಯಯನಾದಿಕಮಂ ಸೂಚಿಸೂದು. ಜೋತಿಷವೇ ಲಗ್ನ, ತಿಥಿ, ವಾರ, ನಕ್ಷತ್ರ, ಯೋಗ, ಕರಣಾದಿಗಳಿಂ ವೈದಿಕ ಕರ್ಮಗಳಿಗೆ ಕಾಲಂಗಳಂ ತಿಳಿವುದು. ನಿರುಕ್ತವೇ ವೈದಿಕ ಶಬ್ದ ನಿರ್ವಚನಮಂ ನಿಯಾಮಿಸುತ್ತಿರ್ಕುಂ. ೧೦

ಉಪಾಂಗಗಳು :

ಬಳಿಕ ಮೀಮಾಂಸೆ ನ್ಯಾಯ ಪುರಾಣ ಸ್ಮೃತಿಗಳೆಂಬ ನಾಲ್ಕೇ ವೇದಕ್ಕು ಪಾಂಗಂಗಳಿವರ ಲಕ್ಷಣಂಗಳೆ ಮುಂದೆ ಪೇಳಲ್ಪಡುತ್ತಿರ್ಕುಂ. ೧೧

ಉಪವೇದಗಳು :

ಬಳಿಕ ಆಯುರ್ವೇದ, ಅರ್ಥವೇದ, ಗಾಂಧರ್ವವೇದ, ಧನುರ್ವೇದ ವೆಂಬವೆ ಉಪವೇದ ಚತುರ್ವಿಧಂಗಳವರಲ್ಲಿ : ಆಯುರ್ವೇದವೆ ವ್ಯಾಧಿನಿದಾನ, ವ್ಯಾಧಿಚಿಹ್ನ, ಮಂತ್ರೌಷಧಾದಿ ಚಿಕಿತ್ಸೆಗಳಿಂದಾಯುರಾರೋಗ್ಯಾದಿಗಳಂ ತೋರಿಸೂದು. ಅರ್ಥವೇದವೆ ದಕ್ಷಿಣೆ,ಆಜ್ಯ, ಚರು, ಉಪಹಾರಾದಿಗಳಂ ಸಂಪಾದಿವುದರಿಂ ಧರ್ಮಾದಿ ಚತುರ್ವರ್ಗ ಸಾಧನಮಾಗಿಹುದು, ಧನುರ್ವೇದವೆ ಶತ್ರುಜಯಾರ್ಥಮಾಗಿ ಮಂತ್ರಾಸ್ತ್ರ ಪ್ರಯೋಗಾದಿಗಳಂ ಕಲಿಸೂದು. ಗಾಂಧರ್ವವೇದವೆ ಸಾಮವೇದಾದಿಗಳಲ್ಲಿ ಸರಿಗಮಪದನಿಯೆಂಬ ಸಪ್ತಸ್ವರ ಗೀತ ಪ್ರಬಂಧಗಳಂ ವಿಭಾಗಿಸುತ್ತಿರ್ಕುಂ. ೧೨

ಉಪನಿಷತ್ತುಗಳು :

ಬಳಿಕ ಶ್ರೀರುದ್ರ, ಬೃಹದಾರಣ್ಯ, ಶ್ವೇತಾಶ್ವತರ,ಕೈವಲ್ಯ,ಕಾಲಾಗ್ನಿ,ಕಠವಲ್ಲಿ, ಕಾತ್ಯಾಯನ, ಬ್ರಹ್ಮ, ನಾರಾಯಣ, ಹಂಸ,ಪರಮಹಂಸ, ಬಾಷ್ಕಳ, ಬ್ರಹ್ಮಬಿಂದು, ಆರುಣಿ. ಅಮೃತಬಿಂದು, ಚರ್ಚ, ಪಂಚಬ್ರಹ್ಮ. ಜಾಬಾಲ, ತೇಜೋಬಿಂದು, ವಾಜಸನೇಯ, ಬೋಧಾಯನೀಯ, ಆಶ್ವಲಾಯನೀಯ, ಮೈತ್ರಾಯಣೀಯ, ಸಾಂಖ್ಯಾಯನೀಯ, ವಾಸುರಾಯಣೀಯ, ಶೌನಕೀಯ, ಶಿವಸಂಕಲ್ಪ, ಶ್ರವಣ, ಪರಿಕ್ರಮ, ಪೋಚ್ಯ, ಮುದ್ಗಲ, ಮುಂಡಕವೆಂಬೀ ಮೊದಲಾದ ಉಪನಿಷತ್ತುಗಳವರಲ್ಲಿ ಜ್ಞಾನಾಗಮದ ಭಸ್ಮ ರುದ್ರಾಕ್ಷಿಗಳಂ, ಬ್ರಹ್ಮಜ್ಞಾನಾದಿಕಮಂ ವಿಸ್ತರಿಸಿರ್ಕುಂ. ೧೩

ಸ್ಮೃತಿಗಳು:

ಬಳಿಕ ಮನುಸ್ಮೃತಿ, ಅತ್ರಿಸ್ಮೃತಿ, ಹಾರೀತಸ್ಮೃತಿ, ವಿಷ್ಣುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ಉಶನಸ್ಮೃತಿ, ಅಂಗೀರಸಸ್ಮೃತಿ.ಯಮಸ್ಮೃತಿ, ಆಪಸ್ತಂಬ ಸ್ಮೃತಿ, ಸಂವರ್ತಕಸ್ಮೃತಿ, ಕಾತ್ಯಾಯನಸ್ಮೃತಿ,ಬೃಹಸ್ಪತಿಸ್ಮೃತಿ,ಪರಾಶರಸ್ಮೃತಿ, ವ್ಯಾಸಸ್ಮೃತಿ,ಶಂಖಲಿಖಿತಸ್ಮೃತಿ, ದಕ್ಷಸ್ಮೃತಿ, ಗೌತಮಸ್ಮೃತಿ, ಶಾತಾತಪಸ್ಮೃತಿ, ವಶಿಷ್ಠಸ್ಮೃತಿಗಳೆಂಬಿವೆ ಆಯಾಯ ನಾಮಧೇಯ ಮುಳ್ಳವರಿಂದುಕ್ತಮಾದ ಹತ್ತೊಂಭತ್ತು ಧರ್ಮಶಾಸ್ತ್ರಂಗಳವರೊಳಗೆ,ಕೃತಯುಗದಲ್ಲಿ ಮನುಸ್ಮೃತಿ ಧರ್ಮವೇ ಮುಖ್ಯವಾಗಿಹುದು. ತ್ರೇತಾಯುಗದಲ್ಲಿ ಗೌತಮಸ್ಮೃತಿ ಧರ್ಮವೇ ಮುಖ್ಯ ವಾಗಿಹುದು ದ್ವಾಪರಯುಗದಲ್ಲಿ ಶಂಖಲಿಖಿತ ಸ್ಮೃತಿಧರ್ಮವೇ ಮುಖ್ಯವಾಗಿಹುದು. ಕಲಿಯುಗದಲ್ಲಿ ಪರಾಶರಸ್ಮೃತಿ ಧರ್ಮವೇ ಮುಖ್ಯವಾಗಿಹುದು. ೧೪

ಸ್ಮೃತಿಗಳಲ್ಲಿ ಜಾತಿವರ್ಣಾಶ್ರಮಾಚಾರಂಗಳಂ, ದಾಯಾದ್ಯವಿಭಾಗಾದಿ ಹದಿನೆಂಟು ವ್ಯವಹಾರ ಭೇದಂಗಳಂ, ಮಹಾಪಾತಕಾದಿಗಳಿಗೆ ಪ್ರಾಯಶ್ಚಿತ್ತಂಗಳಂ ವಿಧಿಸೂದು ಅವರೊಳಗೆ ಕರ್ನಾ, ಕನ್ನಡಿಗ, ಆಂಧ್ರ, ದ್ರಾವಿಡವೆಂಬವೆ ನಾಲ್ಕು ಜಾತಿಗಳು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬವೆ ನಾಲ್ಕು ವರ್ಣಂಗಳವರಲ್ಲಿ, ೧೫

ಬ್ರಾಹ್ಮಣಕರ್ಮ (ಷೋಡಷಕರ್ಮಗಳು ಮತ್ತು ಷಟ್ಕರ್ಮಗಳು) :

ಗರ್ಭಾದಾನ, ಪುಂಸವನ, ಸೀಮಂತ, ಉನ್ನಯನ, ಜಾತಕರ್ಮ, ನಾಮಕರಣ, ಉಪನಿಷ್ಕ್ರಮಣ, ಅನ್ನಪ್ರಾಶನ. ಚೌಲ, ಉಪನಯನ, ಮಹಾನಾಮ್ನ್ಯ, ಮಹಾವ್ರತ, ಉಪನಿಷತ್ತು, ಶೋಭನ, ಉದ್ವಾಹ, ಮೃತಿಗಳೆಂಬ ಷೋಡಶಕರ್ಮಂಗಳೊಡನೆಯೂ ; ಯಜನ, ಯಾಜನ, ಅಧ್ಯಯನ, ಅಧ್ಯಾಪನ,ದಾನ, ಪ್ರತಿಗ್ರಹವೆಂಬೀ ಷಟ್ಕರ್ಮಂಗಳೊಡನೆಯೂ; ಶಿವಭಕ್ತ್ಯಾದಿ ಸಕಲ ಸದ್ಗುಣಂಗಳೊಡನೆಯೂ ಕೂಡಿದಾತನೆ ಬ್ರಾಹ್ಮಣನಪ್ಪಂ. ೧೬

ಕ್ಷತ್ರಿಯ ಕರ್ಮಗಳು :

ಬಳಿಕ ಪ್ರಜಾಪಾಲನ, ಯಜನ, ಅಧ್ಯಯನ, ದುರ್ಜನ ದುಷ್ಟಮೃಗ ಪಕ್ಷಿ ಶತ್ರು ಸಂಹಾರ, ಅನ್ನದಾನ, ವಸ್ತ್ರದಾನ, ಭೂದಾನ, ಕನ್ಯಾದಾನ, ಹಿರಣ್ಯದಾನ, ಗೋದಾನ, ಉಭಯಮುಖೀದಾನ, ಮಹಿಷೀದಾನ, ಅಶ್ವದಾನ, ಶ್ವೇತಾಶ್ವದಾನ, ಕಾಳಾಮುಖದಾನ, ಮಹಾಮೇರುದಾನ ಕಲ್ಪವೃಕ್ಷದಾನ, ವಿದ್ಯಾದಾನಾದಿ ಮಹಾದಾನ, ತದ್ದಾನಾರ್ಥವಾಗಿ ದೇಶ-ಕಾಲ-ಪಾತ್ರ-ಪರೀಕ್ಷೆ-ವಿಷ್ಣುಭಕ್ತ್ಯಾದಿ ಕರ್ಮಯುಕ್ತನಾದಾತನೇ ಕ್ಷತ್ರಿಯನಪ್ಪಂ. ೧೭

ವೈಶ್ಯಕರ್ಮಗಳು :

ಗಣಿತ ಸಂಜ್ಞೆ – ಬಳಿಕ ಪ್ರಥಮಸ್ಥಾನ, ದ್ವಿತೀಯಸ್ಥಾನ, ತೃತೀಯಸ್ಥಾನ, ಚತುರ್ಥಸ್ಥಾನ, ಪಂಚಮಸ್ಥಾನ, ವೆಂದಿಂತು ಮೂವತ್ತಾರು ಸ್ಥಾನಪರಿಯಂತರಂ ಕ್ರಮದಿಂದವಕ್ಕೆ ಎಕ್ಕಂ, ದಹಂ, ಶತಂ, ಸಾವಿರ, ದಾಸಾವಿರ, ಲಕ್ಷ, ದಾಲಕ್ಷ, ಕೋಟಿ, ದಹಂ ಕೋಟಿ, ಶತಂಕೋಟಿ, ಅರ್ಬುದ, ನಿರ್ಬುದ, ಖರ್ವ, ಮಹಾ ಖರ್ವ, ಪದ್ಮ, ಮಹಾಪದ್ಮ, ಕ್ಷೋಣಿ, ಮಹಾಕ್ಷೋಣಿ, ಶಂಖ, ಮಹಾಶಂಖ, ಕ್ಷಿತಿ, ಮಹಾಕ್ಷಿತಿ, ಕ್ಷೋಭ, ಮಹಾಕ್ಷೋಭ, ನಿಧಿ, ಮಹಾನಿಧಿ, ಸಾಗರ, ಮಹಾ ಸಾಗರ ಹರಿ, ಮಹಾಹರಿ, ಶಂಖೆ, ಮಹಾಶಂಖೆ, ಫಣಿ, ಮಹಾಫಣಿ, ಕ್ರತು, ಮಹಾಕ್ರತುವೆಂಬವೆ ಉಗ್ಗಡಣೆಗಳು.

ಬಳಿಕ, ಯುಗ, ಯುಕ್ಕ, ಏಕ, ರೂಪ, ಭೂಮಸಂಜ್ಞೆ, ಚಂದ್ರಸಂಜ್ಞೆ, ಮೊದ ಲಾದವೇ ಒಂದಕ್ಕೆ ಪೆಸರು

ಬೆ, ಬೆನ್ನಿ, ದ್ವಾ, ದ್ವಂದ್ವ, ದ್ವಿ, ದ್ವಿತೀಯ, ಯುಗ್ಮ, ಯುಗಳ, ಯುಗ, ಉಭಯ, ಬಾಹು, ಪಾದ, ಪಕ್ಷ, ನಯನಸಂಜ್ಞೆ ಮೊದಲಾದವೇ ಎರಡಕ್ಕೆ ಪೆಸರು.

ತ್ರಿ, ತ್ರಿತಯ, ತ್ರಯ, ಹರನಯನ, ಅಗ್ನಿ, ಪುರ, ಪರರತ್ನಾದಿಗಳೇ ಮೂರಕೆ ಪೆಸರು.

ಚೌ, ಚತು, ಗತಿ, ಕಷಾಯ, ವೇದ, ವರ್ಣ, ಆಶ್ರಮ, ಸಮುದ್ರಸಂಜ್ಞೆ ಮೊದಲಾದವೇ ನಾಲ್ಕಕ್ಕೆ ಪೆಸರು.

ಪಂಚ, ಹರವಕ್ತ್ರ, ವ್ರತ, ಇಂದ್ರಿಯ, ಬಾಣ, ವಿಷಯ, ಪಾಂಡವ, ಭೂತಾದಿ ಗಳೇ ಐದಕ್ಕೆ ಹೆಸರು.

ಷಟ್, ದ್ರವ್ಯ, ಋತು, ರಸ ಸ್ಕಂದಮುಖ, ವೇದಾಂಗ, ಕರ್ಮ, ವರ್ಣ, ದರ್ಶನ, ಅರ್ಥಾದಿಗಳೇ ಆರಕ್ಕೆ ಪೆಸರು.

ಸಪ್ತ, ಮುನಿ, ಗಿರಿ, ರಾಜಾಂಗ, ತುರಗ, ಧಾತು, ಸಭಾಂಗ, ಸ್ವರ, ಸಾಗರ ಸಂಜ್ಞೆ ಮೊದಲಾದವೇಳಕ್ಕೆ ಪೆಸರು.

ಅಷ್ಟ, ವಸು, ದಿಗ್ಗಜ, ಮದ, ಕರ್ಮಾದಿಗಳೇ ಎಂಟಕ್ಕೆ ಹೆಸರು.

ನವ, ರಂಧ್ರ, ನಿಧಿ, ರಸ, ಗ್ರಹ, ರತ್ನ, ಭಾವಾದಿಗಳೇ ಒಂಭತ್ತಕ್ಕೆ ಪೆಸರು.

ಬಿಂದು, ಶೂನ್ಯ, ನಾಸ್ತಿ, ಅನುಸ್ವಾರ, ಗಗನಸಂಜ್ಞೆ ಮೊದಲಾದವೇ ಸೊನ್ನೆಯ ಪೆಸರೆಂದು ಸಕಲ ಸಂಖ್ಯಾ ಸಂಜ್ಞೆಗಳನರಿದು, ಹೆಚ್ಚ ಕಳೆದು, ಗಣಿತಾದಿ ಗಳಂ ಗುಣಿಸಿ, ಕ್ರಮುಕಾದಿ ಸಮಸ್ತವಸ್ತುಗಳಂ ಪ್ರಮಾಣಿಸುವ, ಲೆಕ್ಕ, ಬರೆಹ, ಕ್ರಯ, ಬಡ್ಡಿ, ವಟ್ಟ, ಚಿನ್ನದ ಬಣ್ಣ, ಪವಳದ ಕಣಜ, ಮಣಿಗಳಚವು, ರತ್ನಂಗಳ ಸೂಕ್ಷ್ಮಪರೀಕ್ಷೆ, ವಜ್ರದ ಮುಂಜಾಡಿ, ಪಚ್ಚೆಯರತಿ, ಮೊದಲಾದವಂ ಬೇರೆ ಬೇರೆ ಲಕ್ಷಿಸಿ. ೧೮

ತೂಕದ ಪ್ರಮಾಣ : ಬಳಿಕ ಹತ್ತು ಹಣತೂಕ ಒಂದು ಗದ್ಯಾಣ, ಅದು ನಾಲ್ಕಾಗಲೊಂದು ಕರ್ಷ, ಅದು ನಾಲ್ಕಾಗಲೊಂದು ಹಲ, ಅದು ಇಪ್ಪತ್ತಾಗಲೊಂದು ಬಿಸಿಗೆ, ಆ ಬಿಸಿಗೆ ಐದಾಗಲೊಂದು ತೊಲೆ, ಆ ತೊಲೆ ಇಪ್ಪತ್ತಾಗಲೊಂದು ಭಾರ, ಆ ಭಾರ ಹತ್ತಾಗಲೊಂದು ಅಚಿತವಹುದೆಂದು ಕರ್ಪುರಾದಿಕದ ತೂಕವಂ ಪ್ರಮಾಣಿಸಿ. ೧೯

ಅಳತೆ ಪ್ರಮಾಣ : ಬಳಿಕ ಒಂದು ಸೊಲಿಗೆಯೆ ನಿಕುಂಜ, ಅದು ನಾಲ್ಕಾಗಲೊಂದು ಕುಡುಬ, ಅದು ನಾಲ್ಕಾಗಲೊಂದು ಪ್ರಸ್ಥ. ಆ ಪ್ರಸ್ಥವೆರಡಾಗೆ ವಾಹಾ ಅದು ಎರಡಾಗಲೊಂದು ಆಡಕ, ಅದು ನಾಲ್ಕಾಗೆ ದ್ರೋಣ, ಅದು ಐದಾಗಲೊಂದು ಖಾರಿಯಹುದೆಂದು ಧಾನ್ಯಾದಿಗಳಳತೆಯನಾರೈದು ; ಮಾಡುವ ವಾಣಿಜ್ಯ, ಕೃಷಿ, ಗೋಪಾಲಿಕೆ, ಸೂರ್ಯಭಕ್ತ್ಯಾದಿ ಕರ್ಮಯುಕ್ತನಾದಾತನೇ ವೈಶ್ಯನಪ್ಪಂ. ೨೦

ಶೂದ್ರ ಕರ್ಮ :

ಬಳಿಕ ಬ್ರಾಹ್ಮಣಾದಿ ವರ್ಣತ್ರಯ ಸೇವೆ, ಕ್ಷೇತ್ರರಕ್ಷಣೆ, ಸಕಲದೇವತಾ ಭಕ್ತ್ಯಾದಿ ಕರ್ಮಯುಕ್ತನಾದಾತನೆ ಶೂದ್ರನೆನಿಪ್ಪಂ. ೨೧

ಪುರಾಣೋಪ ಪುರಾಣ :

ಅನಂತರದಲ್ಲಿ, ಬ್ರಹ್ಮಪುರಾಣ, ಪದ್ಮಪುರಾಣ, ವೈಷ್ಣವಪುರಾಣ, ಶೈವ ಪುರಾಣ, ಭಾಗವತಪುರಾಣ, ನಾರದೀಯಪುರಾಣ, ಮಾರ್ಕಂಡೇಯಪುರಾಣ, ಅಗ್ನಿಪುರಾಣ, ಭವಿಷ್ಯತ್ಪುರಾಣ, ಬ್ರಹ್ಮಕೈವರ್ತಪುರಾಣ, ಲೈಂಗ್ಯಪುರಾಣ, ವರಾಹಪುರಾಣ, ಮತ್ಸ್ಯಪುರಾಣ, ಸ್ಕಂದಪುರಾಣ, ವಾಮನಪುರಾಣ, ಕೂರ್ಮ ಪುರಾಣ, ಗಾರುಡಪುರಾಣ, ಬ್ರಹ್ಮಾಂಡಪುರಾಣವೆಂಬವೆ ಶಿವಪ್ರಸಾದದಿಂ ವ್ಯಾಸ ಋಷೀಶ್ವರೋಕ್ತಮಾದ; ವೇದದ ನಷ್ಟ ಶಾಖಾರ್ಥ ಪ್ರತಿಪಾದಕಮಪ್ಪ ನಾಲ್ಕು ಲಕ್ಷ ಗ್ರಂಥ ಸಂಖ್ಯೆಯುಳ್ಳ ಹದಿನೆಂಟು ಮೂಲ ಪುರಾಣಂಗಳು. ಅದರೊಳಗೆ ಶಿವ ಸ್ಕಂದ, ಲೈಂಗ್ಯ, ಕೂರ್ಮ, ವಾಮನ, ವರಾಹ ಭವಿಷ್ಯತ್ತು, ಮತ್ಸ್ಯ, ಮಾರ್ಕಂಡೇಯ, ಬ್ರಹ್ಮಾಂಡವೆಂಬ ಹತ್ತೇ ಶಿವಪುರಾಣಂಗಳು.

ನಾರದೀಯ, ಭಾಗವತ, ಗಾರುಡ, ವೈಷ್ಣವವೆಂಬ ನಾಲ್ಕೇ ವಿಷ್ಣು ಪುರಾಣಗಳು.

ಬ್ರಹ್ಮ, ಪದ್ಮವೆಂಬೆರಡೇ ಬ್ರಹ್ಮಪುರಾಣಂಗಳು. ಬ್ರಹ್ಮಕೈವರ್ತವೊಂದೇ ಸೂರ್ಯ ಪುರಾಣವಹುದು.

ಆಗ್ನೇಯವೊಂದೇ ಅಗ್ನಿಪುರಾಣವಹುದಾಗಿ ದೇವತೆಗಳ ತಾರತಮ್ಯಾಪ ಈ ಪುರಾಣಂಗಳ ಕುಂದು ಹೆಚ್ಚುಗಳಿಂದವೆ ನಿಶ್ಚೈಸವೇಳ್ಕುಂ. ೨೨

ಮತ್ತಮಾ ಪುರಾಣಂಗಳಲ್ಲಿ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತಂಗಳೆಂಬ ಪಂಚಲಕ್ಷಣಂಗಳುಂ, ಸಮಸ್ತ ವೈದಿಕ, ತಾಂತ್ರಿಕ ಧರ್ಮಂಗಳುಂ ವಿದಿತಂಗಳಕ್ಕುಂ. ೨೩

ಬಳಿಕ ಸನತ್ಕುಮಾರಪುರಾಣ, ನಾರಸಿಂಹಪುರಾಣ, ನಂದಿಪುರಾಣ, ಶಿವಧರ್ಮಪುರಾಣ, ದೂರ್ವಾಸಪುರಾಣ, ನಾರದೀಯಪುರಾಣ, ಮಾನವಪುರಾಣ, ಉಶನಃಪುರಾಣ, ಬ್ರಹ್ಮಾಂಡಪುರಾಣ, ವಾರುಣಪುರಾಣ, ಕಾಲೀಪುರಾಣ, ವಾಸಿಷಪುರಾಣ, ಸಾಂಬಪುರಾಣ, ಸೌರಪುರಾಣ, ಪಾರಾಶರಪುರಾಣ, ಮಾರೀಚ್ಯಪುರಾಣ, ಭಾರ್ಗವಪುರಾಣ, ಕಪಿಲಪುರಾಣವೆಂಬವೆ ಆಯಾಯ ನಾಮಧೇಯಮುಳ್ಳವರಿಂ ನಿರೂಪಿತಂಗಳಾದ ಹದಿನೆಂಟು ಪುರಾಣಂಗಳವರಲ್ಲಿ ವೈದಿಕ ಧರ್ಮಾದಿಕವೆಲ್ಲಂ ಪ್ರತಿಪಾದ್ಯಂಗಳಕ್ಕುಂ. ೨೪

ಇತಿಹಾಸ :

ಬಳಿಕ ಭಾರತ, ರಾಮಾಯಣವೆಂಬವೆರಡೇ ವ್ಯಾಸ ವಾಲ್ಮೀಕಿಗಳಿಂ ಪ್ರಣೀತಮಾದ ಇತಿಹಾಸಂಗಳು ಅವರಲ್ಲಿ ಸತ್ವಗುಣಭೇದಂಗಳಂ, ತ್ರಿದೇವತಾ ಲಕ್ಷಣಂಗಳಂ, ದೇವದಾನವಾದಿಗಳ ಜನನಕ್ರಮಂಗಳಂ, ಯುಧಿಷ್ಠಿರ ರಾಮಚಂದ್ರಾದಿ ರಾಜವೃತ್ತಾಂತಂಗಳಂ, ವೈದಿಕ ಧರ್ಮಾದಿಗಳಂ ದೃಢೀಕರಿಸುತ್ತಿರ್ಕುಂ. ೨೫

ಚಾರ್ವಾಕ ಶಾಸ್ತ್ರ :

ಅನಂತರದಲ್ಲಿ ಬೃಹಸ್ಪತಿ, ಆರ್ಹತ, ಸುಗತರೆಂಬವರಿಂ ಕ್ರಮದಿಂ ಪೇಳಲ್ಪಟ್ಟ ಚಾರ್ವಾಕ, ಜೈನ, ಬೌದ್ಧಂಗಳೆಂಬವೆ ಅವೈದಿಕ ಶಾಸ್ತ್ರತ್ರಯಂಗಳವರಲ್ಲಿ. ಚಾರ್ವಾಕವೇ ಪೃಥುವ್ಯಾದಿ ಚತುರ್ಭೂತ ವಿಕಾರಮಾದ ಜಗತ್ತಿನಲ್ಲಿ ಸುಖವೇ ಸ್ವರ್ಗ, ದುಃಖವೇ ನರಕವಲ್ಲದೆ ಬೇರೆ ಸ್ವರ್ಗನರಕಾದಿಗಳಿಲ್ಲವೆಂದು ಪೇಳೂದು. ೨೬

ಜೈನಶಾಸ್ತ್ರ :

ಜೈನವೇ ಸಿದ್ಧ ಬದ್ಧ ನಾರಕಿಗಳೆಂಬ ಪುರುಷತ್ರಯ ಲಕ್ಷಣಂಗಳಂ; ಒಡ್ಡೀಶ, ಒಡ್ಡಮಲ್ಲೇಶ್ವರ, ಜ್ವಾಲಿನೀಕಲ್ಪ, ಪದ್ಮಾವತೀಕಲ್ಪ, ಶಾರದಾಕಲ್ಪ, ಕುಕ್ಕುಟನಾಥಾದಿಕಲ್ಪಂಗಳಂ; ಮಂತ್ರೌಷಧಾದಿ ಪ್ರಯೋಕ್ತೃಗಳಾದ ಪರಮಸಿದ್ಧರುಗಳಂ; ಲೂನೇಶ, ದಿಗಂಬರ, ಪಾಣಿಪಾತ್ರೆ, ಮಯೂರಪಿಂಛ, ಪಂಚಮಲಧಾರಣಾದಿಗಳಿಂ ಪುಸಿ, ಕಳವು, ಪರದಾರ, ಅತಿಕಾಂಕ್ಷೆ, ಹಿಂಸೆಗಳಿಲ್ಲದಿಹಣವೆಂಬ ಪಂಚಾ

ಣಾವ್ರತಂಗಳಂ; ಮಧು, ಪಲಾಂಡು, ಮೊದಲಾದ ನಿಷಿದ್ಧ ದ್ರವ್ಯಂಗಳಂ ಬಿಟ್ಟು, ತಪ್ತ ಶಿಲಾಶಯನಾದಿಗಳಿಂದುಗ್ರ ತಪವನಾಚರಿಸುವ ಮುನಿವೃತ್ತಿಗಳಂ; ಹೇಮ ಚಂದ್ರ, ನೇಮಿಚಂದ್ರ, ನಾಗಚಂದ್ರ, ಮೋಘಚಂದ್ರ, ಮಾಘಚಂದ್ರ, ಅರ್ಹತ, ಆದಿನಾಥ, ಅಗ್ಗಳನಾಥ, ಪಾರ್ಶ್ವನಾಥ, ಸೌಗತ, ಶ್ರುತಕೀರ್ತಿ, ಶ್ರೀಮತಿ, ಕಾಮ ರಹಿತ, ಮುನಿಸ್ವಾಮಿಗಳೆಂಬ ಚೌವ್ವೀಸ ತೀರ್ಥಂಕರ ಚರಿತ್ರಂಗಳಂ; ಸ್ಯಾದಸ್ತಿ, ಸ್ಯಾನ್ನಾಸ್ತಿ, ಯೆಂಬಿವು ಮೊದಲಾದ ಸಪ್ತಭಂಗಿಗಳಂ ; ಜೀವ, ಸಜೀವ, ನಿರ್ಜೀವ, ನಿರ್ಜರ, ಆಸ್ರವ,ಬಂಧ, ಮೋಕ್ಷವೆಂಬ ಸಪ್ತಪದಾರ್ಥಂಗಳಂಪ್ರತಿಪಾದಿಸೂದು. ೨೭

ಬೌದ್ಧಶಾಸ್ತ್ರ

ಬೌದ್ಧವೆ ಭೂಮ್ಯಾದಿ ಬುದ್ಧಿಕಡೆಯಾದ ತ್ರಯೋವಿಂಶತಿ ತತ್ವಾತ್ಮಕ ಪ್ರಪಂಚವೆಲ್ಲ ದೀಪ ಜ್ವಾಲೆಗಳಂತೆ ಕ್ಷಣಿಕವೆಂದು ಸಂಪಾದಿಸುತ್ತವೆ, ಸೌತ್ರಾಂತಿಕ, ವೈಭಾಷಿಕ, ಮಹಾಯಾನಕ, ಸೌಶ್ರುತವೆಂದು ನಾಲ್ಕುತೆರನಾಗಿರುಕರ್ುಂ. ೨೮ /

ಕೌಳಯಾಮಳ :

ಬಳಿಕ ಸತ್ಯನಾಥ, ಸತೋಕನಾಥ, ಆದಿನಾಥ, ಅನಾದಿನಾಥ, ಅಕುಳಿತನಾಥ, ಮತಂಗನಾಥ, ಮತ್ಸ್ಯೇಂದ್ರನಾಥ, ಘಟಯಂತ್ರನಾಥ, ಗೋರಕ್ಷನಾಥರೆಂಬ ನವನಾಥಸಿದ್ಧರಿಂ ಕಲ್ಪಿತಮಾದ ಕೌಳಯಾಮಳಾದಿಗಳೆ ಹಿಂಸಾಮೈಥುನಾದಿ ನಿಷಿದ್ಧಕರ್ಮಮುಳ್ಳ ಶಾಸ್ತ್ರಾಂತರಂಗಳವರಲ್ಲಿ ಅಭಿಚಾರಕರ್ಮಜನಿತ ವ್ಯಾಧ್ಯಾದಿ ದ್ವಾರದಿಂ ಅಕಾಲ ಮೃತ್ಯುರೂಪಮರಣಮೆಂಬ; ಸುಪ್ತಿ, ವಿಷಯ, ಮೂರ್ಛಾದಿ ಸದೃಶೀಕರಣ ಲಕ್ಷಣ ಮೋಹನಮೆಂಬ; ಅಗ್ನಿಸ್ತಂಭ, ಜಲಸ್ತಂಭ, ಇಂದ್ರಿಯ ಸ್ತಂಭ, ಖಡ್ಗಸ್ತಂಭ, ಜಿಹ್ವಾಸ್ತಂಭ, ಗತಿಸ್ತಂಭಾದಿ ರೂಪಸ್ತಂಭನವೆಂಬ; ಪೂರ್ವಸುಖಾಶ್ರಯ ನಿರಸನಾತ್ಮಕ ಉಚ್ಚಾಟನವೆಂಬ; ವಸ್ತ್ರಾಭರಣ, ವಾಹನ, ವನಿತಾದಿ ವಸ್ತು ನಿಜಸ್ಥಾನಗತ ಲಕ್ಷಣಾಕರ್ಷಣವೆಂಬ; ಪ್ರಾಣ ಸ್ನೇಹಿತಾನ್ಯೋನ್ಯ ವಿರೋಧ, ಕರಣಾತ್ಮಕ, ವಿದ್ವೇಷಣವೆಂಬ ಷಟ್ಕರ್ಮಂಗಳಂ; ರಾಜವಶ್ಯ, ಜನವಶ್ಯ ಸ್ತ್ರೀವಶ್ಯಂಗಳಂ, ಜ್ವರಭೂತ ಗ್ರಹಾವೇಶಂಗಳಂ; ಪಾದ ಕಾಸಿದ್ಧಿ, ಅಂಜನಾಸಿದ್ಧಿ; ಘುಟಿಕಾಸಿದ್ಧಿ, ಮೂಲಿಕಾಸಿದ್ಧಿ ರಸರಸಾಯನಾದಿ ಸಿದ್ಧಿಗಳಂ ಸಾಧಿಸುತ್ತಿರ್ಕುಂ. ೨೯

ಶಾಕ್ತೇಯ ಪಾಂಚರಾತ್ರಂಗಳು :

ಬಳಿಕ ಶಕ್ತಿತತ್ವವಾಸಿಯಾದೋರ್ವಾತ್ಮಕನಿಂ, ವಾಸುದೇವನಿಂ, ಕ್ರಮ ದಿಂದುಕ್ತಮಾದ ಶಾಕ್ತೇಯ ಪಾಂಚರಾತ್ರವೆಂಬವೆ ಶಾಸ್ತ್ರಾಂತರದ್ವಯಂಗಳವರಲ್ಲಿ; ಶಾಕ್ತೇಯುವೇ ಜಡಾಜಡ ಪ್ರಪಂಚವೆಲ್ಲಂ ಶಕ್ತಿ ಪರಿಣಾಮವೆಂಬುದು ಮೊದಲಾದವಂ ವಿಸ್ತರಿಸೂದು. ಪಾಂಚರಾತ್ರವೇ ಪೃಥುವ್ಯಾದಿ ಮಾನಸಾಂತಮಾದ ಚತುರ್ವಿಂ

ಶತಿ ತತ್ವಂಗಳಿಂ ಮೇಲೆ ಗುಣತತ್ವಾತ್ಮಕ ವಾಸುದೇವನಿಂ ಜಗದ್ಧಿತಾರ್ಥವಾಗಿ ಕೃಷ್ಣ, ಅನಿರುದ್ಧ, ಮಕರಧ್ವಜ, ರೌಹಿಣೇಯರೆಂಬ ನಾಲ್ವರುತ್ಪತ್ತಿ ಮೊದಲಾದವಂ ಸಂಪಾದಿಸುತ್ತಿರ್ಪರ್. ೩೦

ಸಾಧಾರಣ ಶಾಸ್ತ್ರ ಪಂಚಕ :

ಬಳಿಕ ಲೌಕಿಕ, ವೈದಿಕ, ಆಧ್ಯಾತ್ಮಿಕ, ಅತಿಮಾರ್ಗಿಕ, ಮಾಂತ್ರಿಕವೆಂದು ಪಂಚವಿಧ ಶಾಸ್ತ್ರಂಗಳವರಲ್ಲಿ : ಲೌಕಿಕ ಶಾಸ್ತ್ರ : ಲೌಕಿಕವೇ ಧನ್ವಂತ್ರ್ಯಾದಿ ಗಳಿಂದುಕ್ತಮಾದ ಆಯುರ್ವೇದ, ದಂಡನೀತಿ, ಮೊದಲಾದ ದೃಷ್ಟ ಫಲಂಗಳಂ ನಿರ್ಧರಿಸುತ್ತಿರ್ಪರ್.

ವೈದಿಕ ಶಾಸ್ತ್ರ : ಬಳಿಕ ಜೈಮಿನಿ, ಅಕ್ಷಪಾದ, ಕಣಾದರೆಂಬ ಋಷೀಶ್ವರರಿಂ ಕ್ರಮದಿಂದುಕ್ತಮಾದ ಪೂರ್ವಮೀಮಾಂಸೆ, ನ್ಯಾಯ, ವೈಶೇಷಿಕವೆಂಬ ದೃಷ್ಟಾ ದೃಷ್ಟ ಫಲಂಗಳುಳ್ಳವೇ ವೈದಿಕ ಶಾಸ್ತ್ರತ್ರಯಂಗಳವರಲ್ಲಿ : ಪೂರ್ವಮೀಮಾಂಸೆಯೇ ಉಪಕ್ರಮಾದಿ ಷಡ್ವಿಧ ಲಿಂಗ ತಾತ್ಪರ್ಯದಿಂ ವೇದವಾಕ್ಯ ವಿಚಾರ ಪೂರ್ವಕವಾಗಿ ಜ್ಯೋತಿಷ್ಟೋಮಯಾಗಾದಿಕವಂ ವಿಧಿಸೂದು, ನ್ಯಾಯವೇ ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ, ದೃಷ್ಟಾಂತ ಸಿದ್ಧಾಂತ, ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡ, ಹೇತ್ವಾಭಾಸ, ಛಲ, ಜಾತಿ, ನಿಗ್ರಹಸ್ಥಾನಂಗಳೆಂಬ ಷೋಡಶ ಪದಾರ್ಥಂಗಳಂ ಪೇಳುತ್ತವೆ ಪ್ರಪಂಚಕ್ಕೆ ಈಶ್ವರ ಕರ್ತೃತ್ವವಂ ನಿಶ್ಚೈಸೂದು. ವೈಶೇಷಕವೇ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯವೆಂಬ ಷಟ್ಪದಾರ್ಥ ಪ್ರತಿಪಾದಕತ್ವದಿಂ ಪ್ರಪಂಚ ಸ್ವರೂಪವಂ ವಿಭಾಗಿಸುತ್ತಿರ್ಪರ್. ೩೧ (ಅ)

ಬಳಿಕ ಕಪಿಲ, ಪತಂಜಲಿ, ವ್ಯಾಸರೆಂಬ ಮುನಿಗಳಿಂ ಕ್ರಮದಿಂ ನಿರೂಪಿತಂ ಗಳಾದ ಸಾಂಖ್ಯ, ಪಾತಂಜಲ, ವೇದಾಂತಂಗಳೆಂಬ ಆತ್ಮಜ್ಞಾನ ಫಲವಾಗುಳ್ಳವೆ ಆಧ್ಯಾತ್ಮಿಕ ಶಾಸ್ತ್ರತ್ರಯಂಗಳು ಅವರಲ್ಲಿ : ಸಾಂಖ್ಯವೇ ನಿತ್ಯನಿರ್ಮಲರಾದಾತ್ಮರ ಸನ್ನಿಧಾನದಿಂ ಗುಣತ್ರಯಾತ್ಮಕ ಪ್ರಕೃತಿಯೇ ಪಂಚವಿಂಶತಿ ತತ್ವಾತ್ಮಕ ಜಗವಾಗಿ ವ್ಯವಹರಿಸೂದೇ ಸಂಸಾರ ಬಂಧವೆಂಬುದಂ, ಸತ್ವಾದಿಗುಣತ್ರಯಾನುಕ್ರಮದಿಂ, ಶ್ಲೇಷ್ಮ ಪ್ರಕೃತಿ, ಪಿತ್ತ ಪ್ರಕೃತಿ, ವಾತಪ್ರಕೃತಿಗಳುಳ್ಳ, ಶಾಂತಿ, ಕ್ರೋಧ, ಮೂಢ ತ್ವಾದಿ ಗುಣಗಳಾದ ಉತ್ತಮ, ಮಧ್ಯಮ, ಅಧಮ ಪುರುಷತ್ರಯದ ವರ್ಣ ರೀತಿ ಮೊದಲಾದವಂ ವಿಭಾಗಿಸೂದು. ಪಾತಂಜಲವೇ ಯಮಾದ್ಯಷ್ಟಾಂಗಯೋಗದಿಂ ಮನೋನಿಶ್ಚಲತೆಯಂ ಸಿದ್ಧಿಸೂದು. ಉತ್ತರ ಮೀಮಾಂಸೆಯನಿಪ ಉಪನಿಷದರ್ಥ ಪ್ರತಿಪಾದಕಮಾದ ವೇದಾಂತ ಶಾಸ್ತ್ರವೇ ಪ್ರಪಂಚಕ್ಕೆ ಮಿಥ್ಯತ್ವವಂ ಸಾಧಿಪುವರಿಂ ಬ್ರಹ್ಮಾತ್ಮೈಕ್ಯವಂ ವರ್ಣಿಸುತ್ತಂ ಭಾಸ್ಕರೀಯ, ಮಾಯಾವಾದ, ಶಬ್ದಬ್ರಹ್ಮವಾದ ಕ್ರೀಡಾಬ್ರಹ್ಮವಾದವೆಂದು ನಾಲ್ಕು ತೆರನಾಗಿ ಪ್ರಚುರಗೊಂಡಿರ್ಪರ್. ೩೧ (ಆ)

ಬಳಿಕ ಮಾಯಾತತ್ವ, ವಿದ್ಯಾತತ್ವವಾಸಿಗಳಾದ ತ್ರಿರುದ್ರರಿಂ ರಚಿತಂಗಳಾದ ಪಾಶುಪತ, ಕಾಪಾಲಿಕ, ಮಹಾವ್ರತಂಗಳೆಂಬವೆ ಅತಿಮಾರ್ಗಿಕ ಶಾಸ್ತ್ರತ್ರಯಂಗಳು. ಅವರಲ್ಲಿ : ಪಾಶುಪತವೇ ಮಾಯಾ, ಕರ್ಮವೆಂಬ ಪಾಶದ್ವಯಾದಿಗಳಂ ನಿರ್ವಹಿಸೂದು. ಕಾಪಾಲಿಕವೇ ನರಕಪಾಲ ಭಿಕ್ಷಾಟನಾದಿಗಳಂ ನಿರ್ವಹಿಸೂದು. ಮಹಾವ್ರತವೇ ಅಸ್ಥಿಧಾರಣಾದಿಗಳಂ ವಚಿಸುತ್ತಿರ್ಕುಂ. ೩೨

ಬಳಿಕ ಪರಶಿವ ಪ್ರಣೀತವಾದ ಮಂತ್ರವೇ ಮೋಕ್ಷಾಂಗವಾದ ಕ್ರಿಯೆ, ಚರ್ಯೆ, ಯೋಗ, ಜ್ಞಾನಾದಿಗಳಂ ಪ್ರಮಾಣಿಸುತ್ತಿರ್ಕುಂ. ೩೩

## ಆತ್ಮ ಪ್ರತಿಪಾದನೆ :

ಮತ್ತಮಾ ಸಮಸ್ತಮತಾಂತರಂಗಳಲ್ಲಿ ಪೇಳುವ ಆತ್ಮಸ್ವರೂಪವೆಂತೆನೆ : ದೇಹವೇ ಆತ್ಮನೆಂಬರು ಚಾರ್ವಾಕರು, ಇಂದ್ರಿಯಗಳೇ ಆತ್ಮನೆಂಬರು ಚಾರ್ವಾಕೈಕದೇಶಿಗಳು, ಪ್ರಾಣವೇ ಆತ್ಮನೆಂಬರು ಹಿರಣ್ಯಗರ್ಭರೆಂಬ ಚಾರ್ವಾಕೈಕದೇಶಿಗಳು. ೩೪

ಬಳಿಕ ದೇಹಾದಿ ವಿಲಕ್ಷಣನಾದೋರ್ವಾತ್ಮನು ದೇಹಪರಿಮಿತನಾಗಿ ಮಧ್ಯಮ ಪರಿಮಾಣತ್ವದಿಂ ಸಂಕೋಚ ವಿಕಾಸ ಧರ್ಮಯುಕ್ತನೆಂಬರು ಜೈನರು. ಬುದ್ಧಿಯೇ ಆತ್ಮನೆಂಬರು ಬೌದ್ಧರು. ಆನಂದವೇ ಆತ್ಮನೆಂಬರು ಕೌಳಯಾಮಳ ಶಾಕ್ತೇಯರುಗಳು. ಆತ್ಮನು ನಾಡಿಮಧ್ಯಗತನಾಗಿ ಅಣುಪರಿಮಾಣನೆಂಬರು ಪಾಂಚರಾತ್ರರು. ಆತ್ಮನು ದೇಹ ಪುತ್ರಾದಿರೂಪನೆಂಬರು ಲೌಕಿಕರು. ಆತ್ಮನು ಸ್ವತಃ ಪ್ರಮಾಣಜ್ಞಾನ ಸಮೇತನೆಂಬರು ಮೀಮಾಂಸಕ ಭೇದ ಮಾದ ಭಾಟ್ಟ ಪ್ರಾಭಾಕರರುಗಳು. ಆತ್ಮನು ಗಗನದಂತೆ ಮಹತ್ಪರಿಮಾಣನಾಗಿ ಪಾಷಾಣದಂತೆ ಜಡರೂಪನಾದೊಡಂ ಮನಸಂಯೋಗದಿಂ ಚಿದ್ಧರ್ಮಯುಕ್ತನೆಂಬರು ನೈಯಾಯಿಕ ವೈಶೇಷಿಕರುಗಳು. ಆತ್ಮನು ಅಸಂಗ ಚಿನ್ಮಾತ್ರನೆಂಬರು ಸಾಂಖ್ಯ ಪಾತಂಜಲರುಗಳು. ಆತ್ಮನು ಜ್ಞಪ್ತಿಮಾತ್ರನೆಂಬರು ವೇದಾಂತಿಗಳು. ಆತ್ಮನು ನಿತ್ಯವ್ಯಾಪಕ ಚೈತನ್ಯನೆಂಬರು ಪಾಶುಪತ ಕಾಪಾಲಿಕ ಮಹಾವ್ರತರುಗಳು. ೩೫

## ಮೋಕ್ಷ ಪ್ರತಿಪಾದನೆ :

ಮತ್ತಮಾ ಸಕಲವಾದಿಗಳಂ ಪ್ರತಿಪಾದಿಸಲ್ಪಟ್ಟ ಮೋಕ್ಷ ಲಕ್ಷಣವೆಂತೆನೆ : ಮರಣವೇ ಮೋಕ್ಷವೆಂಬರು ಚಾರ್ವಾಕರು. ಅಲೌಕಿಕಾಕಾಶ ಮಧ್ಯದೊಳುತ್ತ

ರೋತ್ತರ ಗಮನವೇ ಮೋಕ್ಷವೆಂಬರು ಜೈನರು. ಸುಖದುಃಖಾದಿಗಳ ಸೋಂಕಿಲ್ಲದ ಶುದ್ಧ ಬುದ್ಧಿಸಂತತಿಯೇ ಮೋಕ್ಷವೆಂಬರು ಬೌದ್ಧರು. ಆಕಾಶಗಮನಾದಿ ಸಿದ್ಧಿ ಪ್ರಾಪ್ತಿಯೆ ಮೋಕ್ಷವೆಂಬರು ಕೌಳಯಾಮಳರುಗಳು. ಆನಂದಪ್ರಾಪ್ತಿಯೇ ಮೋಕ್ಷ ವೆಂಬರು ಶಾಕ್ತೇಯರುಗಳು. ವಾಸುದೇವಾತ್ಮಕ ಪ್ರಕೃತಿಯಲ್ಲಿ ಸ್ವರೂಪ ಹಾನಿ ಯಿಲ್ಲದೆ ಅಡಗಿಹುದೇ ಮೋಕ್ಷವೆಂಬರು ಪಾಂಚರಾತ್ರರು. ಇಹಪರಂಗಳಲ್ಲಿ ಪುತ್ರ ಭಾರ್ಯಾದಿಗಳೊಡಗೂಡಿ ವ್ಯಾಧ್ಯಾದಿ ದುಃಖವಿಲ್ಲದೆ ಸುಖದಿಂದಿಹುದೇ ಮೋಕ್ಷ ವೆಂಬರು ಲೌಕಿಕರು. ಸ್ವರ್ಗಾದಿ ಪದಪ್ರಾಪ್ತಿಯೇ ಮೋಕ್ಷವೆಂಬರು ಪೂರ್ವ ಮೀಮಾಂಸಕರು. ಆತ್ಮ, ಶರೀರ, ಇಂದ್ರಿಯಾದಿಕವೆಂಬ ಇಪ್ಪತ್ತೊಂದು ದುಃಖದತ್ಯಂತ ನಾಶದಿಂ ಪಾಷಾಣಪ್ರಾಯನಾಗಾತ್ಮನಿಹುದೇ ಮೋಕ್ಷವೆಂಬರು ನ್ಯಾಯವೈಶೇಷಿಕರುಗಳು. ಪ್ರಕೃತಿ ಪುರುಷ ವಿವೇಕದಿಂದವೆ ಅವಿದ್ಯಾನಾಶವೇ ಮೋಕ್ಷವೆಂಬರು ಸಾಂಖ್ಯರು. ಯೋಗಾಭ್ಯಾಸಬಲದಿಂ ಮನೋಲಯ ದ್ವಾರ ದಿಂದವೆ ಅಜ್ಞಾನದಳಿವೇ ಮೋಕ್ಷವೆಂಬರು ಪಾತಂಜಲರು ಬ್ರಹ್ಮಾತ್ಮೈಕ್ಯ ತತ್ತ್ವ ಜ್ಞಾನದಿಂ ವ್ಯವಹಾರಿಕ ಬಂಧನಿವೃತ್ತಿಯೆ ಮೋಕ್ಷವೆಂಬರು ವೇದಾಂತಿಗಳು. ಪ್ರವಾಹೇಶ್ವರತ್ವದಿಂದೀಶ್ವರತ್ವವನವ್ಯಗ್ರಿತ್ತು ಆತ್ಮನು ಜ್ಞಪ್ತಿಮಾತ್ರದಿಂದಿರ್ಪುದೇ ಮೋಕ್ಷವೆಂಬರು ಪಾಶುಪತರು. ಕರ್ತೃತ್ವವೆ ಸಂಸಾರವಪ್ಪುದರಿಂದ ಅದನುಳಿದು ಜ್ಞಪ್ತಿಮಾತ್ರದಿಂದಿಹುದೇ ಮೋಕ್ಷವೆಂಬರು ಕಾಪಾಲಿಕ ಮಹಾವ್ರತರು. ಆತ್ಮಂಗೆ ಷಡಧ್ವಾತೀತ ಶಿವಸಮಾನತ್ವವೇ ಮೋಕ್ಷವೆಂಬರು ಸಿದ್ಧಾಂತಿಗಳೆಂದು ವಿವರಿ ಸಲ್ಪಟ್ಟಿರ್ಪುದು. ೩೬

ಮತಾಂತರ ಭೇದ :

ಬಳಿಕಾ ವಾದಿಗಳಲ್ಲಿ ಚಾರ್ವಾಕ, ಜೈನ, ಬೌದ್ಧ, ಮೀಮಾಂಸಕ, ಸಾಂಖ್ಯ ರೆಂಬವರೆ ನಿರೀಶ್ವರ ವಾದಿಗಳು. ಮಿಕ್ಕವರೆಲ್ಲರುಂ ಈಶ್ವರವಾದಿಗಳಕ್ಕುಂ. ಮತ್ತಮಾ ವಾದಿಗಳಲ್ಲಿ ಚಾರ್ವಾಕಾದಿಗಳೆಲ್ಲರು ಭೇದವಾದಿಗಳು. ವೇದಾಂತಿಯೋರ್ವನೆ ಅಭೇದ ವಾದಿಯಪ್ಪಂ. ೩೭

ಚತುರ್ದಶ ವಿದ್ಯೆಗಳು :

ಬಳಿಕಿಂತು ಪೇಳ್ದ ಸಕಲ ಶಾಸ್ತ್ರಂಗಳೊಳಗೆ ವೇದನಾಲ್ಕು, ವೇದಂಗವಾರು, ನ್ಯಾಯಮೀಮಾಂಸೆಯೆಂಬೆರಡು, ಸ್ಮೃತಿಪುರಾಣವೆಂಬೆರಡು ಕೂಡಿ ಹದಿನಾಲ್ಕು ವಿದ್ಯೆಗಳೆನಿಸಿ ಕೊಳುತ್ತಿರ್ಕುಂ. ೩೮

ಸೂತ್ರ ವಿಚಾರ :

ಮತ್ತಮಾ ಚತುರ್ದಶ ವಿದ್ಯೆಗಳೊಳಗೆ ಮೀಮಾಂಸೆಯೆಂಬುದೇ ಮಿಗೆ ವಿಶಿಷ್ಟ ಮಾಗಿ ಇಪ್ಪತ್ತಧ್ಯಾಯವೆನಿಸಿ ಅರ್ಥಪ್ರತಿಪಾದಕದಿಂ ದ್ವಿಭಾಗವಾಗಿಹುದು.

ಅವರೊಳಗೆ ಮೊದಲ ಭಾಗವೇ ಜೈಮಿನಿ ಸೂತ್ರರೂಪದಿಂ ದ್ವಾದಶಾಧ್ಯಾಯಮೆನಿಸಿ ಕರ್ಮಾರ್ಥಪ್ರತಿಪಾದಕವಾಗಿ ಲೋಕವೇದಾದಿಕರಣವೆಂಬುದು ಮೊದಲಾದ ಸಹಸ್ರನ್ಯಾಯದಿಂ ಪೂರ್ವಮೀಮಾಂಸೆಯೆನಿಸಿಕೊಂಬುದು ಆ ಜೈಮಿನಿ ಸೂತ್ರಕ್ಕೆ ಶಾಬರವೆಂಬ ಭಾಷ್ಯಂ ಮಾಡಲ್ಪಟ್ಟಿತ್ತು. ಮತ್ತಮಾ ಮೀಮಾಂಸಾ ಶಾಸ್ತ್ರಕ್ಕೆ ಭಟ್ಟಾಚಾರ್ಯರಿಂ ವಾರ್ತಿಕರೂಪಮಾಗಿ ಭಾಟ್ಟವೆಂಬುದೊಂದು ಮತ್ತೊಂದು ಮತಾಂತರಂ ರಚಿತವಾಯಿತ್ತು. ಬಳಿಕಾ ಭಟ್ಟಾಚಾರ್ಯರ ಶಿಷ್ಯರಾದ ಪ್ರಭಾಕರ ಗುರುಗಳಿಂದ ಆ ಶಾಬರ ಭಾಷ್ಯಕ್ಕೆ ಪ್ರಾಭಾಕರವೆಂಬುದೊಂದು ಮತಾಂತರಂ ಪೇಳಲ್ಪಟ್ಟಿತ್ತು. ೩೯

ಬಳಿಕಲೆರಡನೆಯ ಭಾಗವೇ ಬ್ರಹ್ಮಾರ್ಥಪ್ರತಿಪಾದಕತ್ವದಿಂದುತ್ತರ ಮೀಮಾಂಸೆಯೆನಿಸಿಕೊಂಡು, ವ್ಯಾಸ ಸೂತ್ರರೂಪದಿಂದೆಂಟಧ್ಯಾಯಮಾಗಿಹುದದ ರೊಳಗೆ, ಪೂರ್ವದ ನಾಲ್ಕಧ್ಯಾಯಮೆ ದೇವತಾ ಕಾಂಡಮೆನಿಸಿ ಕೊಂಬುದುದರಲ್ಲಿ ಮಂತ್ರವಾದದಂತೆ ದೇವತಾ ಲಕ್ಷಣವೆ ಬಲಭದ್ರರಾಮನಿಂ ಪ್ರತಿಪಾದಿಸಲ್ಪಟ್ಟಿತ್ತು. ಬಳಿಕುತ್ತರಮಾದ ನಾಲ್ಕಧ್ಯಾಯಮೆ ಬ್ರಹ್ಮಕಾಂಡ ಮೆನಿಸಿಕೊಂಬುದು. ಅದರೊಳಗೆ ಬ್ರಹ್ಮಾತ್ಮೈಕತ್ವ ಪ್ರತಿಪಾದಕವಾಗಿ ಶಂಕರಾಚಾರ್ಯರಿಂ ಭಾಷ್ಯಂಗೈಯಲ್ಪಟ್ಟಿತ್ತು. ಬಳಿಕಾ ಭಾಷ್ಯಕ್ಕೆ ವಿವರಣಾಚಾರ್ಯರಿಂ ವಿವರಣಂ ಮಾಡಲ್ಪಟ್ಟಿತ್ತು. ಮತ್ತಮಾ ವಿವರಣವೇ ವೇದಾಂತ ಶಾಸ್ತ್ರವೆನಿಸಿಕೊಳುತ್ತಿರ್ಕುಂ. ೪೦

ವೇದಾಂತ ಶಾಸ್ತ್ರಕ್ರಮ :

ಅನಂತರವೆಂತು ವೇದಾಂತ ಶಾಸ್ತ್ರದರ್ಥ ವಿಸ್ತಾರವೆಂತೆಂದೊಡೆ : ಆಶೀರ್ವಾದ, ನಮಸ್ಕಾರ, ವಸ್ತುನಿರ್ದೇಶವೆಂಬವೆ ಶಾಸ್ತ್ರಾರಂಭದಲ್ಲಿ ಮಾಳ್ಪ ಮಂಗಳಾಚರಣ ತ್ರಯಂಗಳು ೪೧

ವ್ಯಾಖ್ಯಾನಪಂಚ ಲಕ್ಷಣಗಳು :

ಪದ, ಪದಾರ್ಥ, ವಾಕ್ಯಯೋಜನೆ, ಪ್ರಶ್ನೆ, ಪರಿಹಾರವೆಂಬವೆ ವ್ಯಾಖ್ಯಾನ ಪಂಚಲಕ್ಷಣಂಗಳು. ೪೨

ಅನ್ವಯ ಲಕ್ಷಣ :

ವಿಶೇಷಣ, ವಿಶೇಷ್ಯ, ಕರ್ತೃ, ಕರ್ಮ, ಕ್ರಿಯೆಗಳೆಂಬವೆ ಅನ್ವಯ ಪಂಚ ಲಕ್ಷಣಂಗಳು. ೪೩

ಅನುಬಂಧ ಚತುಷ್ಟಯ :

ವಿಷಯ, ಸಂಬಂಧ, ಪ್ರಯೋಜನ, ಅಧಿಕಾರಗಳೆಂಬವೆ ಶಾಸ್ತ್ರಕ್ಕನುಬಂಧ ಚತುಷ್ಟಯಂಗಳವರಲ್ಲಿ, ಶಾಸ್ತ್ರಕ್ಕೆ ಜೀವಬ್ರಹ್ಮರೇಕತ್ವವೇ ವಿಷಯವೆನಿಸೂದು.

ಬ್ರಹ್ಮ ಶಾಸ್ತ್ರಂಗಳಿಗೆ ಪ್ರತಿಪಾದ್ಯ, ಪ್ರತಿಪಾದಕ ಭಾವವೇ ಸಂಬಂಧವೆನಿಸೂದು. ಸಕಲ ದುಃಖನಿವೃತ್ತಿಯಿಂ ನಿತ್ಯಾನಂದ ಪದ ಪ್ರಾಪ್ತಿಯೇ ಪ್ರಯೋಜನವೆನಿಸೂದು. ಸಾಧನ ಚತುಷ್ಟಯ ಸಂಪನ್ನನೇ ಅಧಿಕಾರಿಯಪ್ಪಂ.

### ಸಾಧನ ಚತುಷ್ಟಯ :

ಬಳಿಕ ನಿತ್ಯಾನಿತ್ಯ ವಸ್ತುವಿವೇಕ, ಇಹಾಮುತ್ರ ಫಲ ಭೋಗವಿರಾಗ, ಶಮೆ, ಮುಮುಕ್ಷುತ್ವವೆಂಬವೆ ಸಾಧನ ಚತುಷ್ಟಯಂಗಳವರಲ್ಲಿ : ಚಿದ್ರೂಪನಾದಾತ್ಮನೇ ನಿತ್ಯನು, ಮಿಕ್ಕ ವಿಷಯವೆಲ್ಲಂ ಮಿಥ್ಯೆಯೆಂದು ತಿಳಿವುದೇ ನಿತ್ಯಾನಿತ್ಯವಸ್ತು ವಿವೇಕವೆನಿಸೂದು. ಇಹ ಪರಂಗಳಲ್ಲಿಯು ವನಿತಾದಿ ವಿಷಯ ಭೋಗವೆಲ್ಲಂ ಕರ್ಮಜನ್ಯಮಪ್ಪುದರಿಂದ ನಿತ್ಯಮಾಗಿಯುಂ ಸಂಪಾದಿಸುವಾದಿ, ಭೋಗಿಸಿದಂತ್ಯಂಗಳಲ್ಲಿ ಕ್ರಮದಿಂ ಮಹಾಪ್ರಯಾಸ ವೈರಂಗಳಪ್ಪುದರಿಂದವು ದುಃಖರೂಪವೆಂದು ಮನವೆಳಸದಿಹುದೇ ಇಹಾಮುತ್ರ ಫಲಭೋಗ ವಿರಾಗವೆನಿಸೂದು. ದಮೆ ಮೊದಲಾದಾರು ಸದ್ಗುಣ ಸಿದ್ಧಿಯೇ ಶಮೆಯೆನಿಸೂದು. ಸಹಜ ಸಾಯುಜ್ಯ ರೂಪ ಮೋಕ್ಷಾಪೇಕ್ಷೆಯೇ ಮುಮುಕ್ಷುತ್ವಮಕ್ಕುಂ. ೪೫

### ಶಮಾದಿ ಷಟ್ಕ :

ಬಳಿಕ ಶಮೆ, ದಮೆ, ತಿತೀಕ್ಷೆ, ಉಪರತಿ, ಶ್ರದ್ಧೆ, ಸಮಾಧಿಗಳೆಂಬವೆ ಶಮಾದಿ ಗುಣಷಟ್ಕಂಗಳವರಲ್ಲಿ : ಅಂತಃಕರಣ ನಿಗ್ರಹವೇ ಶಮೆ ಬಾಹ್ಯಕರಣ ನಿಗ್ರಹವೇ ದಮೆ. ಕ್ರೋಧಾದಿಗಳ ಸೈರಿಸೂದೇ ತಿತೀಕ್ಷೆ, ಸಕಲಧರ್ಮಪರಿತ್ಯಾಗವೇ ಉಪರತಿ. ಶ್ರುತಿ, ಗುರುಗಳಲ್ಲಿಯು ವಿಶ್ವಾಸವೇ ಶ್ರದ್ಧೆ. ಗುರೂಪದೇಶಮಂ ಚಿತ್ತದಲ್ಲಿ ದೃಢವಿಡುವುದೇ ಸಮಾಧಿಯಕ್ಕುಂ. ೪೬

### ಗುರುಸೇವಾ ಲಕ್ಷಣ :

ಬಳಿಕ ಸಾಧನ ಸಂಪನ್ನನಾದ ಅಧಿಕಾರಿಯಿಂ ಮಾಳ್ಪ ಸದ್ಗುರು ಸೇವೆಯಾದೊಡೆ ಆಪ್ತ, ಅಂಗ, ಸ್ಥಾನ, ಸದ್ಭಾವವೆಂದು ನಾಲ್ಕು ತೆರನಾಗಿಹುದವರಲ್ಲಿ : ಗುರುವಿಗನುಕೂಲ ವೃತ್ತಿಯೇ ಆಪ್ತವೆನಿಸೂದು. ಗುರುಪಾದ ಪ್ರಕ್ಷಾಲನಾದಿಕವೇ ಅಂಗವೆನಿಸೂದು. ಗುರುವಿನ ಗೃಹ, ಕ್ಷೇತ್ರರಕ್ಷಣಾದಿಕವೇ ಸ್ಥಾನವೆನಿಸೂದು. ಶ್ರೀ ಗುರುವೇ ಸಾಕ್ಷಾಚ್ಛಿವನೆಂಬ ವಿಶ್ವಾಸವೇ ಸದ್ಭಾವಮಕ್ಕುಂ. ೪೭

### ಅಧಿಕಾರಿ ಪ್ರಭೇದ :

ಬಳಿಕ ಕರ್ಮಕಾಂಡಿ, ಭಕ್ತಿಕಾಂಡಿ, ಜ್ಞಾನಕಾಂಡಿಯೆಂದು ಬೇರೆ ಬೇರೆ ಮೂವರಧಿಕಾರಿಗಳುಂಟವರಲ್ಲಿ : ದೇಹ ಗೃಹ ಕೃತ್ಯಾದಿಗಳಲ್ಲಿ ಕ್ರಮದಿಂ ನಾನು ನನ್ನದೆಂಬ ಅಹಂಕಾರ ಮಮಕಾರಗಳುಳ್ಳಾತನೇ ಕರ್ಮಕಾಂಡಿಯೆನಿಸುವನು. ಸಕಲಕ್ರಿಯೆಗಳನು ಈಶ್ವರಾರ್ಪಣಂಗೆಯ್ವಾತನೇ ಭಕ್ತಿಕಾಂಡಿಯೆನಿಸುವನು ಸರ್ವಕರ್ಮ ಸಾಕ್ಷಿಕನು ತಾನೆಂಬಾತನೇ ಜ್ಞಾನಕಾಂಡಿಯಪ್ಪಂ. ೪೮

## ಪಂಚಾಧಿಕಾರಿಗಳು :

ಬಳಿಕ ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ, ಆರೂಢರೆಂದುತ್ತರೋತ್ತರ ವಿಶಿಷ್ಟಮಾದಧಿಕಾರಿ ಪಂಚವಿಧಂಗಳವರಲ್ಲಿ : ಮೂಢತನದಿಂ ತನ್ನ ಜಾತಿಮಾತ್ರದ ಕರ್ಮವಿಡಿದು ಶತಜನ್ಮದಿಂ ಮುಕ್ತನಪ್ಪಾತನೇ ಕರ್ಮಿ. ಜಗತ್ಸತ್ಯವೆಂದು ತಿಳಿದು ಬಾಹ್ಯಕರ್ಮನಿಷ್ಟನಾಗಿ ಮೂರು ಜನ್ಮದಿಂ ಮುಕ್ತನಪ್ಪಾತನೇ ಮುಮುಕ್ಷು. ಸ್ವಪ್ನದಂತೆ ಪ್ರಪಂಚವೆಲ್ಲಂ ಮಿಥ್ಯೆಯೆಂದು ಅಭ್ಯಂತರದಲ್ಲಿ ಕರ್ಮಯುಕ್ತನಾಗಿ ಜನ ದ್ವಯದಿಂ ಮುಕ್ತನಪ್ಪಾತನೇ ಅಭ್ಯಾಸಿ. ವ್ಯವಹಾರವನುಪೇಕ್ಷಿಸಿ ವಿವೇಕ ತತ್ಪರನಾಗಿ ಏಕಜನ್ಮದಿಂ ಮುಕ್ತನಪ್ಪಾತನೇ ಅನುಭವಿ. ವಿಶ್ವವಿಕೃತಿದೋರದೆ ಆತ್ಮಜ್ಞಾನದಿಂ ಸದ್ಯೋನ್ಮುಕ್ತನಪ್ಪಾತನೇ ಆರೂಢನಪ್ಪಂ ೪೯

## ಪುನರಧಿಕಾರಿತ್ರಯ :

ಬಳಿಕ ಈ ಜಗತ್ತೆಂಬ ಕಮಲವಲ್ಲರಿಯ ಮೂಲವಾವುದೋ ಎಂಬ ವಿಚಾರ ಮುಖದಿಂ ಶ್ರೀಗುರುವನೆಯ್ದಿ ಬ್ರಹ್ಮಜ್ಞಾನಿಯಾಗಿ ಮುಕ್ತಿವಡೆವಾತನೋರ್ವನು. ದೇಹಾದಿಗಳ ಅನಿತ್ಯತೆಯಂ ಕಂಡು ಭೋಗಾಪೇಕ್ಷೆದೋರದೆ ಶ್ರೀಗುರುವನೆಯ್ದಿ ತತ್ವಜ್ಞಾನಿಯಾಗಿ ಮೋಕ್ಷಂಬಡೆವಾತನೋರ್ವನು. ಒಬ್ಬಾನೊಬ್ಬ ಶ್ರೀಗುರು ತನ್ನ ಶಿಷ್ಯಂಗುಪದೇಶಿಯುವುದಂ ಕೇಳ್ದಾಕಸ್ಮಿಕದಿಂದಾತ್ಮಜ್ಞಾನಿಯಾಗಿ ನಿರ್ವಾಣಂಬಡೆವಾತನೋರ್ವಂ. ಇಂತು ವಿವೇಕ ವಿರಕ್ತಿ ದೈವಗತಿಯಿಂ ಮುಕ್ತರಪ್ಪವರೆ ಬೇರೆ ಮೂವರಧಿಕಾರಿಗಳಕ್ಕುಂ. ೫೦

## ಅಷ್ಟಗುರು ಲಕ್ಷಣ :

ಮತ್ತಮಾ ಶ್ರೀಗುರುವೆಸಾಧಕರಾದ ಶಿಷ್ಯರಧಿಕಾರ ಭೇದದಿಂ ಬೋಧಕಗುರು, ವೇದಕಗುರು, ನಿಷಿದ್ಧಗುರು, ಕಾಮ್ಯಗುರು, ಸೂಚಕಗುರು, ವಾಚಕಗುರು, ಕಾರಕಗುರು, ವಿಹಿತಗುರುವೆಂದೆಂಟು ತೆರನಾಗಿರ್ಪರವರಲ್ಲಿ: ಶಾಸ್ತ್ರ ಶಬ್ದಾರ್ಥಂಗಳನರುಹುವಾತನೆ ಬೋಧಕಗುರು. ತತ್ವದರ್ಶಕನೇ ವೇದಕಗುರು. ವಶ್ಯಾಕರ್ಷಣಾದಿಗಳಿಂದಿಹ ಲೋಕದಲ್ಲಿ ಸುಖ, ಪರಲೋಕದಲ್ಲಿ ದುಃಖಂಗಳನೀವಾತನೇ ನಿಷಿದ್ಧಗುರು. ಪುಣ್ಯಕರ್ಮೋಪದೇಶದಿಂದಿಹ ಪರಂಗಳಲ್ಲಿಯು ಸುಖಪ್ರದನೇ ಕಾಮ್ಯಗುರು. ವಿವೇಕ ಮುಖದಿಂ ಶಮದಮಾದಿ ಸದ್ಗುಣಪ್ರದನೇ ಸೂಚಕಗುರು. ವಿಷಯಂಗಳ ಮಿಥ್ಯಾ ಪ್ರದರ್ಶನದಿಂದಾತ್ಮಾನುರಾಗಪ್ರದನೇ ವಾಚಕಗುರು. ಶಿವಜೀವರೈಕ್ಯಜ್ಞಾನ ಪ್ರದನೇ ಕಾರಕಗುರು. ಸಂಶಯ ನಿರಸನದ್ವಾರದಿಂ ನಿತ್ಯಮುಕ್ತಿ ಪ್ರದನೇ ವಿಹಿತ ಗುರುವಕ್ಕುಂ. ೫೧

ಶಿಷ್ಯೋಪಸನ್ನತಿ :

ಮತ್ತಮಾ ಸದ್ಗುರು ಸಚ್ಛಿಷ್ಯರುಗಳ ಮಧ್ಯದೊಳಾವನಾನೋರ್ವ ಅಧಿಕಾರಿಯು ತಾಪತ್ರಯಾಗ್ನಿಯಿಂ ಬೆಂದು ವ್ಯಾಕುಲಿತಚಿತ್ತನಾಗಿ, ಆನಾರು, ಎನಗೀ ಸಂಸಾರವೇನು ಕಾರಣಂ ಬಂದಿತ್ತು, ಇದಾರ ಮುಖದಿಂ ನಿವೃತ್ತಿಯಹುದೆಂದು ವಿಚಾರಿಸಿ ನೋಡಿ, ಪತ್ರ ಪುಷ್ಪ ಫಲಾದಿ ಸಹಪಾಣಿಯಾಗಿ, ವಿದ್ಯಾವಿನಯ ವೈರಾಗ್ಯಾದಿ ಸದ್ಗುಣ ಸಮೇತನಾದ ಶ್ರೀಗುರುವನೆಯ್ದಿ "ಚೈತನ್ಯಂ ಶಾಶ್ವತಂ ಶಾಂತಂ" ಎಂಬುದು ಮೊದಲಾದಷ್ಟಮಂತ್ರಪೂರ್ವಕವಾಗಿ, ಪದದ್ವಯ, ಕರದ್ವಯ, ಭುಜದ್ವಯ, ಲಲಾಟವಕ್ಷದ್ವಯಗಳೆಂಬ ಅಷ್ಟಾಂಗಂ ನೆಲ ಸೋಂಕುವಂತೆ ಪ್ರಣತನಾಗಿ, ಬಳಿಕೆದ್ದು ಭಯ ಭಕ್ತಿಯಿಂ ಕರಕಮಲಮಂ ಮುಗಿದು, ಕಿಂಕರಭಾವಂ ಕೈಮಿಕ್ಕು ಕಾರ್ಪಣ್ಯಂದೋರಿ, ಕೂರ್ಮೆಯಿಂ ಕೊಂಡಾಡಿ, ಜ್ಞಾನ, ವೈರಾಗ್ಯ, ಬಲೈಶ್ವರ್ಯ, ಕೀರ್ತಿ, ಶ್ರೀಗಳೆಂಬ ಷಡ್ಗುಣ ಸಮಗ್ರತೆಯಿಂ, ಭಗವಾನ್‌ವಾದ ಎಲೆ ಸದ್ಗುರುವೆ, ಆಯಾಸವಿಲ್ಲದೆ ಆವ ತೆರದಿಂದೆನಗೆ ಈ ಭವಬಂಧನಂ ಬಿಡುವುದೆಂದು ಬಿನ್ನಪಂಗೆಯ್ವುದೇ ಶಿಷ್ಯನ ವಿಧಿವದುಪಸನ್ನತ್ವಮಕ್ಕುಂ. ೫೨

ಉಪದೇಶಕ್ರಮ :

ಮತ್ತಮಾ ಉಪಸನ್ನನಾದ ಶಿಷ್ಯನಧಿಕಾರವಂ ಪರೀಕ್ಷಿಸಿ ಕೃಪಾಲೋಚನದಿಂ ನೋಡಿ ಅಂಜದಿರೆಂದಭಯ ಕರವಂ ಶಿರದೊಳಿಟ್ಟು, ಶ್ರುತಿಯುಕ್ತಿಗಳಿಂದಾತನ ದೇಹಾದ್ಯಾತ್ಮಬುದ್ಧಿಯಂ ನೇತಿಗಳೆದು, ನೀನೆ ಪರಬ್ರಹ್ಮವೆಂದು ಉಳ್ಳುದನರುಹುವುದೇ ಶ್ರೀಗುರುವಿನ ಉಪದೇಶಮಕ್ಕುಂ. ೫೩

ಬೋಧ ಪ್ರಕಾರತ್ರಯ :

ಮತ್ತಮಾ ಉಪದೇಶಕ್ರಮದಲ್ಲಿ ಉದ್ದೇಶ, ಲಕ್ಷಣ, ಪರೀಕ್ಷೆಯೆಂಬವೇ ಬೋಧಪ್ರಕಾರತ್ರಯಂಗಳವರಲ್ಲಿ : ತಾನು ಸಮರ್ಥಿಸಲಿಷ್ಟಮಾದ ವಸ್ತುವಂ ನಾಮಮಾತ್ರದಿಂ ಕೀರ್ತಿಪುದೇ ಉದ್ದೇಶವೆನಿಸೂದು. ಗಂಗೆದೊಗಲುಳ್ಳುದೆ ಗೋವೆಂಬಂತೆ ಬಳಿಕಾ ವಸ್ತುವಿನ ಅಸಾಧಾರಣ ಧರ್ಮಮಂ ಪೇಳೂದೆ ಲಕ್ಷಣವೆನಿಸೂದು. ಲಕ್ಷಿತಮಾದ ವಸ್ತುವಿಗಾ ಲಕ್ಷಣಮುಂಟೋ ಇಲ್ಲವೋ ಎಂದು ವಿಚಾರಂಗೆಯ್ವುದೇ ಪರೀಕ್ಷೆಯಕ್ಕುಂ. ೫೪

ಪ್ರಮಾಣ ವಿಭಾಗ :

ಬಳಿಕ ಪ್ರತ್ಯಕ್ಷ ಪ್ರಮಾಣ, ಅನುಮಾನ ಪ್ರಮಾಣ, ಆಗಮ ಪ್ರಮಾಣ, ಅರ್ಥಾಪತ್ತಿಪ್ರಮಾಣ, ಉಪಮಾನಪ್ರಮಾಣ, ಅಭಾವಪ್ರಮಾಣ,

ಸಂಭವಪ್ರಮಾಣ, ಐತೀಹ ಪ್ರಮಾಣವೆಂಬವೆ ವಸ್ತುಸಿದ್ಧಿಗಷ್ಟ ಪ್ರಮಾಣಂಗಳ ವರಲ್ಲಿ : ಘಟಾದಿ ದರ್ಶನವೇ ಪ್ರತ್ಯಕ್ಷ ಪ್ರಮಾಣವೆನಿಸೂದು. ಧೂಮದಿಂದಗ್ನಿ ಜ್ಞಾನವೇ ಅನುಮಾನ ಪ್ರಮಾಣವೆನಿಸೂದು.

ಬಳಿಕಾ ಅನುಮಾನ ಪ್ರಮಾಣಕ್ಕೆ ಪ್ರತಿಜ್ಞೆ, ಹೇತು, ದೃಷ್ಟಾಂತ ನೆಂಬಂಗತ್ರಯಂಗಳುಂಟವರಲ್ಲಿ : ಪರ್ವತ ಅಗ್ನಿಯುಳ್ಳುದೆಂಬುದೇ ಪ್ರತಿಜ್ಞೆಯೆನಿ ಸೂದು. ಧೂಮಉಳ್ಳುದಾದ ಕಾರಣ ಹೇತುವೆನಿಸೂದು. ಮಹಾನಸದಂತೆ ಎಂಬುದೇ ದೃಷ್ಟಾಂತಮಕ್ಕುಂ.

ಬಳಿಕ ಯಥಾದೃಷ್ಟಾರ್ಥವಾದಿಯಾದ ಆಪ್ತವಚನದಿಂ ನದೀತೀರಾದಿಕದಲ್ಲಿಯು ಫಲಾದಿ ಸದ್ಭಾವ ಜ್ಞಾನವೇ ಆಗಮ ಪ್ರಮಾಣವೆನಿಸೂದು.

ಬಳಿಕ ಅರ್ಥಾಪತ್ತಿ ಪ್ರಮಾಣದಲ್ಲಿ ದೃಷ್ಟಾರ್ಥಾಪತ್ತಿ,ಶೃತಾರ್ಥಾಪತ್ತಿಯೆಂದು ಇತ್ತೆರನುಂಟವರಲ್ಲಿ

ಪಗಲುಣ್ಣದ ದೇವದತ್ತನ ದೇಹದ ಪೀನತ್ವಮಂ ಕಂಡು ರಾತ್ರಿಭೋಜ ನಮಂ ಕಲ್ಪಿಸೂದೇ ದೃಷ್ಟಾರ್ಥಪತ್ತಿಯೆನಿಸೂದು. ಬದುಕಿರ್ದ ದೇವದತ್ತನಂ ಗೃಹದಲ್ಲಿಲ್ಲಾ ಎಂದೊಡೆ ಸ್ಥಾನಾಂತರದಲ್ಲಿರ್ಪನೆಂದು ತಿಳಿವುದೇ ಶ್ರುತಾರ್ಥಾಪತ್ತಿ ಪ್ರಮಾಣವೆನಿಸೂದು.

ಗೋವಿಗೆ ಸದೃಶವಾದ ಮರೆಯೆಂಬ ವಾಕ್ಯಶ್ರವಣಾನಂತರದಲ್ಲಿ ವನವನ್ನೈದಿ ದಾತಂಗೆ ತದ್ವಿಷಯಜ್ಞಾನವೇ ಉಪಮಾನ ಪ್ರಮಾಣವೆನಿಸೂದು.

ಈ ಭೂತಲದಲ್ಲಿ ಘಟವಿಲ್ಲವೆಂಬುದರಿಂದಾ ಘಟಾಭಾವಜ್ಞಾನವೆ ಅಭಾವ ಪ್ರಮಾಣವೆನಿಸೂದು. ಸಾವಿರ ಸಂಖ್ಯೆಯಲ್ಲಿ ಶತಸಂಖ್ಯೆಯುಂಟೆಂಬ ಜ್ಞಾನವೇ ಸಂಭವ ಪ್ರಮಾಣವೆನಿಸೂದು. ಈ ವಟವೃಕ್ಷದಲ್ಲಿ ಯಕ್ಷವಿರ್ಪುದೆಂಬ ಲೋಕ ವಾರ್ತೆಯಿಂದ ಆ ಯಕ್ಷ ವಿಷಯ ಜ್ಞಾನವೇ ಐತೀಹ ಪ್ರಮಾಣಮಕ್ಕುಂ. ೫೫

ಬಳಿಕೀ ಪ್ರಮಾಣಂಗಳಲ್ಲಿ ಚಾರ್ವಾಕರಿಗೆ ಪ್ರತ್ಯಕ್ಷ ಪ್ರಮಾಣವೊಂದು. ಜೈನ,ಬೌದ್ಧ, ವೈಶೇಷಿಕರ್ಗೆ ಅನುಮಾನ ಪ್ರಮಾಣಂಗೂಡಿದೆರಡು. ಸಾಂಖ್ಯರ್ಗೆ ಆಗಮಂಗೂಡಿದ ಮೂರು. ನ್ಯಾಯೈಕದೇಶಿಗಳ್ಗೆ ಉಪಮಾನಂಗೂಡಿ ನಾಲ್ಕು. ಪ್ರಾಭಾಕರರಿಗೆ ಅರ್ಥಾಪತ್ತಿಯೊಡಗೂಡಿದ್ಬೆದು ಭಾಟ್ಟರು ವೇದಾಂತಿಗಳ್ಗೆ ಅಭಾವಂ ಗೂಡಿದಾರು. ಪೌರಾಣಿಕರಿಗೆ ಸಂಭವೈತೀಹಂಗಳೊಡಗೂಡಿದೆಂಟು ಪ್ರಮಾಣವೆಂದು ವಿವರಿಸಲ್ವೇಳ್ಕುಂ. ೫೬

## ಪದಾರ್ಥದ್ವಯಂಗಳು:

ಅನಂತರದಲ್ಲಿ ದೃಕ್ಕು ದೃಶ್ಯವೆಂಬವೆ ಪದಾರ್ಥದ್ವಯಂಗಳು. ೫೭

ದೃಗ್ದೃಶ್ಯ ವಿವೇಕ :

ಸ್ವಗತಭೇದ. ಸಜಾತೀಯಭೇದ, ವಿಜಾತೀಯಭೇದವೆಂಬವೆ ದೃಕ್ಕಿನಲ್ಲಿ ನಿರಾಕರಿಸಲ್ಪಡುವ ಭೇದತ್ರಯಂಗಳವಕ್ಕೆ ದೃಷ್ಟಾಂತ ಮೆಂತೆನೆ:- ಆ ಲೋಕದೊಳೊಂದಾನೊಂದು ವೃಕ್ಷಕ್ಕೆ ಪತ್ರ ಪುಷ್ಪ ಫಲಾದಿಗಳೆ ಸ್ವಗತ ಭೇದವೆನಿಸೂದು. ವೃಕ್ಷಾಂತರವೇ ಸಜಾತೀಯ ಭೇದವೆನಿಸೂದು. ಪಾಷಾಣಾದಿಗಳೇ ವಿಜಾತೀಯ ಭೇದಮಕ್ಕುಂ. ೫೮

ಭೇದ ನಿರಾಕರಣ :

ಬಳಿಕ ಸದ್ರೂಪ ಬ್ರಹ್ಮವು ಗಗನದಂತೆ ನಿರವಯವಪ್ಪುದರಿಂದವು ಸತ್ತೆಗೆ ಬೇರೊಂದು ಸತ್ತೆಯಿಲ್ಲಾಗಿಯುಂ ಬ್ರಹ್ಮದಲ್ಲಿ ಸ್ವಗತ ಭೇದ ಸಜಾತೀಯ ಭೇದವಿಲ್ಲದೊಡಂ, ಜಗತ್ಕಾರಣವಾದ ಮಾಯೆಯುಂಟಾಗಿ ವಿಜಾತೀಯ ಭೇದವಿಲ್ಲವೆಂಬುದೆಂತೆನೆ: ಲೋಕದಲ್ಲಿ ಚಿತ್ರಕನಿಂ ಚಿತ್ರಶಕ್ತಿಗೆ ಬೇರೆ ತೋರ್ಕೆ ಇಲ್ಲವೆಂತಂತೆ ಸನ್ಮಾತ್ರ ಬ್ರಹ್ಮದತ್ತಣಿಂ ಮಾಯೆಗೆ ವಿಲಕ್ಷಣತ್ವವೇ ಇಲ್ಲಾಗಿ ಬ್ರಹ್ಮಕ್ಕೆ ವಿಜಾತೀಯ ಭೇದವಿಲ್ಲವೆಂಬುದೇ ಸಿದ್ಧಮಕ್ಕುಂ. ೫೯

ಸಿದ್ಧಾಂತ ಶ್ರುತಿ :

ಬಳಿಕೀಯರ್ಥದಲ್ಲಿ "ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶ್ರುತಿ ವಾಕ್ಯದಲ್ಲಿ ಏಕಂ, ಏವ, ಅದ್ವಿತೀಯಮೆಂಬ ಪದತ್ರಯಕ್ಕೆ ಐಕ್ಯ, ಅವಧಾರಣೆ, ದ್ವೈತ ನಿಷೇಧಮೆಂದರ್ಥತ್ರಯಮಪ್ಪುದರಿಂದಾ ಕ್ರಮದಿಂದವೆ, ಬ್ರಹ್ಮದಲ್ಲಿ ಸ್ವಗತ, ಸಜಾತೀಯ, ವಿಜಾತೀಯಮೆಂಬ ಭೇದತ್ರಯಂಗಳಿಲ್ಲವೆಂಬುದೇ ಪ್ರಾಮಾಣ್ಯಮಕ್ಕುಂ. ೬೦

ಅಧ್ಯಾರೋಪ ವಿವೇಕ :

ಬಳಿಕ ಅಧ್ಯಾರೋಪ, ಅಪವಾದವೆಂಬವೇ ಕಲ್ಪಿತದ್ವಯಂಗಳವರಲ್ಲಿ ಉಳ್ಳ ರಜ್ಜು, ಶುಕ್ತಿ, ಸ್ಥಾಣ್ವಾದಿಗಳಲ್ಲಿ ಕ್ರಮದಿಂದಲ್ಲದ ಅಹಿ, ರಜತ, ಚೋರಾದಿಗಳಂ ಕಲ್ಪಿಸುವಂತೆ, ಸದ್ರೂಪ ಬ್ರಹ್ಮದಲ್ಲಿಲ್ಲದ ಮಾಯಾಪ್ರಪಂಚದ ಕಲ್ಪನೆಯೇ ಅಧ್ಯಾರೋಪವೆನಿಸೂದು. ೬೧

ಅಪವಾದ ವಿವೇಕ :

ಬಳಿಕ ಇದು ಅಹಿಯಲ್ಲ ರಜ್ಜುವೇ, ಇದು ರಜತವಲ್ಲ ಶುಕ್ತಿಯೇ, ಇವನು ಚೋರನಲ್ಲ ಸ್ಥಾಣುವೇ ಎಂಬಂತೆ ವಿಚಾರಮುಖದಿಂ ಪ್ರಪಂಚವೆಲ್ಲಂ ಮಿಥ್ಯೆ ಬ್ರಹ್ಮವೇ ಸತ್ಯವೆಂಬುದೇ ಅಪವಾದಮಕ್ಕುಂ. ೬೨

## ಬ್ರಹ್ಮಲಕ್ಷಣ ವಿವೇಕ :

ಬಳಿಕ ಅತದ್ವ್ಯಾವೃತ್ತಿ ಲಕ್ಷಣ, ತಟಸ್ಥಲಕ್ಷಣ, ಸ್ವರೂಪಲಕ್ಷಣವೆಂಬವೆ ದೃಗ್ರೂಪವಸ್ತು ಸಾಕ್ಷಾತ್ಕಾರಕ್ಕುಪಾಯತ್ರಯಂಗಳವರಲ್ಲಿ : ದೇಹಾದ್ಯನಾತ್ಮ ವರ್ಗಮಂ ಯುಕ್ತಿಯಿಂ ನೇತಿಗಳೆದುಳಿದಾತ್ಮನನರುಹಿಪುದೇ ಅತದ್ವ್ಯಾವೃತ್ತಿ ಲಕ್ಷಣ ವೆನಿಸೂದು. ಶಾಖಾಗ್ರದಲ್ಲಿ ಚಂದ್ರನಿರ್ಪನೆಂಬಂತೆ ಭೂತಾದಿ ಜಗತ್ಕಾರಣತ್ವದಿಂದಾ ತ್ಮನನರುಹಿಪುದೆ ತಟಸ್ಥಲಕ್ಷಣವೆನಿಸೂದು. ಪ್ರಕೃಷ್ಟ ಪ್ರಕಾಶಸ್ವರೂಪವೇ ಸೂರ್ಯ ನೆಂಬಂತೆ ಆತ್ಮನ ನಿಜವನರುಹಿಪುದೆ ಸ್ವರೂಪಲಕ್ಷಣಮಕ್ಕುಂ. ೬೩

## ಪಂಚಲಕ್ಷಣ ವಿವೇಕ :

ಬಳಿಕ ಸತ್ತು, ಚಿತ್ತು, ಆನಂದ, ನಿತ್ಯ, ಪರಿಪೂರ್ಣವೆಂಬವೆ ಆತ್ಮನ ಪಂಚ ಸ್ವರೂಪ ಲಕ್ಷಣಂಗಳವರಲ್ಲಿ : ಅರಿಯೆನ್, ಅರಿವೆನ್, ಅರಿದೆನ್ ಎಂಬಲ್ಲಿಯುಂ, ಕಾಮಾದಿ ವೃತ್ತಿಗಳು ತೋರುವಲ್ಲಿ,ತೋರದಿಹಲ್ಲಿಯುಂ, ಜಾಗ್ರದಾವಸ್ಥೆಗಳಲ್ಲಿಯುಂ ತನಗೊಂದು ಬಾಧೆಯಿಲ್ಲದೇ ಉಂಟೆನಿಪುದೇ ಸದ್ರೂಪು. ಸರ್ವಾವಸ್ಥೆಗಲ್ಲಿಯೂ ವಿಷಯಂಗಳನೆಡವಿಡದೆ ಇದಿರಿಟ್ಟು ಅರಿವುದೇ ಚಿದ್ರೂಪು. ಪರಮ ಪ್ರೀತಿಗೆ ವಿಷಯುವಹತನವೇ ಆನಂದರೂಪು. ಸತತೋದಿತವಾಗಿರ್ಪುದೇ ನಿತ್ಯರೂಪು. ಸರ್ವಾರ್ಥಸಾಧಕವಪ್ಪುದರಿಂ ಸರ್ವಸಂಬಂಧಿತ್ವವೇ ಪರಿಪೂರ್ಣರೂಪಮಕುಂ. ೬೪

## ಆನಂದ ವಿಚಾರ :

ಬಳಿಕಿಲ್ಲಿ ಸಚ್ಚಿದಾನಂದಂಗಳಾತ್ಮಸ್ವರೂಪಮಾಗೆ ಸದ್ರೂಪು,ಚಿದ್ರೂಪುಗಳಂತೆ ಸರ್ವಬುದ್ಧಿ ವೃತ್ತಿಗಳಲ್ಲಿಯು, ಆನಂದರೂಪಕ್ಕಭಿವ್ಯಕ್ತಿಯುಂಟಾಗಬೇಕದಿಲ್ಲಾಗಿ ಆನಂದವಾತ್ಮ ಸ್ವರೂಪವಲ್ಲೆಂದೊಡದಕ್ಕೆ, ಉಷ್ಣಪ್ರಕಾಶ ರೂಪವಾದ ದೀಪದ ಪ್ರಕಾಶವೆ ಗೃಹದಲ್ಲಿ ವ್ಯಾಪಿಸುತ್ತಿಹುದು. ಉಷ್ಣವೆ ವ್ಯಾಪಕವಾಗದು. ಉದಕದಲ್ಲಿ ಉಷ್ಣವೇ ಪ್ರಕಟಿಸುತ್ತಿಹುದು. ಪ್ರಕಾಶವೇ ಪ್ರಕಟತೆಯಾಗದು. ಕಾಷ್ಠದಲ್ಲಿ ಉಷ್ಣ ಪ್ರಕಾಶವೆಂಬೆರಡಕ್ಕೆಯು ತೋರ್ಕೆಯುಹುದೆಂತಂತೆ ಪಾಷಾಣಾದಿಗಳಲ್ಲಿ ಬ್ರಹ್ಮದ ಸದ್ರೂಪಕ್ಕಭಿವ್ಯಕ್ತಿಯೈಸೆ. ಚಿದಾನಂದಂಗಳಿಗಭಿವ್ಯಕ್ತಿ ಘಟಿಸದು. ಬುದ್ಧಿಯ ತಮೋಗುಣದಿಂದ ಅಜ್ಞಾನಮಯವಾದ ಮೂಢವೃತ್ತಿಯಲ್ಲಿಯು, ರಜೋ ಗುಣದಿಂ ರಾಗಮಯವಾದ ಘೋರವೃತ್ತಿಗಳಲ್ಲಿಯು, ಸಚ್ಚಿದ್ರೂಪಂಗಳೆರಡಕ್ಕೆ ಸ್ಪಷ್ಟ ತೆಯಿಲ್ಲದೆ ಆನಂದರೂಪಕ್ಕೆ ಸ್ಪಷ್ಟತೆ ದೊರೆಕೊಳ್ಳದು. ಸತ್ವಗುಣದಿಂ ವೈರಾಗ್ಯ ಮಯವಾದ ಶಾಂತ ವೃತ್ತಿಯಲ್ಲಿ ಸಚ್ಚಿದಾನಂದವೆಂಬ ತ್ರಿರೂಪಕ್ಕೆಯು ಸ್ಫುರಣ ಮಪ್ಪುದರಿಂದಾನಂದವಾತ್ಮರೂಪಮಕ್ಕುಂ. ೬೫

ಸತ್ತಾಸ್ವರೂಪ ವಿವೇಕ :

ಬಳಿಕ ಕ್ರಮದಿಂದ ಪಂಚರೂಪಗಳಿಗುಪಾಧಿಯ ಭೇದವೆಂತೆನೆ: ವ್ಯವಹಾರಿಕ ಸತ್ತೆ, ಪ್ರಾತಿಭಾಸಿಕ ಸತ್ತೆ, ಪಾರಮಾರ್ಥಿಕ ಸತ್ತೆಯೆಂದು ಸತ್ತಾತ್ರಯಂಗಳವರಲ್ಲಿ, ಜಾಗ್ರದಲ್ಲಿಯು ಘಟಾದಿಗಳ ಸತ್ತೆಯೆ ವಿದೇಹ ಕೈವಲ್ಯ ಪರಿಯಂತರಂ ಸುಪ್ತಿ, ಮೂರ್ಛೆ ಮೊದಲಾದವಸ್ಥೆಯಲ್ಲಿ ತೋರದಿರ್ದು, ಬಳಿಕೆದ್ದು ನೋಡಿದಡೆ ಮೊದಲಂತೆ ತೋರುತ್ತಿಹುದಾಗಿ ವ್ಯವಹಾರ ಸತ್ತೆಯೆನಿಸೂದು. ಶುಕ್ತಿಕಾರಜತ, ಕನಸಿನ ವಿಷಯಾದಿಗಳ ಸತ್ತೆಯೇ ಆ ತೋರುವ ಕಾಲದಲ್ಲಿಯಲ್ಲದೆ ಎಚ್ಚತ್ತು ಮರಳಿ ಕಾಂಬ ಸ್ವಪ್ನದಲ್ಲಿಲ್ಲವಾಗಿ ಪ್ರಾತಿಭಾಸಿಕ ಸತ್ತೆಯೆನಿಸೂದು. ಸಮಸ್ತ ಕಲ್ಪನೆಗಧಿಷ್ಠಾನ ಮಾಗಿ ತೋರದಡಗದ ಬ್ರಹ್ಮದ ಸತ್ತೆಯೇ ಪಾರಮಾರ್ಥಿಕ ಸತ್ತೆಯಕ್ಕುಂ. ೬೬

ಚಿದ್ರೂಪೋಪಾದಿ ಭೇದ :

ಮತ್ತಂ ಜೀವ, ಈಶ್ವರ, ಕೂಟಸ್ಥ, ಬ್ರಹ್ಮವೆಂಬವೆ ಚಿತ್ತಿನ ಚತುರ್ವಿಧ ಭೇದಂಗಳವಕ್ಕೆ: ಘಟಜಲದಲ್ಲಿ ಪ್ರತಿಬಿಂಬಿಸಿರ್ದ ಸಾಭ್ರನಕ್ಷತ್ರಾಕಾಶ, ಮೇಘಾಂಶ ತುಷಾರಜಲದಲ್ಲಿ ಪ್ರತಿಬಿಂಬಿಸಿರ್ದ ಅನುಮಿತಾಕಾಶ, ಘಟಾವಚ್ಛಿನ್ನಾಕಾಶ, ಮಹದಾಕಾಶವೆಂಬವೇ ಕ್ರಮದಿಂ ದೃಷ್ಟಾಂತ ಚತುಷ್ಟಯಂಗಳಕ್ಕುಂ. ೬೭

ಆನಂದದೋಪಾದಿ ಭೇದ :

ಮತ್ತಂ ವಿಷಯಾನಂದ, ಬ್ರಹ್ಮಾನಂದ, ವಾಸನಾನಂದ, ಮುಖ್ಯಾನಂದ, ನಿಜಾನಂದ, ಆತ್ಮಾನಂದ, ಅದ್ವೈತಾನಂದ, ವಿದ್ಯಾನಂದವೆಂಬ ಆನಂದದಷ್ಟ ಭೇದಂಗಳವರಲ್ಲಿ :

ವನಿತಾದಿವಿಷಯ ಲಾಭಮಾದಲ್ಲಿ ತೋರ್ಪುದೇ ವಿಷಯಾನಂದವೆನಿಸೂದು.

ನಿದ್ರಾ ಸಮಯದಲ್ಲಿ ತೋರ್ಪುದೇ ಬ್ರಹ್ಮಾನಂದವೆನಿಸೂದು.

ನಿದ್ರೆ ತಿಳಿದಾಕ್ಷಣದಲ್ಲಿಯೆ ತೋರ್ಪುದೇ ವಾಸನಾನಂದವೆನಿಸೂದು

ಹಾನೋಪಾದಾನವಿಲ್ಲದುಪೇಕ್ಷಾಬುದ್ಧಿಯಲ್ಲಿ ತೋರ್ಪುದೇ ಮುಖ್ಯಾನಂದವೆನಿಸೂದು.

ಯೋಗಾಭ್ಯಾಸಬಲದಿಂ ಮನೋಲಯಮಾದಲ್ಲಿ ತೋರ್ಪುದೇ ನಿಜಾನಂದವೆನಿಸೂದು.

ಪ್ರಿಯಮಾದ ವನಿತಾದಿ ವಿಷಯಂಗಳ ಮಧ್ಯದಲ್ಲಿತಾನೇ ಪ್ರಿಯತಮನೆಂದರಿದಲ್ಲಿ ತೋರ್ಪುದೇ ಆತ್ಮಾನಂದವೆನಿಸೂದು.

ನಾಮ ರೂಪ ಪ್ರಪಂಚವೆಲ್ಲಂ ಮಿಥ್ಯೆ, ತಾನೇ ಸತ್ಯನೆಂಬ ವಿವೇಕದಲ್ಲಿ ತೋರ್ಪುದೇ ಅದ್ವೈತಾನಂದವೆನಿಸೂದು.

ತತ್ತ್ವಮಸ್ಯಾದಿ ಮಹಾವಾಕ್ಯಜನಿತಮಾದ ಅಪರೋಕ್ಷ ಜ್ಞಾನದಲ್ಲಿ ತೋರ್ಪುದೇ ವಿದ್ಯಾನಂದಮಕ್ಕುಂ. ೬೮

## ಅಭಾವ ವಿವೇಕ :

ಮತ್ತಂ ಪ್ರಾಗಭಾವ, ಪ್ರಧ್ವಂಸಾಭಾವ, ಅನ್ಯೋನ್ಯಾಭಾವ, ಅತ್ಯಂತಾಭಾವ ವೆಂಬವೇ ಬ್ರಹ್ಮ ನಿತ್ಯಪದದೊಳಗೊಪ್ಪುವ ಅಭಾವಚತುಷ್ಟಯಂಗಳವರಲ್ಲಿ : ಮೃತ್ತಿಕೆ ಮೊದಲಾದವರಲ್ಲಿ ಘಟಾದಿಕದ ಮೊದಲಿಲ್ಲವೆಯೇ ಪ್ರಾಗಭಾವ ವೆನಿಸೂದು. ಪುಟ್ಟಿದ ಘಟದಲ್ಲಿ ಬಳಿಕಿಲ್ಲವೆಯೇ ಪ್ರಧ್ವಂಸಾಭಾವವೆನಿಸೂದು. ಘಟದಲ್ಲಿ ಪಟವಿಲ್ಲ, ಪಟದಲ್ಲಿ ಘಟವಿಲ್ಲವೆಂಬುದು ಮೊದಲಾದುದೇ ಅನ್ಯೋನ್ಯಾ ಭಾವವೆನಿಸೂದು ಗಗನಕುಸುಮಾದಿಕವೇ ಅತ್ಯಂತಾಭಾವಮಕ್ಕುಂ. ೬೯

## ಪರಿಚ್ಛೇದತ್ರಯ :

ಮತ್ತಂ ಕಾಲಪರಿಚ್ಛೇದ, ದೇಶ ಪರಿಚ್ಛೇದ, ವಸ್ತು ಪರಿಚ್ಛೇದವೆಂಬವೇ ಬ್ರಹ್ಮದ ಪೂರ್ಣಪದದೊಳ್ನಿವಾರಿಸಲ್ತಕ್ಕ ಪರಿಚ್ಛೇದತ್ರಯಂಗಳವರಲ್ಲಿ : ಒಂದು ಕಾಲದಲ್ಲುಂಟು, ಒಂದು ಕಾಲದಲ್ಲಿಲ್ಲೆನಿಸಿಕೊಂಬುದೇ ಕಾಲಪರಿಚ್ಛೇದವೆನಿಸೂದು. ಒಂದು ದೇಶದಲ್ಲುಂಟು, ಒಂದು ದೇಶದಲ್ಲಿಲ್ಲೆನಿಸಿಕೊಂಬುದೇ ದೇಶಪರಿಚ್ಛೇದವೆನಿ ಸೂದು ಒಂದು ವಸ್ತುವಿದಹುದು, ಒಂದು ವಸ್ತುವಿದಲ್ಲವೆನಿಸಿಕೊಂಬುದೇ ವಸ್ತು ಪರಿಚ್ಛೇದವೆನಿಕ್ಕುಂ. ೭೦

## ಜೀವಾದಿ ನಾಮಭೇದ :

ಬಳಿಕ ಪೂರ್ವೋಕ್ತ ಚಿದ್ರೂಪಭೇದಂಗಳಾದ ಜೀವೇಶ್ವರಾದಿ ಚತುಷ್ಟಯಕ್ಕೆ ಕ್ರಮದಿಂ ನಾಮಾದಿ ವ್ಯವಹಾರ ಕಲ್ಪನೆಗಳೆಂತೆನೆ : ಮೊದಲು ಜೀವನೇ ವಿಶ್ವ, ತೈಜಸ, ಪ್ರಾಜ್ಞನೆಂದು ತ್ರಿವಿಧ ಮಾಗಿರ್ಪನವರಲ್ಲಿ: ಸ್ಥೂಲ ಶರೀರ, ವ್ಯಷ್ಟ್ಯಭಿಮಾನಿ, ವ್ಯವಹಾರಿಕ ಜೀವನು, ಬುದ್ಧಿಪ್ರತಿಫಲಿತ ಚೈತನ್ಯನು, ಚಿದಾಭಾಸನು, ವಿಕ್ಷೇಪ ರೂಪನು, ಕ್ಷೇತ್ರಿ, ಶರೀರಿ, ಪ್ರಮಾತೃ, ಕರ್ತೃ, ಭೋಕ್ತೃ, ಸಂಸಾರಿ, ವಿಷಯಿ, ಪರಾಗಾತ್ಮನು, ವಿಜ್ಞಾನ ಮಯನು, ತ್ವಂಪದವಾಚ್ಯಾರ್ಥನೆಂಬಿವು ಮೊದಲಾದವೇ ವಿಶ್ವನ ಪರಿಯಾಯ ನಾಮಂಗಳು.

ಬಳಿಕ ಸೂಕ್ಷ್ಮಶರೀರ, ವ್ಯಷ್ಟ್ಯಭಿಮಾನಿ, ಪ್ರಾತಿಭಾಸಿಕಜೀವನು, ಸ್ವಪ್ನ ಕಲ್ಪಿತನೆಂಬಿವು ಮೊದಲಾದವೇ ತೈಜಸನ ಪರಿಯಾಯನಾಮಂಗಳು ಬಳಿಕ ಕಾರಣ ಶರೀರ, ವ್ಯಷ್ಟ್ಯಭಿಮಾನಿ, ಅವಿದ್ಯೋಪಹಿತನು, ಕಾರ್ಯೋಪಾದಿಕನು ಎಂಬಿವು ಮೊದಲಾದವೇ ಪ್ರಾಜ್ಞನ ಪರಿಯಾಯನಾಮಂಗಳಕ್ಕುಂ. ೭೧

## ಆತ್ಮತ್ರಯ :

ಬಳಿಕ ಜೀವಾತ್ಮ, ಅಂತರಾತ್ಮ, ಪರಮಾತ್ಮರೆಂದಾತ್ಮತ್ರಯಂಗಳವರಲ್ಲಿ : ತಪ್ತಾಯಃ ಪಿಂಡದಂತೆ ದೇಹಾದಿಗಳೊಡತಣ ಸಂಬಂಧದಿಂ ಸಕಲಸಂಸಾರ ವ್ಯವಹಾರ ಮುಳ್ಳಾತನೇ ಜೀವಾತ್ಮನು.
ಕಮಲ ಪತ್ರೋದಕದಂತೆ ಜೀವನು ಸಂಸಾರಮಂ ಪೊರ್ದಿಯು ಪೊರ್ದದಾತನೇ ಅಂತರಾತ್ಮನು.
ಲೋಕವ್ಯವಹಾರಕ್ಕೆ ಸೂರ್ಯನೆಂತಂತೆ ಜೀವಾತ್ಮಾಂತರಾತ್ಮರ ವ್ಯವಹಾರ ಸಾಕ್ಷಿಕನೇ ಪರಮಾತ್ಮನಕ್ಕುಂ. ೭೨

## ವಿಕಾರ ಸ್ಥಿತಿ :

ಬಳಿಕ ಜಲದಲ್ಲಿ ನೇಸರು ಚಲಿಸಿತ್ತೆಂಬಂತೆ, ಮುಗಿಲೋಡೆ ಚಂದ್ರಮ ನೋಡಿತ್ತೆಂಬಂತೆ, ನದಿಯ ಹರಿಗಿಲು ಗಮಿಸಿದೊಡೆ ತೀರದ ತರು ಗಮಿಸಿ ತ್ತೆಂಬಂತೆ, ಮನೆಯ ಕಂಡಿಯೊಳ್ಬೆದಿದ್ದ ಸೂರ್ಯಾತಪದಲ್ಲಿ ಹಸ್ತದೆಡೆಯಾಟದಿಂದೆ ಡೆಯಾಡಿತ್ತೆಂಬಂತೆ, ದೇಹದ ಜನನ ಮರಣಮಾತ್ಮಗೆಂಬಂತೆ, ನಿರ್ವಿಕಾರನಾದಾತ್ಮಂಗೆ ದೇಹಾದ್ಯುಪಾದಿಯಿಂದಾದ ಜೀವಾವಸ್ಥೆಯು ಸಂಸಾರ ವ್ಯವಹಾರಮೆಂದರಿ ಯಲ್ವೇಳ್ಕುಂ. ೭೩

## ಈಶ್ವರ ನಾಮಭೇದ :

ಮತ್ತಮಾ ಈಶ್ವರನೇ ವಿರಾಟ್ಪುರುಷನು, ಹಿರಣ್ಯಗರ್ಭನು, ಅಂತರ್ಯಾಮಿ ಯೆಂದು ತ್ರಿವಿಧಮಾಗಿರ್ಪನವರಲ್ಲಿ:

ಸ್ಥೂಲಶರೀರ, ಸಮಷ್ಟ್ಯಭಿಮಾನಿ, ವೈಶ್ವಾನರನೆಂಬಿವು ಮೊದಲಾದವೆ ವಿರಾಟ್ಪುರುಷನ ಪರಿಯಾಯನಾಮಂಗಳು.

ಬಳಿಕ ಲಿಂಗಶರೀರ, ಸಮಷ್ಟ್ಯಭಿಮಾನಿ, ಮಹಾಪ್ರಾಣನು, ಸೂತ್ರಾತ್ಮಕ ನೆಂಬಿವು ಮೊದಲಾದವೆ ಹಿರಣ್ಯಗರ್ಭನ ಪರಿಯಾಯನಾಮಂಗಳು.

ಬಳಿಕ ಕಾರಣ ಶರೀರ, ಸಮಷ್ಟ್ಯಭಿಮಾನಿ, ಅಜ್ಞಾನೋಪಹಿತಚೈತನ್ಯನು, ಕಾರಣೋಪಾಧಿಕನು, ಮಾಯೋಪಾಧಿಕನು, ಮಾಯಾಭಾಸನು, ಮಾಯಾವಿ, ಜಗದ್ಯೋನಿ, ಆನಂದಮಯನು, ಅಕ್ಷರನು, ಅವ್ಯಕ್ತನು, ಅವ್ಯಾಕೃತನು, ಶಬಲ ಬ್ರಹ್ಮವು, ಸಗುಣಬ್ರಹ್ಮವು, ಪರಮನು, ಪರದೇವತೆ, ತತ್ಪದ ಮುಖ್ಯಾರ್ಥನೆಂಬಿವು ಮೊದಲಾದವೆ ಅಂತರ್ಯಾಮಿಯ ಪರಿಯಾಯನಾಮಂಗಳಕ್ಕುಂ. ೭೪

## ಈಶ್ವರನ ತ್ರಿವಿಧತ್ವದ ದೃಷ್ಟಾಂತ :

ಮತ್ತಮಾ ಈಶ್ವರನ ತ್ರಿವಿಧತ್ವದಲ್ಲಿ ದೃಷ್ಟಾಂತವೆಂತೆನೆ: ಹೇಂಗೆ ಒಂದಾನೊಂದು ಚಿತ್ರಪಟವು ದ್ರವ್ಯಾಂತರ ಸಂಬಂಧವಿಲ್ಲದಿಹುದರಿಂ ತಾನೇ ಧೌತವೆನಿಸಿಕೊಂಬುದು. ಮೇಲೆ ಗಂಜಿಗೂಳಿನನುಲೇಪನದಿಂ ಘಟ್ಟಿತವೆನಿಸಿಕೊಂಬುದು. ಬಳಿಕ ನೀಲಿಮಯವಾದಾಕಾರದಿಂ ಲಾಂಛಿತವೆನಿಸಿಕೊಂಬುದು. ಮೇಲೆ ಯಥಾಯೋಗ್ಯವಾದ ವರ್ಣಪೂರಣದಿಂ ರಂಜಿತವೆನಿಸಿಕೊಂಬುದು. ಹಾಂಗೆ ಪರಬ್ರಹ್ಮವು ಮೊದಲು ಮಾಯಾ ತತ್ಕಾರ್ಯರಹಿತಮಾದ ತಾನೇ ಚಿತ್ತೆನಿಸಿಕೊಂಬುದು. ಬಳಿಕ ಸರ್ವಕಾರಣವಾದ ಮಾಯೋಪಾದಿಯಿಂದಂತರ್ಯಾಮಿಯೆನಿಸಿಕೊಂಬುದು ಮೇಲವ್ಯಕ್ತವಾದ ಪಂಚೀಕೃತ ಭೂತಕಾರ್ಯವಾದ ಸೂಕ್ಷ್ಮಶರೀರ ಸಮಷ್ಟ್ಯುಪಾದಿಯಿಂ ಸೂತ್ರಾತ್ಮಕನೆನಿಸಿಕೊಂಬುದು. ಮೇಲೆ ವ್ಯಕ್ತಮಾಗಿ ಪಂಚೀಕರಿಸಿದ ಭೂತಕಾರ್ಯ ಸ್ವರೂಪ ಸ್ಥೂಲಶರೀರ ಸಮಷ್ಟ್ಯುಪಾಧಿಯಿಂ ವಿರಾಟ್ಟೆನಿಸಿಕೊಳ್ಳುತ್ತಿರ್ಕುಂ. ೭೫

## ದೃಷ್ಟಾಂತ ಸಮನ್ವಯ :

ಬಳಿಕಿಲ್ಲಿ ಬ್ರಹ್ಮಕ್ಕೆ ಚಿತ್ರಪಟ ದೃಷ್ಟಾಂತಮಾಗಲಾ ಚಿತ್ರಂಗಳಾವಾವೆಂದೊಡೆ ವಿರಿಂಚ್ಯಾದಿ ತೃಣಾಂತಮಾದ ಚೇತನ ಪ್ರಾಣಿಗಳುಂ, ಗಿರಿನದ್ಯಾದ್ಯಚೇತನ ವಿಷಯಂಗಳುಮೆಂಬ ಜಡಾಜಡರೂಪ ಜಗವೇ ಚಿತ್ರದೃಷ್ಟಾಂತಮುಕ್ಕುಂ. ೭೬

## ಗುಣಾದಿ ಕಲ್ಪನೆ :

ಮತ್ತಮೂ ಪಾರಮಾರ್ಥಿಕಮಾದ ಚಿದ್ರೂಪ ಬ್ರಹ್ಮವೊಂದರಲ್ಲಿ ಮಿಥ್ಯಾತ್ಮಕ ಬಹು ಚೇತನಾಚೇತನರೂಪ ಜಗತ್ತಿನ ತೋರ್ಕೆಯೆಂತೆಂದೊಡೆ: ಹೇಂಗೆ ಚಿತ್ರದಲ್ಲಿ ಬರೆಯಲ್ಪಟ್ಟ ಮನುಷ್ಯರುಟ್ಟು ಹೊದೆದ ನಾನಾವರ್ಣೋಪೇತಮಾದ ಶೀತಾದಿ ನಿವೃತ್ತಿಯಂ ಮಾಡಲಸಮರ್ಥಮಪ್ಪ ವಸ್ತ್ರಾಭಾಸಂಗಳಾದೊಡೆ, ಏಕಾಕಾರಮಾದ ಶೀತಾದಿ ಪರಿಹಾರಕಮಪ್ಪ ತಥ್ಯಮಾದ ಆಧಾರ ಪಟದೊಡನೆ ಸದೃಶಂಗಳಾಗಿರ್ಪವಾ ಚಿತ್ರದಲ್ಲಿರ್ಪ ಗಿರಿ ನದ್ಯಾದಿಗಳಿಗಾ ಚಿತ್ರಾಧಾರ ಪಟದೊಡನೆ ಹೋಲಿಕೆ ಘಟಿಸಲರಿಯದು. ಹಾಂಗೆ ಚಿದ್ರೂಪ ಬ್ರಹ್ಮದಲ್ಲಿ ಬೇರೆ ಬೇರೆ ತೋರುತ್ತಿರ್ದ ವ್ಯವಹಾರಿಕ ಜೀವರುಗಳೇ ಚಿತ್ತಿನಲ್ಲಿ ಹೋಲಿಕೆಯಾಗಿ ಚಿದಾಭಾಸ ಚೇತನರುಗಳು ಚಿತ್ತಿನೊಡನೆ ಹೋಲಿಕೆಯಾಗದ ಮೃತ್ತಿಕೆ ಮೊದಲಾದವೆ ಜಡರೂಪಂಗಳಪ್ಪುದರಿಂ ಚೇತನಾಚೇತನಾತ್ಮಕ ಜಗತ್ತು ಚಿದ್ರೂಪ ಬ್ರಹ್ಮದಲ್ಲಿಯೇ ಕಲ್ಪಿತವೆಂದು ನಿಶ್ಚೈಸಲ್ವೇಳ್ಕುಂ. ೭೭

ಈಶ್ವರನ ಗುಣಾದಿಗಳು :

ಬಳಿಕ ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವನಿಯಂತೃತ್ವ, ಸರ್ವಾಂತರ್ಯಾಮಿತ್ವ, ಸರ್ವಾತ್ಮಕತ್ವ, ಸರ್ವಶಕ್ತಿತ್ವಾದಿಗಳೇ ಈಶ್ವರನ ಮುಖ್ಯಗುಣಂಗಳು. ಕರ್ತೃತ್ವ, ಅಕರ್ತೃತ್ವ, ಅನ್ಯಥಾಕರ್ತೃತ್ವವೆಂಬವೆ ಈಶ್ವರನ ಪ್ರಭುತ್ವ ಸಾಮರ್ಥ್ಯ ತ್ರಯಂಗಳಕ್ಕುಂ.

ಬಳಿಕ ಸೃಷ್ಟಿ, ಸ್ಥಿತಿ, ಸಂಹಾರ, ನಿಯಾಮಕ, ಅನುಪ್ರವೇಶವೆಂಬವೆ ಈಶ್ವರನ ಪಂಚಕೃತ್ಯಂಗಳಕ್ಕುಂ. ೭೮

ಈಶ್ವರ ಕೃತ್ಯಕ್ಕೆ ದೃಷ್ಟಾಂತ :

ಬಳಿಕ ನಿರ್ವಿಕಾರದಿಂದದ್ವಿತೀಯ ಬ್ರಹ್ಮ ಸ್ವರೂಪನಾದೀಶ್ವರನಲ್ಲಿ ಸೃಷ್ಟ್ಯಾದಿ ಬಹು ಕೃತ್ಯವೆಂತು ಘಟಿಪುದು. ಎಂದೊಡೆ ಹೇಂಗೆ ಸೂರ್ಯನು ಇಚ್ಛಾಯತ್ನಾದಿಕ ವಿಲ್ಲದೆ ತನ್ನ ವರ್ಷಕಿರಣದಿಂ ವೃಷ್ಟಿರೂಪಜಲವಂ ಕರೆದು ಬಳಿಕಾ ಜಲದಲ್ಲಿ ಪ್ರತಿಬಿಂಬರೂಪದಿಂ ತಾನೆ ಹೊಕ್ಕು ಮೇಘಾಧಿಕದಿಂದಾ ಜಲಪ್ರತಿಬಿಂಬವಂ ಮರೆಸಿ, ಹಿಮಕಿರಣಾದಿಕದಿಂದಾ ಜಲಪ್ರತಿಬಿಂಬವಂ ತಡೆದು, ಉಷ್ಣಕಿರಣದಿಂದಾ ಜಲವಂ ಪೀರ್ದು, ಬಳಿಕಾ ಪ್ರತಿಬಿಂಬವಂ ತನ್ನೊಳೊಡಗೂಡಿಕೊಳುತ್ತಿರ್ಪದು. ಹಾಂಗೆ ಮಹೇಶ್ವರನು ತನ್ನ ಮಾಯು ಶಕ್ತಿಯೊಡನೆ ಚಿತ್ಪ್ರಧಾನತ್ವದಿಂ ನಿಮಿತ್ತ ಕಾರಣನಾಗಿ, ಜಡಪ್ರಧಾನತ್ವದಿಂದುಪಾದನತ್ವ ಕಾರಣವೆನಿಸಿ, ಬುದ್ಧ್ಯಾದಿ ಕಾರ್ಯವಂ ಸೃಜಿಸಿ, ಜೀವರೂಪದಿಂದಲ್ಲಿ ತಾನೇ ಪ್ರವೇಶಿಸಿ, ಕರ್ಮದಿಂ ಭೋಕ್ತೃ ವೆನಿಸಿ, ನಿಯಾಮಕ ಶಕ್ತಿಯಿಂದಾ ಭೋಗ್ಯ, ಭೋಕ್ತೃಗಳಂ ನಿಯಾಮಿಸಿ, ರುದ್ರ ರೂಪದಿಂದಾ ಕಾರ್ಯವಂ ಸಂಹರಿಸಿ,ಬಳಿಕಾ ಶ್ರುತ್ಯಾಚಾರ್ಯ ರೂಪದಿಂದಾ ಜೀವನಂ ತನ್ನೊಡನೈಕ್ಯವಂ ಮಾಡಿಕೊಳುತಿರ್ಪನೆಂಬುದೇ ಸುಸ್ಥಿರಮಕ್ಕುಂ. ೭೯

ವ್ಯಷ್ಟಿ–ಸಮಷ್ಟಿ ವಿವೇಕ :

ಬಳಿಕ ಸಮಷ್ಟಿ ವ್ಯಷ್ಟಿಯೆಂಬವೆ ಜೀವೇಶ್ವರರ್ಗೆ ವಿಭಾಗೋಪಾಯ ದ್ವಯಂ ಗಳವರಲ್ಲಿ: ಅನೇಕ ವೃಕ್ಷಂಗಳುಳ್ಳುದನೊಂದೇ ವನವೆಂದು ತಿಳಿವಂತೆ ಅನೇಕ ಜೀವ ರೆಲ್ಲರನು ತನ್ನಾತ್ಮರೆಂಬಭಿಮಾನವೇ ಈಶ್ವರಂಗೆ ಸಮಷ್ಟಿರೂಪವಹುದು. ಅದೊಂದೇ ವನದಲ್ಲಿ ಇದೊಂದು ಇದೊಂದು ವೃಕ್ಷವೆಂದು ಬೇರೆ ಬೇರೆ ಕುರುಹಿಡುವಂತೆ ಭಿನ್ನ ಭಿನ್ನ ದೇಹಿತ್ವಾಭಿಮಾನವೇ ಜೀವಂಗೆ ವ್ಯಷ್ಟಿರೂಪಮಕ್ಕುಂ. ೮೦

ಕೂಟಸ್ಥಾದಿ ನಾಮವಿವೇಕ :

ಮತ್ತಮಾ ವಿಶ್ವಾದಿ ಜೀವತ್ರಯಾಧಿಷ್ಠಾನ ಚೈತನ್ಯನು, ತುರ್ಯನು, ಸ್ವಯಂ ಶಬ್ದಾರ್ಥನು, ಸಾಕ್ಷಿಕನು, ಪಾರಮಾರ್ಥಿಕ ಜೀವನು, ಪ್ರತ್ಯಗಾತ್ಮನು, ಅಂತರ್ಯಾಮಿ ಅನುಸಂಧಾತೃ, ಅವಚ್ಛಿನ್ನ ಜೀವನು ತ್ವಂಪದ ಲಕ್ಷ್ಯಾರ್ಥನೆಂಬಿವು ಮೊದಲಾದವೆ ಕೂಟಸ್ಥನ ಪರಿಯಾಯ ನಾಮಂಗಳಕ್ಕುಂ, ೮೧

ಬ್ರಹ್ಮ ಪರ್ಯಾಯನಾಮಂಗಳು :

ಮತ್ತಮಾ ಅಂತರ್ಯಾಮಿ ಮೊದಲಾದ ಈಶ್ವರತ್ರಯಾಧಿಷ್ಠಾತೃ, ಪರಬ್ರಹ್ಮ ಪರತತ್ವ, ಪರಮಾತ್ಮ, ಸರ್ವಾಧಿಷ್ಠಾತೃ, ವಿಶುದ್ಧಚಿತ್ತು, ತತ್ಪದ ಲಕ್ಷ್ಯಾರ್ಥವೆಂಬಿವು ಮೊದಲಾದವೆ ಬ್ರಹ್ಮದ ಪರಿಯಾಯ ನಾಮಂಗಳಕ್ಕುಂ. ೮೨

ದೃಕ್ ವಿವೇಕ ಸಾರ :

ಬಳಿಕ ವ್ಯಕ್ತಿಕೆಯೊಂದೇ ನಾಮ ರೂಪಂಗಳಿಂ ಘಟಾದಿ ಬಹು ಭೇದ ಮಾದಂತೆ, ಸುವರ್ಣವೊಂದೇ ವಾಚಾರಂಭಣದಿಂ ಕಟಕ ಮಕುಟಾದಿ ಹಲವಾ ಭರಣವಾದಂತೆ, ಜಲವೊಂದೇ ವಾಯುವಾಶದಿಂ ಫೇನ ತರಂಗಾದಿ ಸಮುದಾಯ ವಾದಂತೆ, ದೀಪವೊಂದೇ ಘಟಾದಿ ವಿವರಂಗಳಿಂ ಬಹುಳತೆವಡೆದಂತೆ, ಮಾರುತ ನೊಂದೇ ವಂಶರಂಧ್ರಂಗಳಿಂ ಮಧುರ ಮಂದ್ರಾದಿ ವಿಭಿನ್ನಮಾದಂತೆ, ಸ್ವರವೊಂದೇ ಗಾಯಕನ ಕರಣ ವ್ಯತ್ತಿಯಿಂ ನಾನಾರಾಗವಾದಂತೆ, ಗಗನವೊಂದೇ ಗೃಹಾದ್ಯು ಪಾಧಿಯಿಂದನೇಕವಾದಂತೆ, ಧ್ವನಿಯೊಂದೇ ವಾದ್ಯಭೇದದಿಂ ಪಲವಾದಂತೆ, ನಭವೊಂದೇ ಕದಳೀಧಳದ ಖಂಡಂಗಳಲ್ಲಿ ಕರಿತುರಗಾದಿ ವಿಚಿತ್ತಮಾದಂತೆ, ಶಶಿರವಿ ಗಳೊಂದೊಂದೇ ಜಲಕುಂಭಾದಿಕದಿಂ ನಾನಾತ್ವವನೆಯ್ದಿದಂತೆ, ಲೆಕ್ಕವೊಂದೇ ಬಹು ಬಿಂದುಗಳಿಂ ದಶ ಶತ ಸಹಸ್ರಾದಿಕಮಾದಂತೆ, ಚಿತ್ರವೊಂದರಲ್ಲಿ ಪೂರ್ವೋತ್ತ ಜೀವೇಶಾದಿ ಭೇದ ವ್ಯವಹಾರಮಪ್ಪುದೆಂಬಿವು ಮೊದಲಾದವೆಲ್ಲಂ ದೃಗ್ವಿ ವೇಕಮಕ್ಕುಂ. ೮೩

ಮಾಯಾಸ್ವರೂಪ ವಿವೇಕ :

ಅನಂತರದಲ್ಲಿ ಅನಾದಿಯುಂ ಚಂದ್ರನ ಕಲಂಕೆಂತಂತೆ, ಚಂದ್ರನಂ ನೆಮ್ಮಿ, ಚಂದ್ರನಂ ಮುಸುಂಕದೆ, ಚಂದ್ರನಿಂ ಬೆಳಗಿಸಿಕೊಳುತಿರ್ಪುದಂತೆ, ನಾನೆನ್ನನರಿಯ ನೆಂಬ ಲೋಕಪ್ರಸಿದ್ಧಮಾದ ವ್ಯವಹಾರದಲ್ಲಿ, ಆತ್ಮನಂ ನೆಮ್ಮಿ ಆತ್ಮನನಾಚ್ಛಾದಿಸದೆ ಆತ್ಮನಿಂದರುಹಿಸಿಕೊಳ್ಳುತ್ತಿಹುದಾಗಿಯುಂ–ಮತ್ತಂ ಅಗ್ನಿಯ ದಾಹಕ ಶಕ್ತಿ ಹೇಂಗೆ ಮಣಿಮಂತ್ರಾದಿ ಪ್ರಯೋಗದಿಂ ತಾನೆ ಬಂಧಿಸಿಕೊಳುತ್ತಿಹುವುದರಿಂದಗ್ನಿ ಸ್ವರೂಪ ವಲ್ಲದೆ ಅಗ್ನಿಯುಂ ಬಿಟ್ಟು ತೋರದೆ, ಸ್ಫೋಟಕಾದಿ ಕಾರ್ಯಗಮ್ಯವಾಗಿರ್ಪುದು, ಹಾಂಗೆ ಬ್ರಹ್ಮಸ್ವರೂಪವಲ್ಲದೆ ಬ್ರಹ್ಮ ವಿಲಕ್ಷಣವಾಗಿ ತೋರದೆ, ವಿಯದಾದಿ ಕಾರ್ಯಗಮ್ಯ ಮಾಗಿಯುಂ ಅಘಟಿತ ಘಟನಾ ಸಮರ್ಥೆಯಾಗಿಯುಂ ಸರ್ವಾನರ್ಥಕ್ಕೆ ಕಾರಣ ಮಪ್ಪುದೇ ದೃಶ್ಯರೂಪ ಮಾಯಾಶಕ್ತಿಯಕ್ಕುಂ. ೮೪

ಮಾಯಾಲಕ್ಷಣ :

ಬಳಿಕ ಅಸತ್ತು, ಜಡ, ದುಃಖ, ಅನಿತ್ಯ, ಖಂಡಿತವೆಂಬವೇ ಮಾಯಾಪಂಚ ಲಕ್ಷಣಂಗಳವರಲ್ಲಿ: ಶಶವಿಷಾಣಾದಿಕವೇ ಅಸದ್ರೂಪು. ಪಾಷಾಣಾದಿಕವೇ ಜಡರೂಪು.

ರಜಸ್ತಮೋಮಯವಾದ ಬುದ್ಧಿಯು ಘೋರ, ಮೂಢ ವೃತ್ತ್ಯಾದಿಕವೇ ದುಃಖರೂಪು. ತೋರಿ ಕೆಡುವ ದೇಹಾದಿಕವೇ ಅನಿತ್ಯರೂಪು. ಕಾಲಪರಿಚ್ಛೇದಾದಿಕವೇ ಖಂಡಿತರೂಪಮಕ್ಕುಂ. ೮೫

### ಅನಿರ್ವಚನ ಪ್ರಕಾರ :

ಬಳಿಕ ಭಿನ್ನ, ಅಭಿನ್ನ, ಭಿನ್ನಾಭಿನ್ನ, ಸತ್ತು, ಅಸತ್ತು, ಸದಸತ್ತು, ಸಾವಯವ, ನಿರವಯ ಸಾವಯವನಿರವಯವಲ್ಲೆಂಬುದೇ ಮಾಯೆಗನಿರ್ವಾಚ್ಯ ನವಪ್ರಕಾರಮಕ್ಕುಂ. ೮೬

### ಮಾಯಾ ಪ್ರತೀತಿ ತ್ರಯ :

ಬಳಿಕಾ ಮಾಯೆಯು ಶ್ರುತಿಸಂಬಂಧಜ್ಞಾನ, ಯುಕ್ತಿ ಸಂಬಂಧಜ್ಞಾನ, ಲೋಕ ಸಂಬಂಧಜ್ಞಾನವೆಂಬ ಜ್ಞಾನತ್ರಯದಿಂ ಕ್ರಮವಿಡಿದು ಗಗನಕುಸುಮದಂತೆ ತುಚ್ಛಮೆನಿಸಿ, ಶುಕ್ತಿಕಾರಜತದಂತೆ ಅನಿವಾರ್ಚ್ಯಮೆನಿಸಿ, ಆತ್ಮನಂತೆ ನಿತ್ಯವೆನಿಸಿ ಕೊಳುತ್ತಿರ್ಕುಂ. ೮೭

### ಮಾಯಾ ಪಂಚಕ :

ಮತ್ತಂ ತಮಸ್ಸು, ಮಾಯು, ಮೋಹ, ಅವಿದ್ಯೆ, ಅನೃತಾತ್ಮಕಿಯೆಂಬವೆ ಮಾಯಾಪಂಚಕಂಗಳವರಲ್ಲಿ :

ಜೀವ ಚೇತನವನಾಚ್ಛಾದಿಪುದರಿಂ ತಮಸ್ಸೆನಿಸೂದು.
ಜಗದ್ರೂಪಮಾದನ್ಯಥಾ ತೋರಿಕೆಗೆ ಕಾರಣಮಪ್ಪುದರಿಂ ಮಾಯೆಯೆನಿಸೂದು.
ಆ ತೋರಿದ ಜಗತ್ತಿನಲ್ಲಿ ಶುಕ್ತಿಕಾರಜತಾದಿ ವಿಪರೀತಜ್ಞಾನಮಂ ಪುಟ್ಟಿಪುದರಿಂ ಮೋಹವೆನಿಸೂದು.
ವಿದ್ಯೆಯಿಂ ಕೆಡಪುದರಿಂದ ಅವಿದ್ಯೆಯೆನಿಸೂದು.
ಸದ್ರೂಪಕ್ಕನ್ಯಮಪ್ಪುದರಿಂದನೃತಮಕ್ಕುಂ. ೮೮

### ಮಾಯಾ ಧರ್ಮದ್ವಯ :

ಬಳಿಕ ಸಂಕೋಚ ವಿಕಾಸವೆಂಬವೆ ಮಾಯಾಧರ್ಮದ್ವಯಂಗಳವರಲ್ಲಿ : ಹೇಂಗೆ ಚಿತ್ರಪಟವು ತನ್ನ ಪ್ರಸರಣದಿಂ ಚಿತ್ರಂಗಳ ಕಾಣಿಸಿ, ಸಂಕೋಚದಿಂದ ಆ ಚಿತ್ರಂಗಳಂ ಮರಸುತ್ತಿಹುದು ಹಾಂಗೆ ಮಾಯೆ ತನ್ನ ವಿಕಾಸಧರ್ಮದಿಂ, ಜಗತ್ಪ್ರಪಂಚಮಂ ತೋರಿ ಸಂಕೋಚಧರ್ಮದಿಂದದನಡಗಿಸುತ್ತಿರ್ಕುಂ. ೮೯

## ಮಾಯಾ ಗುಣದ್ವಯ :

ಬಳಿಕ ಸ್ವತಂತ್ರತೆ ಅಸ್ವತಂತ್ರತೆಗಳೆಂಬವೆರಡು ಮಾಯಾಗುಣಂಗಳವರಲ್ಲಿ : ಮಾಯೆ ಮಿಥ್ಯೆಯಪ್ಪುದರಿಂ ಸದ್ರೂಪ ಚೈತನ್ಯವಂ ಬಿಟ್ಟು ತೋರದಿಹುದರಿಂ ಅಸ್ವತಂತ್ರೆಯೆನಿಸೂದು. ಸಾಕ್ಷಿಕನಪ್ಪುದರಿಂದ ಅಸಂಗನಾದಾತ್ಮನಂ ಜೀವಾದಿ ಪ್ರಪಂಚಮಯನಾಗಿ ಮಾಳ್ಪುದೇ ಸ್ವತಂತ್ರತೆಯಕ್ಕುಂ. ೯೦

## ಮಿಥ್ಯಾತ್ವ ನಿರುಕ್ತಿ

ಬಳಿಕಿಲ್ಲಿ ಮಿಥ್ಯೆಯೆಂದೊಡೆ : ಗಗನಕುಸುಮಾದಿಕದಂತೆ ಸರ್ವಥಾ ಶೂನ್ಯ ವೆಂಬುದಲ್ತು. ಮತ್ತೇನೆನೆ ಸ್ವಪ್ನಗಜಾದಿಕದಂತೆ ತೋರುತ್ತಿರ್ದು, ವಿಚಾರಬಾಧಿತ ಮಪ್ಪುದೇ ಮಿಥ್ಯೆಯಕ್ಕುಂ ೯೧

## ಮಾಯಾ ವೃತ್ತಿತ್ರಯ :

ಮತ್ತಂ ವಿಶುದ್ಧಸತ್ವರೂಪಮಲಿನಮಾಯೆ, ಸ್ವರೂಪಾವಿದ್ಯೆ, ತಮಃ ಪ್ರಧಾನರೂಪ ಪ್ರಕೃತಿಯೆಂಬವೇ ಮಾಯಾವೃತ್ತಿತ್ರಯಂಗಳವರಲ್ಲಿ :

ಮಾಯೆಯೇ ಸುಷುಪ್ತಿಲಯಂಗಳಲ್ಲಿ ಪರಬ್ರಹ್ಮದೊಡನಧ್ಯಾಸೈಕ್ಯಮಾಗಿರ್ದು, ಸ್ವಪ್ನಜಾಗರಣಂಗಳಲ್ಲಿನಿತು ಭೇದಾವಸ್ಥೆಯನ್ನೈದುತ್ತಿಹುದಾಗಳಾ ಬ್ರಹ್ಮಕ್ಕೆ, ಬ್ರಹ್ಮ ಚೈತನ್ಯವದರಲ್ಲಿ ಪ್ರತಿಫಲಿಸದೇ ಸರ್ವಜ್ಞತ್ವಾದಿ ಗುಣವಿಶಿಷ್ಟ ಚೈತನ್ಯನಾದೀಶ್ವರ ನೆನಿಸಿ, ಪತಿ ಪದಾರ್ಥವೆನಿಸಿ, ಪ್ರೇರಯಿತೃವೆನಿಸಿಕೊಂಬುದರಿಂದಾ ಮಾಯೆ ಈಶ್ವರಂಗುಪಾಧಿಯಾಗಿ ಆ ಮೋಹಕಾರಿಣಿಯೆನಿಸೂದು. ೯೨

ಮತ್ತಮಾ ಅವಿದ್ಯೆಯೇ ನಾನಾತ್ವದಿಂ ಭೋಕ್ತೃಗಳಾದ ಪಶು ಪದಾರ್ಥ ಮಪ್ಪ ಜೀವರ್ಗುಪಾಧಿಯಾಗಿ ಮೋಹಿಸುತ್ತಿಹುದು.

ಮತ್ತಮಾ ಪ್ರಕೃತಿಯೆ ಭೋಗ್ಯಾತ್ಮಕತ್ವದಿ ಪಾಶ ಪದಾರ್ಥವೆನಿಸಿಕೊಂಡು ಗುಣತ್ರಯ ಸಮಾನಾವಸ್ಥೆಯಿಂದಿರ್ದು ಬಳಿಕ ಅವಿದ್ಯೆಯೊಳ್ ಪ್ರತಿಬಿಂಬಿಸಿರ್ದ ಜೀವರ ಭೋಗಾರ್ಥಮಾಗಿ ಸಕಲ ಕಾರ್ಯಮಾಗಲೋಸುಗಮೀಶ್ವರನ ಸನ್ನಿಧಾನ ಲಕ್ಷಣ ನೋಟಮಾತ್ರದಿಂದ ವಿಕರಿಸಿ, ಮೊದಲು ಕಾಲತತ್ವಮಂ ಪಡೆದು, ಮೇಲಾ ಕಾಲವಶದಿಂ ಪರಿಣಮಿಸಿ ಮಹತ್ತತ್ವವೆನಿಸೂದು. ೯೩

## ಮಹದಾದಿ ಸೃಷ್ಟಿಕ್ರಮ

ಬಳಿಕಾ ಮಹತ್ತತ್ವವಾದೊಡೆ, ಬಿತ್ತಿ ನೀರೆರೆದೊಡಂಕುರಿಸದೇ, ಮೊದಲಂ ತಿರದೇ, ಉದ್ಭೃಂಹಣಾವಸ್ಥೆಯ ನೈದಿದ ಬೀಜದಂತೆ,ಕಾರಣ ಪ್ರಕೃತಿಯಲ್ಲದೆ, ಕರಣ

ಮಾದಹಂಕಾರವಲ್ಲದೆ, ಮಿಥ್ಯಾಜ್ಞಾನದ ನಿರ್ವಿಕಲ್ಪ ಸ್ವರೂಪದಿಂ ಮಧ್ಯಾವಸ್ಥೆಯೆನಿಸೂದು. ಮತ್ತಮಾ ಮಹತ್ತತ್ವದಿಂ ಗುಣಭೇದವಡೆದು ಮಿಥ್ಯಾಜ್ಞಾನದ ಸವಿಕಲ್ಪ ರೂಪಮಾದ ಪ್ರಥಮಾಧ್ಯಾಸವೆನಿಸಿಕೊಂಬ ಮೂಲಾಹಂಕಾರಂ ಜನಿಸುತ್ತಿರ್ಕುಂ. ೯೪

## ಗುಣತ್ರಯ :

ಬಳಿಕ ಸತ್ವಗುಣ, ರಜೋಗುಣ, ತಮೋಗುಣವೆಂಬವೆ ಗುಣತ್ರಯಂಗಳು. ಪ್ರಕಾಶ, ಪ್ರವೃತ್ತಿ, ಮೋಹವೆಂಬವೆ ಸತ್ವಾದಿಗುಣರೂಪಂಗಳು. ವೈಕಾರಿಕ, ತೈಜಸ ಭೂತಾದಿಯೆಂದು ಆ ಸತ್ವಾದಿಗುಣ ಪರಿಯಾಯ ನಾಮಂಗಳವರಲ್ಲಿ :

ಸತ್ವಗುಣದಿಂ ಮಾನಸಾದ್ಯಂತಃಕರಣ ಚತುಷ್ಟಯಂಗಳು, ಶ್ರೋತ್ರಾದಿ ಜ್ಞಾನೇಂದ್ರಿಯ ಪಂಚಕಂಗಳು ಪುಟ್ಟುವವು.

ರಜೋಗುಣದಿಂ ವಾಗಾದಿ ಕರ್ಮೇಂದ್ರಿಯ ಪಂಚಕಂಗಳುಂ, ಪ್ರಾಣಾದಿ ವಾಯು ಪಂಚಕಂಗಳು ಪುಟ್ಟುವವು.

ತಮೋಗುಣದಿಂದಾಕಾಶಾದಿ ಭೂತಪಂಚಕಂಗಳು ಪುಟ್ಟುವವು ಬಳಿಕಾ ಭೂತಂಗಳ ಪಂಚೀಕರಣದಿಂ ಬ್ರಹ್ಮಾಂಡ ಭುವನ ಶರೀರ ಘಟಾದಿ ವಿಷಯಂಗಳುದಿಸುತ್ತಿರ್ಕುಂ. ೯೫

## ಅಂತಃಕರಣಚತುಷ್ಟಯ ವ್ಯಾಪಾರಂಗಳು :

ಬಳಿಕ ಆ ಮಾನಸಾದ್ಯಂತಃಕರಣಂಗಳಿಗೆ ಕ್ರಮದಿಂ ವಿಷಯಂಗಳಂ ನೆನೆವುದು, ನಿಶ್ಚೈಸೂದು, ಅಭಿಮಾನಿಸೂದು, ಅವಧರಿಸೂದುಯೆಂಬವೆ ವ್ಯಾಪಾರಂಗಳು. ಚಂದ್ರ, ಚತುರ್ಮುಖ, ಕ್ಷೇತ್ರಜ್ಞ, ತ್ರಿಪುರಾಂತಕರೆಂಬವರೇ ಅಧಿದೇವತೆಗಳು. ಹೃದಯಗೋಳಕವೇ ಸ್ಥಾನಮಕ್ಕುಂ. ೯೬

## ಜ್ಞಾನೇಂದ್ರಿಯ ಪಂಚಕ :

ಮತ್ತಮಾ ಶ್ರೋತ್ರಾದಿ ಜ್ಞಾನೇಂದ್ರಿಯಂಗಳಿಗೆ ಕ್ರಮದಿಂ ಶಬ್ದಾದಿ ವಿಷಯಂಗಳಂ ಕೇಳೂದು, ಸೋಂಕೂದು, ನೋಡೂದು, ರುಚಿಸೂದು, ವಾಸಿಸೂದೆಂಬವೆ ವ್ಯಾಪಾರಂಗಳು. ದಿಕ್ಕು, ಮಾರುತ, ಮಿತ್ರ, ವರುಣ, ಅಶ್ವಿನಿಯರೆಂಬವರೆ ಅಧಿದೇವತೆಗಳು. ಕರ್ಣಾದಿಗೋಳಕಂಗಳೇ ಸ್ಥಾನಂಗಳಕ್ಕುಂ. ಬಳಿಕ ಶ್ರೋತ್ರಾದಿಂದ್ರಿಯಂಗಳಿಗೆ ಬಾಹ್ಯದಲ್ಲಿ ಶಬ್ದಾದಿಗಳನರಿನಂತೆ ಕಿವಿಯನಂಗುಲಿಯಿಂ ಮುಚ್ಚಿದಲ್ಲಿ ಪ್ರಾಣವಾಯು ಜಠರಾಗ್ನಿಗಳಲುಂಟಾದ ಶಬ್ದಗ್ರಹಣ, ನೇತ್ರವ ಮುಚ್ಚಿದಲ್ಲಿ ಒಳಗಣ ತಮೋರೂಪ ಗ್ರಹಣ, ಅನ್ನಪಾನ ಸ್ವೀಕಾರಮಾದಲ್ಲಿ ಉಷ್ಣ ಶೀತಸ್ಪರ್ಶ ಗ್ರಹಣ, ತೇಗೂದ್ಗಾರಮಾದಲ್ಲಿ ರಸಗಂಧ ಗ್ರಹಣಗಳೆಂಬ ಅಂತರಶಬ್ದಾದಿ ವಿಷಯ ಗ್ರಹಣಂಗಳುಂಟೆಂಬುದೇ ಸಿದ್ಧಮಕ್ಕುಂ. ೯೭

## ಕರ್ಮೇಂದ್ರಿಯ ಪಂಚಕ :

ಮತ್ತಮಾ ವಾಗಾದಿ ಕರ್ಮೇಂದ್ರಿಯಂಗಳಿಗೆ ಕ್ರಮದಿಂ ನುಡಿವುದು. ಹಿಡಿವುದು, ನಡೆವುದು, ಬಿಡುವುದು, ಆನಂದವಂ ಪುಟ್ಟಿಸೂದು ಎಂಬವೆ ವ್ಯಾಪಾರಂಗಳು. ಅಗ್ನಿ, ಇಂದ್ರ. ರವಿ, ಮೃತ್ಯು, ಪ್ರಜೇಶನೆಂಬವರೇ ಅಧಿದೇವತೆಗಳು. ಮುಖಾದಿ ಗೋಳಕಂಗಳೇ ಸ್ಥಾನಂಗಳಕ್ಕುಂ. ೯೮

## ಅಧ್ಯಾತ್ಮಿಕಾದಿ ವಿವೇಕ :

ಬಳಿಕವುಗಳಲ್ಲಿ ಅಂತಃಕರಣ, ಜ್ಞಾನೇಂದ್ರಿಯ, ಕರ್ಮೇಂದ್ರಿಯವೆಂಬ ಹದಿನಾಲ್ಕೇ ಅಧ್ಯಾತ್ಮಿಕಂಗಳವರ ವಿಷಯಂಗಳೇ ಆದಿಭೌತಿಕಂಗಳವರಧಿದೇವತೆಗಳೇ ಆದಿದೈವಿಕಂಗಳೆನಿಸಿ ಕೊಳುತ್ತಿರ್ಕುಂ. ೯೯

## ಇಂದ್ರಿಯ ಮೂಲ ಸಮನ್ವಯ :

ಮತ್ತಮಾ ಇಂದ್ರಿಯಾದಿಗಳ ದೇವತೆಯರೇ ವಿರಾಟ್ಪುರುಷನ ಇಂದ್ರಿಯಂಗಳು. ಆ ಇಂದ್ರಿಯಂಗಳೇ ಹಿರಣ್ಯಗರ್ಭನ ಶರೀರ. ಆ ಶರೀರವೇ ತಮೋರೂಪದಿಂದಂತರ್ಯಾಮಿಗಾವರಣಮಾಗಿರ್ಕುಂ. ೧೦೦

## ಪ್ರಾಣ ಪಂಚಕಾದಿ :

ಮತ್ತಮಾ ಪ್ರಾಣವಾಯು ಹೃದಯಸ್ಥಾನದಲ್ಲಿರ್ದು ಉಚ್ಛ್ವಾಸ ನಿಶ್ವಾಸನಂಗೈಸುತ್ತಿರ್ಕುಂ. ಅಪಾನವಾಯು ಗುದಸ್ಥಾನದಲ್ಲಿರ್ದು ಮಲಮೂತ್ರಂಗಳಂ ತ್ಯಜಿಸುತ್ತಿಹುದು. ಸಮಾನವಾಯು ನಾಭೀಸ್ಥಾನದಲ್ಲಿರ್ದು ಉಂಡ ಅನ್ನರಸಮಂ ಸರ್ವಾಂಗಕ್ಕೆ ಹಂಚಿಕ್ಕುತ್ತಿಹುದು. ಉದಾನವಾಯು ಕಂಠಸ್ಥಾನದಲ್ಲಿರ್ದು ಉದ್ಗಾರಮಂ ಮಾಡಿಸುತ್ತಿಹುದು. ವ್ಯಾನವಾಯು ಸರ್ವಾಂಗದಲ್ಲಿರ್ದು ದೇಹಮಂ ಧರಿಸಿಕೊಂಡಿರ್ಕುಂ. ೧೦೧

ಮತ್ತಮಾ ನಾಗವಾಯುವಿನಿಂ ವೈಮುರುಹು, ಆಗುಳಿಕೆ, ಕೂರ್ಮನಿಂ ತೇಗು, ಬಿಕ್ಕು. ಕ್ರಕರನಿಂ ಸೀನು, ಕೆಮ್ಮು. ದೇವದತ್ತನಿಂ ನಗೆ, ನುಡಿ. ಧನಂಜಯನಿಂ ಶೋಕ, ರಾಗಂಗಳಹವು. ೧೦೨

ಮತ್ತಮಾ ಧನಂಜಯ ವಾಯುವೇ ಮೃತಿಯಾದ್ಯೆದುದಿನ ಪರಿಯಂತಮಾ ದೇಹದಲ್ಲಿರ್ದು ಆ ದೇಹವನೂದಿಸಿ ಒಡೆದು ಕೆಡಿಸಿ ಪೋಗುತ್ತಿರ್ಕುಂ.

ಬಳಿಕೀ ನಾಗಾದಿ ವಾಯುಗಳೇ ಬಾಹ್ಯವಾಯುಗಳೆನಿಸಿಕೊಂಡು ವಾಗಾದಿ ಕರ್ಮೇಂದ್ರಿಯ ಚೇಷ್ಟಾಹೇತುಗಳಾಗಿಹವು. ಪ್ರಾಣಾದಿವಾಯುಗಳೇ ಶ್ರೋತ್ರಾದಿ ಜ್ಞಾನೇಂದ್ರಿಯ ಚೇಷ್ಟಾ ನಿಮಿತ್ತಂಗಳಾಗಿಹವು. ಬೇರೆ ವೈರಂಭ, ಮುಖ್ಯ, ಪ್ರಭಂಜನ, ಅಂತರ್ಯಾಮಿ ಸಂಜ್ಞೆಯುಳ್ಳ ನಾಲ್ಕುಜೀವಸಂಬಂಧವಾದ ವಾಯುಗಳೇ ಮಾನಸಾದ್ಯಂತಃಕರಣ, ಚೇಷ್ಟಾಕಾರಣಂಗಳಾಗಿರ್ಕುಂ. ೧೦೩

ಭೂತಗುಣ ವಿಕಾರ :

ಮತ್ತಮಾ ಭೂಮ್ಯಾದಿ ಭೂತಂಗಳೊಳಗೆ ಕ್ರಮದಿಂ ಧಾರಣ, ಪಿಂಡೀಕರಣ, ಪಾಕ, ವ್ಯೂಹ, ಅವಕಾಶಂಗಳೇ ವ್ಯಾಪಾರಂಗಳು. ಬ್ರಹ್ಮ, ವಿಷ್ಣು, ರುದ್ರ, ಈಶ್ವರ ಸದಾಶಿವರೆಂಬವರೆ ಅಧಿದೇವತೆಗಳು. ಗಂಧಾದಿಗಳೇ ಗುಣಂಗಳಕ್ಕುಂ

ಮತ್ತಮಾ ಭೂತಗುಣಂಗಳಲ್ಲಿ ಆಕಾಶಕ್ಕೊಂದು ಗುಣ, ವಾಯುವಿಗೆರಡು ಗುಣ, ಅಗ್ನಿಗೆ ಮೂರುಗುಣ, ಅಪ್ಪುವಿಗೆ ನಾಲ್ಕುಗುಣ. ಪೃಥ್ವಿಗೈದು ಗುಣಂಗಳವರ ವಿಭೇದಂಗಳೆಂತೆನೆ : ಆಕಾಶಕ್ಕೆ ಪ್ರತಿಧ್ವನಿ ರೂಪ ಶಬ್ದಗುಣವೊಂದು. ವಾಯುವಿಗೆ ಬಿಸ್ಸೆಂಬ ಶಬ್ದ, ಅನುಷ್ಣ ಸೀತಸ್ಪರ್ಶವೆಂಬಗುಣವೆರಡು ಅಗ್ನಿಗೆ ಭುಗಿ ಭುಗಿಲೆಂಬ ಶಬ್ದ, ಉಷ್ಣಸ್ಪರ್ಶ, ಪ್ರಭಾರೂಪವೆಂಬ ಗುಣ ಮೂರು. ಜಲಕ್ಕೆ ಬುಳು ಬುಳು ಎಂಬ ಶಬ್ದ, ಸೀತಸ್ಪರ್ಶ, ಶ್ವೇತರೂಪು, ಮಧುರ ರಸವೆಂಬ ಗುಣ ನಾಲ್ಕು. ಭೂಮಿಗೆ ಗಡ ಗಡಾ ಎಂಬ ಶಬ್ದ, ಕಠಿಣಸ್ಪರ್ಶ, ನೀಲಾದಿ ಚಿತ್ರರೂಪು ಮಧುರಾಮ್ಲಾದಿ ನಾನಾರಸ ಸುಗಂಧ ದುರ್ಗಂಧವೆಂಬ ಗುಣಗೈದಿವನಿಂತು ವಿಭಾಗಿಸಲ್ವೇಳ್ಕುಂ. ೧೦೪

ತ್ರಿಪುಟೀ ಲಕ್ಷಣ :

ಬಳಿಕ ಜ್ಞಾತೃ, ಜ್ಞಾನ, ಜ್ಞೇಯಂಗಳೆಂಬವೆ ತ್ರಿಪುಟಿಗಳವರಲ್ಲಿ : ಮೂಲಾಹಂಕಾರದಲ್ಲಿ ಪ್ರತಿಫಲಿಸಿರ್ದ ಜೀವಚ್ಚೈತನ್ಯವೇ ಜ್ಞಾತೃವೆನಿಸೂದು. ಮನದಲ್ಲಿ ಪ್ರತಿಬಿಂಬಿಸಿದ ಚೈತನ್ಯವೇ ಜ್ಞಾನವೆನಿಸೂದು. ಭೂತ ಭೌತಿಕ ವಿಷಯಂಗಳೇ ಜ್ಞೇಯಮಕ್ಕುಂ. ೧೦೫

ತತ್ವಗಳು :

ಬಳಿಕ, ಮನವೇ ಇಪ್ಪತ್ತನಾಲ್ಕನೆಯ ತತ್ವವೆನಿಸೂದು, ಮೂಲಾಹಂಕಾರವೇ ಇಪ್ಪತ್ತೈದನೆಯದು. ಅಹಂಕಾರಗತ ಚಿದಾಭಾಸ ಜೀವನೇ ಇಪ್ಪತ್ತಾರನೆಯಾತನು. ಮಾಯೋಪಾಧಿಕನಾದೀಶ್ವರನೇ ಇಪ್ಪತ್ತೇಳನೆಯಾತನು. ಅಹಂಕಾರ ಜೀವರ್ಗಧಿಷ್ಠಾನಮಾದ ಕೂಟಸ್ಥನೇ ಇಪ್ಪತ್ತೆಂಟನೆಯಾತನು ಆ ಮಾಯೋಪಾಧಿಕದ ಈಶ್ವರರ್ಗಧಿಷ್ಠಾತೃವಾದ ಬ್ರಹ್ಮನೇ ಇಪ್ಪತ್ತೊಂಭತ್ತನೆಯದಕ್ಕುಂ ೧೦೬

ಸೃಷ್ಟಿಕ್ರಮ

ಮತ್ತಮಾ ಪ್ರಕೃತಿಯಿಂ ಕಾರ್ಯೋದಯಮಾದೊಡೆ ಕ್ರಮ ಸೃಷ್ಟಿಯೆಂದು. ಯುಗವತ್‌ಸೃಷ್ಟಿಯೆಂದು ದ್ವಿಪ್ರಕಾರವಹುದಲ್ಲಿ : ಮೂಲ ಪ್ರಕೃತಿಯಿಂ ಮಹತ್ತತ್ವ ಅಹಮು ತನ್ಮಾತ್ರಪಂಚಕಮೆಂಬ ಸಪ್ತಪ್ರಕೃತಿಗಳವರಿಂ ಭೂತಂಗಳವರಿಂ ಬ್ರಹ್ಮಾಂಡ ದೇಹ ಘಟಾದಿ ಪ್ರಪಂಚೋದಯಮೇ ಕ್ರಮ ಸೃಷ್ಟಿಯೆನಿಸೂದು. ನಿರಸ್ತರಂಗ ಸಮುದ್ರದೊಳೊಂದೇ ಕಾಲದಲ್ಲಿ ವಾಯುವಶದಿಂ, ವಿಚಿತ್ರ ಫೇನ, ತರಂಗ, ಬುದ್ಬುದಾದಿಗಳಾಗುವಂತೆ, ಸಚ್ಚಿದಾನಂದಾತ್ಮಕ ಬ್ರಹ್ಮದಲ್ಲಿ, ಮಾಯಾಮಯ ನಾಮರೂಪ ಪ್ರಸರಣವೇ ಯುಗವತ್ಸೃಷ್ಟಿಯೆನಿಸೂದು. ಇವೆರಡುತೆರನುಂ ಶ್ರುತಿ ಸಿದ್ಧಮಪ್ಪುದರಿಂದಂಗೀಕೃತಮಕ್ಕಂ. ೧೦೭

ಸೃಷ್ಟಿ ದೃಷ್ಟಾಂತ :

ಬಳಿಕಿಲ್ಲಿ ಅತಿರೋಹಿತ ಬ್ರಹ್ಮಸ್ವರೂಪಮಪ್ಪುದರಿಂ ವಿಕಾರವಿಲ್ಲದೀಶ್ವರನಿಂ, ಜಡಪ್ರಕೃತಿಯುಲ್ಲಿ ಸಕಲ ಕಾರ್ಯೋದಯಮೆಂತೆನೆ : ಇಚ್ಛಾದಿಕಮಿಲ್ಲದ ಸೂರ್ಯನಿಂ ಯತ್ನಾದಿಕಮಿಲ್ಲದ ಸೂರ್ಯಕಾಂತದಲ್ಲಿ, ವಹ್ನಿಯುಜ್ವಲಿಪಂತೆ, ಪರಶಿವನಿಂ ಪ್ರಕೃತಿಯುಲ್ಲಿ ಮಹಾದಾದಿ ಕಾರ್ಯಮುದಿಸಲ್ವಿರೋಧಮಿಲ್ಲಂ. ೧೦೮

ಚತುರ್ವಿಧ ಕಾರ್ಯಕಲ್ಪನೆ :

ಬಳಿಕ ವೃತ್ತಿ, ಪರಿಣಾಮ, ಆರಂಭಕ, ವಿವರ್ತಕಮೆಂದು ಕಾರ್ಯೋದಯ ಚತುರ್ವಿಧಂಗಳವಕ್ಕೆ ಪಟ-ಕುಟೀಭಾವ, ಕ್ಷೀರ,-ದಧ್ಯಾಕಾರ, ತಂತು-ಪಟನ್ಯಾಯ, ರಜ್ಜು-ಸರ್ಪರೂಪಮೆಂಬವೆ ಕ್ರಮದಿಂ ದೃಷ್ಟಾಂತ ಚತುಷ್ಟಯಂಗಳಕ್ಕು ೧೦೯

ದೃಷ್ಟಾಂತ ಸಮೂಹಂಗಳು :

ಬಳಿಕ ರಜ್ಜು-ಸರ್ಪ, ಸ್ಥಾಣು-ಚೋರ,ಸ್ವಪ್ನ-ಇಂದ್ರಜಾಲ, ಗಗನ-ಗಂಧರ್ವ ನಗರ, ಶುಕ್ತಿಕಾ-ರಜತ, ನೀಲ-ನಭ, ಮರಿಚಿಕಾ-ಜಲಮೆಂಬಿವು ಮೊದಲಾದವೆ ಸದ್ರೂಪವಸ್ತುವಿನಲ್ಲಿ ಮಿಥ್ಯಾವಸ್ತು ಕಲ್ಪನೆಗೆ ದೃಷ್ಟಾಂತ ಸಮೂಹಂಗಳಕ್ಕುಂ ೧೧೦

ಕಾರಣತ್ವ ದೋಷ ಪರಿಹಾರ :

ಬಳಿಕಿಲ್ಲಿ ನಿರ್ವಿಕಾರ ಸ್ವರೂಪದಿಂದದ್ವಯನಾದಾತ್ಮನಲ್ಲಿ, ಮಿಥ್ಯಾವಸ್ತು ಕಲ್ಪಿತಮಾಯಿತ್ತೆಂತೆನೆ: ಮೊದಲಾ ಬ್ರಾಂತಿಯಾವಾತಂಗೆ ತೋರಿತ್ತೆಂದಡೆ : ಒಬ್ಬಾನೊಬ್ಬ ಯತೀಶ್ವರನಲ್ಲಿ ಸತಿ, ಪತಿ, ರತಿಕಾಂಕ್ಷೆಯೆಂಬ ತ್ರಿವಿಧರೂಪ ಸ್ವಪ್ನ ಒಂದೇ ಕಾಲದಲ್ಲಿ ತೋರಲಾತಂಗಾವ ಹಾನಿಯಿಲ್ಲದಂತೆ, ಸಾಕ್ಷಿಕನಾದಾತ್ಮನಲ್ಲಿ ಗುಣ ತ್ರಯಾತ್ಮಕ ಪ್ರವೃತ್ತಿಯಿಂ ಭ್ರಾಂತಿಸುವ ಜ್ಞಾತೃಭ್ರಾಂತಿ, ಜ್ಞಾನಭ್ರಾಂತಿ,

ವಿಷಯಜ್ಞೇಯವೆಂಬ ತ್ರಿಪುಟಿಮಯ ಪ್ರಪಂಚವೇಕ ಕಾಲದಲ್ಲಿಯೇ ಕಲ್ಪಿತಮಾಗ ಲಾತ್ಮಂಗಾವ ಹಾನಿಯುಂ ಇಲ್ಲವೆಂಬುದೇ ಸುಸ್ಥಿತಮಕ್ಕುಂ. ೧೧೧

## ಪ್ರಪಂಚ ತ್ರೈವಿಧ್ಯ ಭಾವನ :

ಮತ್ತಮೀ ಈಶ್ವರನಿಂ ಸೃಷ್ಟವಾದ ಮಾಯಾಮಯ ವ್ಯೋಮಾದಿ ಪ್ರಪಂಚ ಮಾದೊಡೆ ತನ್ನ ಸ್ವರೂಪದಿಂದೊಂದೇ ಪ್ರಕಾರದಿಂದಿಹುದದರಲ್ಲಿ, ಜೀವನ ಬುದ್ಧಿ ವೃತ್ತಿಕಲ್ಪಿತಮಾದ ಬೇರೊಂದು ಭೋಗ್ಯತ್ವ ರೂಪವೇ ಪ್ರೀತಿ ವಿಷಯವೆಂದು, ದ್ವೇಷವಿಷಯುವೆಂದು, ಉಪೇಕ್ಷಾವಿಷಯುವೆಂದು ತ್ರಿವಿಧಮಾಗಿರ್ಪುದವರಲ್ಲಿ : ವನಿತಾ ಧಿಕವೇ ಪ್ರೀತಿವಿಷಯುವೆನಿಸೂದು. ವ್ಯಾಘ್ರಾಧಿಕವೇ ದ್ವೇಷ ವಿಷಯುವೆನಿಸೂದು, ವೀಥಿ(ಚಿ) ತೃಣಾಧಿಕವೇ ಉಪೇಕ್ಷಾವಿಷಯುಮಕ್ಕುಂ. ೧೧೨

## ಹಲವು ಬಗೆಯಾಗಿ ತೋರ್ಪುದು :

ಮತ್ತಮಾ ವಿಷಯುವೊಂದರಲ್ಲಿಯೆ ಈಶ್ವರ ನಿರ್ಮಿತಮಾದೇಕಾಕಾರಮುಂ, ಜೀವಕಲ್ಪಿತ ಹಲವಾಕಾರಮುವಿಪ್ಪುದದಕ್ಕೆ ದೃಷ್ಟಾಂತವೆಂತೆನೆ: ಈಶ್ವರನಿರ್ಮಿತ ರತ್ನಾದಿವಸ್ತು ತಾನೊಂದೇ ಪ್ರಕಾರದಿಂದಿರುತ್ತಿರಲಾಗಿ, ಬಳಿಕ ಭೋಕ್ತೃಗಳ ಬುದ್ಧಿ ವೃತ್ತಿಕಲ್ಪಿತ ನಾನಾತ್ವದಿಂದಾ ರತ್ನಾದಿಕವೆ ತನ್ನಪಡೆದಾತಂಗೆ ಪ್ರೀತಿವಿಷಯುಮಾಗು ತ್ತಿಹುದು. ಪಡೆಯದಾತಂಗೆ ದ್ವೇಷವಿಷಯುಮಾಗುತ್ತಿಹುದು. ವಿರಕ್ತನಾದಾತಂಗೆ ಉಪೇಕ್ಷಾ ವಿಷಯುಮಾಗುತ್ತಿರ್ಕುಂ. ೧೧೩

ಮತ್ತಮಾ ಈಶ್ವರ ನಿರ್ಮಿತಮಾದ ವಸ್ತುರೂಪನೊಂದೇ ಪ್ರಕಾರಮಾಗಿರ್ದು ಜೀವನಿಂ ಕಲ್ಪಿತಮಾದ ಭೋಗ್ಯತ್ವಾಕಾರವದರಲ್ಲಿ ನಾನಾಪ್ರಕಾರಮಾಗಿಹುದನಭಿ ವ್ಯಕ್ತಂ ಮಾಡಲೋಸುಗವಿನ್ನೊಂದು ದೃಷ್ಟಾಂತವೆಂತೆನೆ : ಪಿತೃಜನ್ಯಮಾದೊಬ್ಬಾ ಳೊಬ್ಬ ಸ್ತ್ರೀಯ ಮಾಂಸಮಯುಮಾದ ರೂಪವೊಂದೇ ತೆರದಿಂದಿಹುದಾ ಸ್ತ್ರೀಯು ಭೋಕ್ತೃಗಳ ಬುದ್ಧಿ ವೃತ್ತಿ ಕಲ್ಪಿತಾಕಾರದಿಂ, ತಂದೆಗೆ ಮಗಳೆನಿಸಿ, ಗಂಡಂಗೆ ವಧು ವೆನಿಸಿ, ಸುತನಿಗೆ ತಾಯಿಯೆನಿಸಿ, ಮಾವಂಗೆ ಸೊಸೆಯೆನಿಸಿ ಬಹು ವಿಧಮಾಗುತ್ತಿ ಹಳಿಂತು ಸರ್ವವಿಷಯುವೆಲ್ಲಂ ಈಶ್ವರ ನಿರ್ಮಿತಮಾದೇಕಾಕಾರದಿಂ, ಜೀವ ನಿರ್ಮಿ ತಮಾದ ಹಲವಾಕಾರದಿಂದಿತ್ತಿರನಪ್ಪುದವರೊಳಗೆ. ೧೧೪

## ಈಶ್ವರ ಪ್ರಪಂಚ :

ಈಶ್ವರ ನಿರ್ಮಿತ ಪ್ರಪಂಚವೇ ಬಾಧಕವಲ್ಲಾಗಿಯುಂ, ಗುರು, ಶಾಸ್ತ್ರಾದಿ ರೂಪದಿಂ ಮೋಕ್ಷ ಸಾಧನಮಾಗಿಯುಂ, ತನ್ನಿಂ ಬಿಡಲು ಶಕ್ಯವಲ್ಲಾಗಿಯುಂ, ಅದೆಂತೆನೆ. ೧೧೫

ಜೀವ ಪ್ರಪಂಚತ್ರಯನಿಷೇಧ :

ಬಳಿಕ ಜೀವಕಲ್ಪಿತವಾದ ಪ್ರಪಂಚವೇ ಬಂಧಕರವಪ್ಪುದರಿಂ, ಮುಮುಕ್ಷು ವಿಂಬಿಡಲು ತಕ್ಕುದಾದೊಡೆ ಶಾಸ್ತ್ರೀಯ ಪ್ರಪಂಚವೆಂದು, ಅಶಾಸ್ತ್ರೀಯ ಪ್ರಪಂಚ ವೆಂದು ದ್ವಿವಿಧವಾಗಿಹುದು. ಮತ್ತಮಾ ಅಶಾಸ್ತ್ರೀಯ ಪ್ರಪಂಚವೇ ತೀವ್ರ ವೆಂದು, ಮಂದವೆಂದೆರಡು ತೆರನಾಗಿಹುದು. ಆತ್ಮರ ಬ್ರಹ್ಮರವಿಚಾರವೇ ಶಾಸ್ತ್ರೀಯ ಪ್ರಪಂಚವೆನಿಸೂದು ಕಾಮಕ್ರೋಧಾದಿಕವೇ ತೀವ್ರಪ್ರಪಂಚವೆನಿ ಸೂದು. ಮನಃಕಲ್ಪಿತವಾದ ರಾಜಸ ಕರ್ಮಾದಿಕವೇ ಮಂದ ಪ್ರಪಂಚವೆನಿಸೂದು. ಜೀವಕಲ್ಪಿತ ತ್ರಿವಿಧ ಪ್ರಪಂಚದಲ್ಲಿ ಶಾಸ್ತ್ರೀಯ ಪ್ರಪಂಚವೇ ಜ್ಞಾನಾದಿ ಸಾಧನದಿಂ ದಾತ್ಮಸಾಕ್ಷಾತ್ಕಾರವಾದ ಮೇಲೆ ಬಿಡಲು ತಕ್ಕುದು. ಆ ಶಾಸ್ತ್ರೀಯ ರೂಪವಾದ ತೀವ್ರ ಮಂದವೆಂಬುಭಯ. ಪ್ರಪಂಚವು ಆತ್ಮ ಸಾಕ್ಷಾತ್ಕಾರಕ್ಕೆ ವಿರೋಧಿಗಳಾಗಿ ಜ್ಞಾನಾಭ್ಯಾಸಕ್ಕೆ ಮುನ್ನವೇ ಬಿಡಲು ತಕ್ಕವು. ಬಳಿಕ ಆ ಉಭಯವು ಆತ್ಮಸಾಕ್ಷಾ ತ್ಕಾರವಾದ ನಂತರದಲ್ಲಿಯೂ ಮೋಕ್ಷ ಸಿದ್ಧ್ಯರ್ಥವಾಗಿ ಸರ್ವಥಾ ಬಿಡಲು ತಕ್ಕುವೆಂಬುದೇ ರಹಸ್ಯಾರ್ಥವುಕ್ಕುಂ. ೧೧೬

ಉಪಾಧಿ ಕ್ರಮ :

ಅನಂತರದೊಳ್ ಅವಚ್ಛಿನ್ನೋಪಾಧಿ,ಪ್ರತಿಬಿಂಬೋಪಾಧಿ,ಅಧ್ಯಾಸೋಪಾಧಿ ಯೆಂಬವೆ ಉಪಾಧಿತ್ರಯಂಗಳವರಲ್ಲಿ.
ಪ್ರತ್ಯಗಾತ್ಮಂಗೆ ಸುಷುಪ್ತಿರೂಪಾ ವಿದ್ಯೆಯೆ ಅವಚ್ಛಿನ್ನೋಪಾಧಿಯೆನಿಸೂದು.
ತತ್ಕಾರ್ಯವಾದ ಬುದ್ಧಿಯಲ್ಲಿ ಆತ್ಮ ಪ್ರತಿಫಲಿಸೂದೇ ಪ್ರತಿಬಿಂಬೋಪಾಧಿ ಯೆನಿಸೂದು.
ಆ ಬುದ್ಧಿಗತ ಸುಖದುಃಖಗಳನಾತ್ಮಂ ಭುಂಜಿಸುವಂತಿರ್ಪುದೇ ಅಧ್ಯಾಸೋಪಾಧಿಯೆನಿಸೂದು. ೧೧೭

ಅಧ್ಯಾಸ ಲಕ್ಷಣ :

ಮತ್ತಮಲ್ಲದುದರಲ್ಲಿ ಅಹುದೆಂಬ ಬುದ್ಧಿಯೇ ಶುಕ್ತಿಕಾರಜತ ದೃಷ್ಟಾಂತ ದಿಂದಧ್ಯಾಸಲಕ್ಷಣವಹುದು. ಆ ಅಧ್ಯಾಸವೇ ಮಿಥ್ಯಾಧ್ಯಾಸವೆಂದು, ಇತರಾಧ್ಯಾಸ ವೆಂದೂ, ಇತರೇತರಾಧ್ಯಾಸನೆಂದೂ, ಸತ್ಯಾಧ್ಯಾಸವೆಂದೂ ನಾಲ್ಕು ತೆರನಾಗಿಹುದ ವರಲ್ಲಿ:
ಅಗ್ನಿ ಸಂಪರ್ಕದಿಂ ಜಲಕ್ಕೆ ದಾಹಕತನವಾದಂತೆ ಪ್ರತ್ಯಗಾತ್ಮ ಸನ್ನಿಧಿಯಿಂ, ಕ್ರಮದಿಂದೆಡೆಯಾಡುವ ನೋಡುವ, ನೆನೆವ, ಅರಿವ ಶಕ್ತಿಗಳುಂಟಾಗಿ ಸ್ಥೂಲ ಶರೀರವೇ ಮಿಥ್ಯಾಧ್ಯಾಸವೆನಿಸೂದು.
ಇಂದ್ರಿಯವರ್ಗವೇ ಇತರಾಧ್ಯಾಸವೆನಿಸೂದು.
ಅಂತಃಕರಣವೇ ಇತರೇತರಾಧ್ಯಾಸವೆನಿಸೂದು.
ಮೂಲಾಹಂಕಾರವೇ ಸತ್ಯಾಧ್ಯಾಸಮುಕ್ಕುಂ.

ಬಳಿಕ ಅಹಂ ಎಂಬುದರಿಂ ಪ್ರತ್ಯಗಾತ್ಮಾಹಂಕಾರಂಗಳ್ಗೆ ರಜ್ಜು ಸರ್ಪವೆಂಬಂತೆ ನಿರುಪಾಧಿಕಾಧ್ಯಸವೆನಿಸೋದು. ಅಹಂ ಕರ್ತಾ ಎಂಬುದರಿಂ ಅಹಂಕಾರ ಧರ್ಮಾತ್ಮರ್ಗೆ ಪ್ರವಾಹಜಲ ಪತಿತ ಪತಂಗ ಪ್ರತಿಬಿಂಬದಂತೆ ತದ್ಧರ್ಮತಾಧ್ಯಾಸವೆನಿಸೂದು. ಕುಟುಂಬ ವಾಹನವೆಂಬುದರಿಂದಾತ್ಮ ಪುತ್ರಾದಿಕಕ್ಕೆ ಭೃತ್ಯಸ್ಥ ವ್ಯವಹಾರದಂತೆ ಸಂಬಂಧ ಮಾತ್ರಾಧ್ಯಾಸವೆನಿಸೂದು. ಇಂತಧ್ಯಾಸದಿಂದವೆ ನಿರ್ವಿಕಾರನಾದಾತ್ಮಂಗೆ ಸಂಸಾರ ಕಲ್ಪನೆಯಕ್ಕುಂ. ೧೧೮

ಪಂಚಾವಸ್ಥೆಗಳು :

ಮತ್ತಂ, ಜಾಗರಣ, ಸ್ವಪ್ನ, ಸುಷುಪ್ತಿ, ತುರ್ಯ, ತುರ್ಯಾತೀತವೆಂಬವೆ ಪಂಚಾವಸ್ಥೆಗಳವರಲ್ಲಿ:

ಸ್ಥೂಲ ಪಂಚಭೂತ, ದಶೇಂದ್ರಿಯ, ಪ್ರಾಣಪಂಚಕ, ಅಂತಃಕರಣಚತುಷ್ಟಯಂಗಳೆಂಬ ಚತುರ್ವಿಂಶತಿ ತತ್ವಾತ್ಮಕ ಸ್ಥೂಲ ಶರೀರದಲ್ಲಿ. ಸತ್ವಗುಣ, ಅಕಾರಾಕ್ಷರ, ವಿಷ್ಣುವಧಿದೇವತೆ, ಲೋಚನಸ್ಥಾನ ಹೃದಯಕಮಲದಷ್ಟದಳಗತಿಗಳಿಂ ವಿಶ್ವಜೀವನು, ವಿರಾಟ್ ಸಂಜ್ಞಿತನಾದೀಶ್ವರರುಗಳೊಂದಾಗಿ ವನಿತಾದಿ ವಿಷಯ ಭೋಗವಂ ಸಕಲಕರಣ ಸಾಮಗ್ರಿಯಿಂದನುಭವಿಸುತ್ತಿಹುದೇ ಜಾಗರಣಾವಸ್ಥೆ ಎನಿಸೂದು. ೧೧೯

ಮತ್ತಮಾ ಇಪ್ಪತ್ತನಾಲ್ಕು ತತ್ವಂಗಳೊಳಗೆ ಸ್ಥೂಲ ಭೂತಂಗಳೈದನು, ಚಿತ್ತ, ಬುದ್ಧಿಗಳೆಂಬೆರಡನು ಬಿಟ್ಟು, ಮಿಕ್ಕ ಹದಿನೇಳು ತತ್ವರೂಪ ಸೂಕ್ಷ್ಮಶರೀರದಲ್ಲಿ ರಜೋಗುಣ, ಉಕಾರಾಕ್ಷರ, ಬ್ರಹ್ಮನಧಿದೇವತೆ, ಕಂಠಸ್ಥಾನ, ಹೃತ್ಕಮಲಕರ್ಣಿಕಾಗತಿಗಳಿಂ ತೈಜಸಜೀವನು ಸೂತ್ರಾತ್ಮಕ ಸಂಜ್ಞಿತನಾದೀಶ್ವರರುಗಳೊಂದುಗೂಡಿ ಜಾಗ್ರದ್ವಾಸನಾ ವಿಷಯಭೋಗವಂ ಮನವೆಂಬ ಕರಣದಿಂದನುಭವಿಸುತ್ತಿಹುದೇ ಸ್ವಪ್ನಾವಸ್ಥೆಯೆನಿಸೂದು. ೧೨೦

ಮತ್ತಂ ಪರಿದು ಮೇವೃತ್ತಿರ್ದ ಮರಿಗಳೆಲ್ಲವಂ ತನ್ನ ಪಕ್ಕದ ಮರೆಯೊಳಡಂಗಿಸಿಕೊಂಡೊಂದೆಡೆಯಲ್ಲಿ ನಿದ್ರೆಗೆಯ್ಯುತ್ತಿರ್ದ ಚರಣಾಯುಧನಂತಾ ಸಮಸ್ತ ಕಾರ್ಯವನೊಳಕೊಂಡು, ತತ್ಸಂಸ್ಕಾರ ಸಹಿತಮಾಗಿ, ಆತ್ಮಾಶ್ರಯದಲ್ಲಿ ನಿರವಸ್ಥೆಯಿಂದಿರ್ದ,ಪ್ರಕೃತಿರೂಪ ಕಾರಣದೇಹದಲ್ಲಿ ತಮೋಗುಣ, ಮಕಾರಾಕ್ಷರ, ರುದ್ರನಧಿದೇವತೆ, ಹೃದಯಸ್ಥಾನ, ತತ್ಕಮಲಕರ್ಣಿಕಾ ಮಧ್ಯಗತಿಗಳಿಂ ಪ್ರಾಜ್ಞಜೀವನು ಅಂತರ್ಯಾಮಿ ಸಂಜ್ಞಿತನಾದೀಶ್ವರರುಗಳೇಕಮಾಗಿ ಬ್ರಹ್ಮಾನಂದ ವಿಷಯಭೋಗವಂ ಮಾಯಾವೃತ್ತಿಯೆಂಬ ಸೂಕ್ಷ್ಮಕರಣದಿಂದನುಭವಿಸುತ್ತಿಹುದೆ ಸುಷುಪ್ತಾವಸ್ಥೆಯೆನಿಸೂದು. ೧೨೧

ಬಳಿಕಾ ಜಾಗ್ರದಾದ್ಯವಸ್ಥೆಗಳಿಗೆ ಅವಸ್ಥಾತ್ರಯ, ಧಾಮತ್ರಯ, ಸ್ಥಾನತ್ರಯ ಪುರತ್ರಯಗಳೆಂಬವೆ ಪರ್ಯಾಯ ನಾಮಂಗಳಕ್ಕುಂ. ಮತ್ತಮಾ ಜಾಗರಣದಲ್ಲಿಯೆ ತತ್ಕಮಲವನುಳಿದು, ಮನೋವ್ಯಾಪಾರವನಳಿದು, ಪರಮಾತ್ಮನ ಚಿಂತನೆಗೆಯ್ವುದೇ ತುರ್ಯಾವಸ್ಥೆಯೆನಿಸೂದು.
ಮತ್ತಮಾತ್ಮನಲ್ಲಿಯೇ ಮನಮಗ್ನಮಾಗಿರ್ಪುದೆ ತುರ್ಯಾತೀತಾವಸ್ಥೆಯಕ್ಕುಂ. ೧೨೨

ಮತ್ತಮಾ ಅವಸ್ಥೆಗಳಲ್ಲಿ ಸ್ಥಾವರಕ್ಕೆ ಸುಪ್ತಿ, ಪಶ್ವಾದಿಗಳ್ಗೆ ಸ್ವಪ್ನ, ದೇವತೆಗಳಿಗೆ ಜಾಗರಣ, ಮನುಷ್ಯರಿಗವಸ್ಥಾತ್ರಯ, ಮರುಳುಗಳಿಗೆ ತುರ್ಯ, ಪರಮಯೋಗಿಗಳಿಗೆ ತುರ್ಯಾತೀತಂಗಳಪ್ಪವವರೊಳಗೆ, ಮೊದಲ ಮೂರವಸ್ಥೆಗಳೇ ಮನುಷ್ಯರ್ಗೆ, ತಮ್ಮಿಂ ತಾವೇ ತೋರಿ ಸಂಸಾರಾತ್ಮಕಮಾಗಿಹವು. ಮಿಕ್ಕೆರಡವಸ್ಥೆಗಳೇ ಯೋಗಾಭ್ಯಾಸಬಲದಿಂ ಜನಿಸಿ ಮುಕ್ತಿ ಸಾಧನಂಗಳಾಗಿರ್ಕುಂ. ೧೨೩

## ಅವಸ್ಥಾ ಮಿಥ್ಯಾತ್ವ :

ಮತ್ತಮಾ ಅವಸ್ಥೆಗಳೊಂದರೊಳೊಂದಿಲ್ಲಾಗಿಯುಂ, ಕಾಲ ದೇಶಾದಿ ನಿಯಮ ತೋರ್ಕೆಯಿಲ್ಲಾಗಿಯುಂ, ಮಿಥ್ಯಾಭೂತಂಗಳಕ್ಕುಮವರಲ್ಲನುಸ್ಯೂತಮಾಗಿ ಬಿಡದರಿವ ನಿಜ ತುರ್ಯನಾದಾತ್ಮನೇ ಸತ್ಯನಪ್ಪಂ. ೧೨೪

## ಆತ್ಮಸಿದ್ಧಿ :

ಮತ್ತಮಾ ಜಾಗ್ರಸ್ವಪ್ನಂಗಳಲ್ಲಿ ಅರಿವು ಉಂಟೆಂಬುದೇ ಪ್ರಸಿದ್ಧವು. ಆ ಸುಷುಪ್ತಿಯಲ್ಲಿ ಅರಿವು ಉಂಟೆಂಬುದಕ್ಕೆ ಎಚ್ಚತ್ತಕಾಲದಲ್ಲಿ, ನಾನೇನನು ಅರಿಯದೆ ಮಲಗಿರ್ದೆನು, ಸುಖದಿಂ ನಿದ್ರೆಗೆಯ್ದೆನೆಂಬ ಸ್ಮರಣದ್ವಯುದನುಭವವಿಲ್ಲದೆ ಪುಟ್ಟದೆಂಬ ಅರ್ಥಾಪತ್ತಿ ಪ್ರಮಾಣದಿಂದ ಆ ಸುಷುಪ್ತಿಯಲ್ಲಿ ಆತ್ಮನು ಸಮಸ್ತ ಘಟಾದಿ ರೂಪನೊಳಕೊಂಡ ಕತ್ತಲೆಯಂ ಕಣ್ಣು ಕಾಂಬಂತೆ ಸಕಲ ಶರೀರಾದಿ ಕಾರ್ಯವನೊಳಕೊಂಡ ಅವಿದ್ಯೆಯನು ಕಾಂಬನು. ಆ ಅವಿದ್ಯೆಯ ಸೂಕ್ಷ್ಮವೃತ್ತಿಗಳಲ್ಲಿ ಚಂಚಲತರು ಪಲ್ಲವಾಂತರದ ಚಂದ್ರಿಕಾ ಲೇಶಂಗಳಂತೆ ಪೊಳೆದಡಗುತ್ತಿರ್ದ ನಿಜ ಸ್ವರೂಪ ಮಾದಾನಂದಾಂಶಂಗಳನು, ಕರಣಾಂತರಾಪೇಕ್ಷೆಯಿಲ್ಲದೆ ಅನುಭವಿಸುತ್ತಿರ್ಪುದರಿಂದ ಅಲ್ಲಿ ಅರಿವು ಸುಸ್ಥಿರಮಕ್ಕುಂ. ೧೨೫

ಬಳಿಕೇನನೂ ಅರಿಯದೆ ಸುಖದಿಂ ಮಲಗಿದ್ದೆನೆಂಬುದಕ್ಕೆ, ಕ್ರಮದಿಂ ಸಕಲ ವಿಷಯ ಜ್ಞಾನವಿಲ್ಲದೆ, ಸಂಸಾರ ದುಃಖ ನಿವೃತ್ತಿಗಳೇ ಅಲ್ಲದೆ, ಸರ್ವಥಾ ಸುಷುಪ್ತಿಯಲ್ಲಿ ಅವಿದ್ಯೆಗೆ ಸಾಕ್ಷಿಕನಾದಾನಂದಮಯನಾದ ಆತ್ಮನುಂಟೆಂದೊಡೋರ್ವನು ಅಲ್ಲಿ ಅರಿದೆನೆಂಬುದೇನು ಕಾರಣಮಿಲ್ಲೆಂದೊಡೆ, ಒಡವೆಯನರಸಲೆಂದು ಬಾವಿ

ಯೊಳಗೆ ಮುಳುಗಿದಾತಂಗಾ ಒಡವೆ ಇಲ್ಲ ಉಂಟು ಎಂಬುದನಲ್ಲಿ ಪೊರಮಟ್ಟಲ್ಲದೆ ಪೇಳ್ವುದು ಎಂತು ಘಟಿಸದಂತೆ ಸುಷುಪ್ತಿಯಲ್ಲಿ ಅರಿವು ಉಂಟಾದೊಡಂ ಕಾಲಕರ್ಮ ವಶದಿಂದೆಚ್ಚೆತ್ತು, ಕರಣ ಸಹಕಾರಿಯಾದಲ್ಲದೆ, ಅಲ್ಲಿ ತಾನರಿದರ್ಥಮಂ ಪೇಳ್ವುದು ಘಟಿಸದು. ಇಂತು ಆಗಲಾ ಸರ್ವಾವಸ್ಥೆಗೆ ಸಾಕ್ಷಿಕನಾದಾತ್ಮಂಗೆ ಸಚ್ಚಿದಾನಂದ ಸ್ವಯಂ ಪ್ರಕಾಶರೂಪತ್ವವನನುಭವ ಸಿದ್ಧಮಕ್ಕುಂ. ೧೨೬

ಪಂಚಕೋಶ ವಿವೇಕ :

ಬಳಿಕ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಆನಂದಮಯಮೆಂಬುವೆ ಪಂಚಕೋಶಂಗಳವರಲ್ಲಿ :

ಪಿತೃಮಾತೃಗಳ ಶುಕ್ಲ ಶೋಣಿತಂಗಳಿಂದಾದ ಸ್ಥೂಲ ಶರೀರವೇ ಅನ್ನಮಯ ಕೋಶವೆನಿಸೂದು. ಸೂಕ್ಷ್ಮತನುವಿನಲ್ಲಿ ಪ್ರಾಣಮಾರುತನುಂ, ಕರ್ಮೇಂದ್ರಿಯಂ ಗಳುಂ ಕೂಡಿ ಪ್ರಾಣಮಯ ಕೋಶವೆನಿಸೂದು. ಮನಸ್ಸು ಜ್ಞಾನೇಂದ್ರಿಯಂ ಗಳುಂ ಕೂಡಿ ಮನೋಮಯಕೋಶವೆನಿಸೂದು.

ಪ್ರತ್ಯಗಾತ್ಮ ಚೈತನ್ಯಛಾಯೆಯೊಡಗೂಡಿ ಲೋಹಾಂತ ಕಾಂತದಂತಿರ್ದ ಅಹಂಕಾರಮುಂ ಜ್ಞಾನೇಂದ್ರಿಯಂಗಳುಂ ಕೂಡಿ ವಿಜ್ಞಾನಮಯಕೋಶವೆನಿಸೂದು. ಕಾರಣ ದೇಹರೂಪಮಾದ ವಿದ್ಯೆಯುಂ, ಜಾಗ್ರದಲ್ಲಿ ವನಿತಾದಿಷ್ಟ ವಿಷಯ ದರ್ಶನ, ಸಾಮೀಪ್ಯ ಸಂಯೋಗಂಗಳಿಂ ಕ್ರಮದಿಂ ಪುಟ್ಟುವ ಪ್ರಿಯ ಮೋದ ಪ್ರಮೋದವೆಂಬೀ ತ್ರಿವಿಧಂಗೂಡಿ ಆನಂದಮಯ ಕೋಶಮಕ್ಕುಂ. ೧೨೭

ಅಹಂಕಾರಕ್ಕಾತ್ಮತ್ವ ಖಂಡನೆ :

ಬಳಿಕೀ ವಿಜ್ಞಾನಮಯ ಕೋಶರೂಪಮಾದ, ಅಹಂಕಾರವನೆ ಆತ್ಮಾನಾತ್ಮ ವಿವೇಕ ಶೂನ್ಯರುಗಳು ಅಹಮೆಂಬ ತಮ್ಮನುಭವದಿಂದಾತ್ಮನೆಂದು ಬಗೆವರದಕ್ಕೆ "ನೀಲೋತ್ಪಲ"ವೆಂಬಲ್ಲಿ ನೀಲಗುಣ ವಿಶೇಷಣದೊಡನೆ ವಿಶೇಷ್ಯಮಾದುತ್ಪಲವು ವೇದ್ಯಮಪ್ಪಂತೆ "ಕೃಶೋಹ"ವೆಂಬಲ್ಲಿ ಸ್ಥೂಲ ತನುವಿನೊಡನೆ, 'ಶ್ರೋತಾಹ' ವೆಂಬಲ್ಲಿ ಇಂದ್ರಿಯದೊಡನೆ, 'ಧ್ಯಾತಾಹ' ವೆಂಬಲ್ಲಿ ಅಂತಃಕರಣದೊಡನೆ ಕೂಡಿ ಪ್ರತ್ಯಗಾತ್ಮಂಗೆ ವೇದ್ಯಮಪ್ಪುದರಿಂದ ಅಹಂಕಾರವು ಆತ್ಮನೆಂಬುದಲ್ತು. ೧೨೮

ಅಹಂಕಾರ ಚೈತನ್ಯ ವಿವೇಕ :

ಬಳಿಕ ಅಂತಾದೊಡೆ ಅಚೇತನಮಾದಹಂಕಾರಕ್ಕೆ ಬಾಹ್ಯವಿಷಯವನರಿವಶನ ವೆಂತೆನೆ : ಸೂಜಿಕಲ್ಲ ಸನ್ನಿಧಿಯಿಂ ಸೂಜಿ ಚೇಷ್ಟಿಸುವಂತೆ, ಬಿಸಿಲಲ್ಲಿ ಪಿಡಿದ ಕನ್ನಡಿ

ಕೋಣೆಯ ಕತ್ತಲೆಯಂ ಬೆಳಗುವಂತೆ, ಪ್ರತ್ಯಗಾತ್ಮ ಸನ್ನಿಧಿಯಿಂದವೂ, ತಚ್ಚೈತನ್ಯ ಪ್ರತಿಬಿಂಬ ತನ್ನಲ್ಲಿರ್ಪುದರಿಂದವೂ, ಜಡವಾದಹಂಕಾರವೆ ಬಾಹ್ಯವಿಷಯದಶೆಯಿಂ ಜಾಗ್ರ ಸ್ವಪ್ನಂಗಳಲ್ಲಿ ಸಂಚರಿಸಿ ಸುಷುಪ್ತಿಯಲ್ಲಡಗುತ್ತಿಹುದು. ತತ್ಪ್ರಪಂಚಕ್ಕೆ ಪಮಾನವೆಂತೆನೆ : ಅಹಂಕಾರದ ಲಯಾವಸ್ಥಾತ್ಮಕವಾದ ಸುಪ್ತಿಯೊಳಾ ಅವಿದ್ಯೆ ಯೆಂಬ ಕೋಣೆಯೊಳಭಿತ್ತಿಯಂ, ನಿದ್ರೆಯೆಂಬ ಕವಾಟವಂ, ನಿಷ್ಕಂಪ ದೀಪರೂಪ ಮಾದ ತನ್ನಂ ತಾನೇ ಬೆಳಗುತಿರ್ಪುದೇ ಪ್ರತ್ಯಗಾತ್ಮ ಜ್ಯೋತಿಯೆನಿಸೂದು. ೧೨೯

ಬಳಿಕ ಕಾಲಕರ್ಮಾದಿ ಸಮೀರಣ ಪ್ರೇರಣೆಯಿಂದಾ ತಾಮಸನಪ್ಪ ನಿದ್ರೆ ಯೆಂಬ ಕವಾಟಂದೆರೆಯೆ, ಬಳಿಕಾ ಅವಿದ್ಯಾಪ್ರಥಮಾವಸ್ಥಾತ್ಮಕ ಮಹತ್ತತ್ವವೆಂಬ ದೇಹಳಿಯ ಮೇಲಿರ್ದ ಸಾತ್ವಿಕವಾದಹಂಕಾರವೆಂಬ ಸ್ಫಟಿಕಮಣಿಯಾ ಪ್ರತ್ಯ ಗಾತ್ಮ ಪ್ರದೀಪ ಪ್ರತಿಬಿಂಬ ಗರ್ಭಿತವಾಗಿ ಮುನ್ನಿನಂತೆ ಜೀವನೆನಿಸಿ ಸ್ವಪ್ನಾವಸ್ಥೆ ಯೆಂಬ ನಡುಮನೆಯಂ ಬೆಳಗಿ ಮೇಲಿಂದ್ರಿಯಂಗಳೆಂಬ ಗವಾಕ್ಷದಿಂ ಪೊರಮಟ್ಟು ಜಾಗ್ರದವಸ್ಥೆಯೆಂಬ ಬಾಹ್ಯಾಂಗಣವಂ ಪ್ರಕಾಶಿಸುತ್ತಿರ್ಕುಂ. ೧೩೦

ಮತ್ತಮಾ ಕಾಲಕರ್ಮಾದಿ ಸಮೀರಣ ಪ್ರೇರಣೆಯಿಂದವೆ ನಿದ್ರೆಯೆಂಬ ಕವಾಟಂ ಮುಚ್ಚಲೊಡನೆ ಅಹಂಕಾರವೆಂಬ ಸ್ಫಟಿಕಮಣಿಯು ತನಗೆ ಕಾರಣವಾದ ಅವಿದ್ಯೆಯಲ್ಲಡಗಲೂ ಜಾಗ್ರಸ್ವಪ್ನಂಗಳೆಂಬ ಅಂಗಣ ನಡುಮನೆಗಳಂಧಕಾರಮಯ ವಪ್ಪವಾ ಅಹಂಕಾರ ಮಣಿಯಲ್ಲಿ ಪ್ರತಿಫಲಿಸಿರ್ದ, ಚಿದ್ದೀಪ ಪ್ರಕಾಶವೆ ತನಗೆ ಮೂಲ ಭೂತವಾದ ಪ್ರತ್ಯಗಾತ್ಮ ಪ್ರದೀಪದಲ್ಲಿಯೇ ಏಕವಾಗುತ್ತಿಹುದಿಂತು ಜಾಗ್ರದಾ ದ್ಯವಸ್ಥಾತ್ರಯದೊಳಹಮ್ಮಿನ ಭಾವಾಭಾವಂಗಳನವಿಕಾರನಾಗಿ ಅರಿವಾತ್ಮನೋರ್ವಂ ಬೇರಿಪ್ಪುದರಿಂ ಅಹಂ ಆತ್ಮನಲ್ಲೆಂಬುದೇ ಸಿದ್ಧಮಕ್ಕುಂ. ೧೩೧

## ಅಹಂಕಾರ ಸಂಬಂಧ :

ಬಳಿಕ ಬಾಹ್ಯವಿಷಯಕ್ಕಾತ್ಮನಾಗಿ ಪ್ರತ್ಯಗಾತ್ಮಂಗೆ ವೇದ್ಯಮಪ್ಪುದರಿಂ ಜಡಾಜಡ ಸ್ವರೂಪಮಪ್ಪ ದರ್ಪಣದ ಹಿಂಭಾಗ ಮುಂಭಾಗದಂತೆ, ಪ್ರಕಾಶಾಪ್ರಕಾ ಶಾತ್ಮಕವಾದಹಂಕಾರಕ್ಕೆ ದೇಹ, ಚಿಚ್ಛಾಯೆ, ಪ್ರತ್ಯಗಾತ್ಮರೆಂಬೀ ಮೂರರೊಡನೆ ಸಂಬಂಧಮುಂಟವರಲ್ಲಿ, ಅಹಂ ಜ್ವರಾಮಿ ಎಂಬ ದರಿಂ ಚಿತ್ಪ್ರತಿಬಿಂಬಯುಕ್ತವಾದ ಹಂಕಾರ ಸಂಬಂಧದಿಂ ಸ್ಥೂಲದೇಹಕ್ಕೆ ಉಷ್ಣಾದಿಗಳನರಿವತನವೇ ಕರ್ಮಜನಿತ ವಾಗಿ ಕರ್ಮಜವೆನಿಸೂದು. ೧೩೨

ಬಳಿಕ ಅಹಂಜಾನಾಮಿ ಎಂಬುದರಿಂ ಚಿಚ್ಛಾಯಾಹಂಕಾರಂಗಳ ಸಂಬಂಧವೇ ಸೃಷ್ಟಿತೊಡಗಿ ಮೋಕ್ಷಾವಧಿಯಾಗಿ ಕೆಡದಾಗಿ ಸಹಜವೆನಿಸೂದು. ಬಳಿಕಹಂಕರ್ತಾ ಎಂಬುದರಿಂದ ಸಂಗನಾದ ಪ್ರತ್ಯಗಾತ್ಮಾಹಂಕಾರಗಳ ಸಂಬಂಧವೇ ಭ್ರಾಂತಿಜನ್ಯ ವೆನಿಸೂವೆಂಬಿವು ಮೊದಲಾದವೆಲ್ಲಂ ದೃಶ್ಯವಿವೇಕಮಕ್ಕುಂ. ೧೩೩

ಸಪ್ತಾವಸ್ಥೆಗಳು :

ಅನಂತರದಲ್ಲಿ ಅಜ್ಞಾನ, ಆವರಣ, ವಿಕ್ಷೇಪ, ಪರೋಕ್ಷಜ್ಞಾನ, ಅಪರೋಕ್ಷ ಜ್ಞಾನ, ಶೋಕನಿವೃತ್ತಿ, ನಿರಂಕುಶತೃಪ್ತಿಯೆಂಬವೆ ಜೀವನ ಸಪ್ತಾವಸ್ಥೆಗಳವರಲ್ಲಿ :

ಸಂಸಾರಾಸಕ್ತನಾದ ಚಿದಾಭಾಸಜೀವನು ಶ್ರುತಿವಿಚಾರಕ್ಕಿಂ ಮುನ್ನವೆ ತನ್ನ ನಿಜ ಸ್ವರೂಪಮಾದ ಸ್ವಯಂ ಪ್ರಕಾಶಮಪ್ಪ ಪ್ರತ್ಯಗಾತ್ಮನನರಿಯದಿಹುದೇ ಅಜ್ಞಾನವೆನಿಸೂದು.

ಬಳಿಕೊಂದಾನೊಂದು ವೇಳೆ ಚಿದಾತ್ಮ ಪ್ರಸಂಗ ಬರಲಾಗಿ ಪ್ರತ್ಯಗಾತ್ಮನಿಲ್ಲ ವೆಂಬ, ಪ್ರತ್ಯಗಾತ್ಮಂ ತೋರದೆಂಬುಭಯ ವಿಧ ಮೋಸವೇ ಆ ಅಜ್ಞಾನ ಕಾರ್ಯ ಮಾದ ಆವರಣೀಯುವೆನಿಸೂದು.

ಬಳಿಕ ತಾನೇ ಕರ್ಮಕರ್ತೃ, ತಾನೇ ಕರ್ಮಫಲಭೋಗ್ಯವೆಂದು ಬಗೆದು ದೇಹಾಭಿಮಾನಿಯಾದ ಚಿದಾಭಾಸ ಜೀವನು ತಾನೆ ವಿಕ್ಷೇಪವೆನಿಸೂದು.

ಬಳಿಕಾತ್ಮನ ಅಸ್ತಿತ್ವಮಂ ಪೇಳ್ವ ಶ್ರುತ್ಯಾಚಾರ್ಯ ವಾಕ್ಯವಿಶ್ವಾಸದಿಂ ಪ್ರತ್ಯ ಗಾತ್ಮನುಂಟೆಂದು ತಿಳಿವುದೇ ಮೊದಲ ಅಸತ್ವಾವರಣ ನಿವರ್ತಕಮಾದ ಪರೋಕ್ಷ ಜ್ಞಾನವೆನಿಸೂದು.

ಬಳಿಕ ನೀನೆ ಬ್ರಹ್ಮನೆಂದು ಪೇಳ್ವ ವೇದವಾಕ್ಯ ವಿಚಾರ ಪರಿಪಾಕವಶದಿಂದಾ ಪ್ರತ್ಯಗಾತ್ಮನೇ ತಾನೆಂದರಿವುದೇ ಎರಡನೆಯ ಅಭಾವಾವರಣ ನಿವರ್ತ ಕಮಾದ ಅಪರೋಕ್ಷಜ್ಞಾನವೆನಿಸೂದು.

ಬಳಿಕ ಪ್ರತ್ಯಗಾತ್ಮ ಸಾಕ್ಷಾತ್ಕಾರದಿಂ ಮೇಲೆ, ನಾನು ಕರ್ತೃಕರ್ಮ, ಕರ್ಮ ಫಲಭೋಕ್ತೃವೆಂಬ ಜೀವರೂಪ ದುಃಖಪರಿತ್ಯಾಗವೇ ಶೋಕನಿವೃತ್ತಿ ಯೆನಿಸೂದು.

ಬಳಿಕ ಮಾಡಲು ತಕ್ಕಕೃತ್ಯವೆಲ್ಲಂಮಾಡಲ್ಪಟ್ಟಿತ್ತು, ಯೆಯ್ದಲ್ತಕ್ಕ ಫಲಜಾತ ವೆಲ್ಲವೂ ಯೆಯ್ದಲ್ಪಟ್ಟಿತ್ತು ಎಂದು ಸಹಜ ಪರಿತುಷ್ಟಿವಡೆದಿರ್ಪುದೇ ನಿರಂಕುಶ ತೃಪ್ತಿ ಯೆನಿಸೂದು.

ಈ ಶೋಕ ನಿವೃತ್ತಿ, ನಿರಂಕುಶತೃಪ್ತಿಯೆಂಬೆರಡವಸ್ಥೆಗಳೇ ಅಪರೋಕ್ಷಜ್ಞಾನ ಫಲಂಗಳಕ್ಕುಂ. ೧೩೪

ಸಪ್ತಾವಸ್ಥಾಸಮನ್ವಯ :

ಬಳಿಕ ಸ್ವಯಂ ಪ್ರಕಾಶ ಚಿದ್ರೂಪನಾದಾತ್ಮಂಗೆ ನಿತ್ಯಾಪರೋಕ್ಷತ್ವಮುಂಟ ಪ್ಪುದರಿಂದಾತ್ಮನೊಳೀ ಅಜ್ಞಾನಾದಿ, ಸಪ್ತಾವಸ್ಥೆ ಘಟಿಸಲರಿಯದೆಂದೊಡದಕ್ಕೆ ದೃಷ್ಟಾಂತಮೆಂತೆನೆ;

ಪೂರ್ವದಲ್ಲಿ ದಶಪುರುಷರುಗಳೊಂದು ನದಿಯಂ ದಾಂಟಿ ಪೋಗಿ ಮೇಲೆ ತಮ್ಮಂ ಪರಾಮರ್ಶಂಗೆಯ್ವ ಸಮಯದೊಳವರಲ್ಲಿ, ನವಸಂಖ್ಯಾ ಪುರುಷರುಗಳನಿದಿರಿಟ್ಟೆಣಿಸುತ್ತಿದ್ದೋರ್ವ ಪುರುಷನು, ತಾನೇ ದಶಮ ಪುರುಷನೆಂಬುದನರಿಯದಿಹುದೇ ಅಜ್ಞಾನವೆನಿಸೂದು.

ಬಳಿಕ ಹತ್ತನೆಯಾತನಿಲ್ಲವಾತಂ ಕಾಣಿಸುತ್ತಿರನೆಂಬುಭಯ ಭ್ರಾಂತಿಯೇ ಆ ಅಜ್ಞಾನ ಕಾರ್ಯಮಾದ ಆವರಣವೆನಿಸೂದು.

ಬಳಿಕ ಹತ್ತನೆಯಾತಂ ನದಿಯಲ್ಲಿ ಮೃತನಾದನೆಂಬ ದುಃಖವೇ ವಿಕ್ಷೇಪವೆನಿಸೂದು.

ಬಳಿಕ ಬೇರೊಬ್ಬಾಪ್ತ ವಚನದಿಂದ ದಶಮ ಪುರುಷನನು ಸ್ವರ್ಗದಂತುಂಟೆಂದರಿವುದೇ ದಶಮನಿಲ್ಲೆಂಬ ಮೊದಲಾದಾವರಣಕ್ಕೆ ವಿರೋಧಿಯಾದ ಪರೋಕ್ಷಜ್ಞಾನವೆನಿಸೂದು.

ಬಳಿಕ ನವಸಂಖ್ಯಾ ಪುರುಷರುಗಳೊಡನೆ ಕೂಡಿ ಕ್ರಮದಿಂದೆಣಿಸಿ ನೀನೆ ದಶಮನೆಂದು ಪೇಳೆ ತನ್ನತಾನೇ ಸಾಕ್ಷಾತ್ಕರಿಪುದೇ ದಶಮಂ ಕಾಣಿಸನೆಂಬ ಎರಡನೆಯಾವರಣಕ್ಕೆ ವಿರೋಧಿಯಾದ ಅಪರೋಕ್ಷಜ್ಞಾನವೆನಿಸೂದು.

ಬಳಿಕಾ ದಶಮನ ಮೃತಿ ದುಃಖಮಂ ಬಿಡುವುದೇ ಶೋಕನಿವೃತ್ತಿಯೆನಿಸೂದು.

ಬಳಿಕ ನಿಜಸ್ಥಿತಿಯಿಂ ಸುಖದಿಂದಿರ್ಪುದೇ ನಿರಂಕುಶತೃಪ್ತಿಯಕ್ಕುಂ. ೧೩೫

### ವೇದವಾಕ್ಯ ವಿಚಾರ :

ಬಳಿಕ ವೇದವಾಕ್ಯ ವಿಚಾರವೆಂತನೆ ; ವಿಧಿವಾಕ್ಯ, ನಿಷೇಧವಾಕ್ಯ, ಸಿದ್ಧಾರ್ಥಬೋಧಕ ವಾಕ್ಯವೆಂದು ವೇದವಾಕ್ಯಂ ತ್ರಿವಿಧಮಾಗಿರ್ಪುದವರಲ್ಲಿ : ಯಜ್ಞಾದಿಗಳಂ ಮಾಡಬೇಕೆಂಬುದೇ ವಿಧಿವಾಕ್ಯ, ಸುರಾಪಾನಾದಿಗಳಂ ಮಾಡಬಾರದೆಂಬುದೇ ನಿಷೇಧವಾಕ್ಯ, ವಿಧಿಶೂನ್ಯಮಾಗಿ ಬ್ರಹ್ಮಾತ್ಮೈಕರೂಪವಸ್ತುಮಾತ್ರಮಂ ಬೋಧಿಪವೇ ಸಿದ್ಧಾರ್ಥಬೋಧಕ ವಾಕ್ಯಂಗಳಕ್ಕುಂ. ೧೩೬

### ವೇದಾಂತ ಮಹಾವಾಕ್ಯಾರ್ಥ :

ಬಳಿಕ ಋಗ್ಯಜುಸ್ಸಾಮಾಥರ್ವಣವೆಂಬ ನಾಲ್ಕು ವೇದಂಗಳಲ್ಲಿ, ಕ್ರಮದಿಂ ಪ್ರತಿಪಾದಿಸಲ್ಪಟ್ಟ ಪ್ರಜ್ಞಾನಂ ಬ್ರಹ್ಮ, ಅಹಂಬ್ರಹ್ಮಾಸ್ಮಿ, ತತ್ವಮಸಿ, ಅಯಮಾತ್ಮಾಬ್ರಹ್ಮ ವೆಂಬ ಸಿದ್ಧಾರ್ಥಬೋಧಕಮಾದ ನಾಲ್ಕು ವಾಕ್ಯಂಗಳು. ಅದರೊಳಗೆ ಮುಖ್ಯಮಾದ ತತ್ವಮಸಿ ಎಂಬ ಮಹಾವಾಕ್ಯಕ್ಕೆ ತತ್, ತ್ವಂ, ಅಸಿಯೆಂಬ ಪದತ್ರಯಂಗಳು. ಅವಕ್ಕೆ ಶಿವ, ಜೀವ, ತದುಭಯೈಕ್ಯವೆಂಬವೆ ಕ್ರಮದಿಂದರ್ಥತ್ರಯಂಗಳಕ್ಕುಂ. ೧೩೭

### ವಾಕ್ಯಾರ್ಥ ಸಂಬಂಧತ್ರಯ :

ಬಳಿಕ ಪದ, ಪದಾರ್ಥ, ವಾಕ್ಯಾರ್ಥಂಗಳಿಗೆ ಸಮಾನಾಧಿಕರಣಸಂಬಂಧ, ವಿಶೇಷಣ-ವಿಶೇಷ್ಯಸಂಬಂಧ, ಲಕ್ಷ್ಯ-ಲಕ್ಷಣ ಸಂಬಂಧವೆಂಬವೆ ಕ್ರಮದಿಂ ಸಂಬಂಧತ್ರಯಂಗಳಕ್ಕುಂ. ೧೩೮

### ತತ್ತ್ವಂಪದ ವಾಚ್ಯಾರ್ಥ :

ಬಳಿಕಾ ಪದಾರ್ಥಂಗಳಿಗೆ ವಾಚ್ಯಾರ್ಥ ಲಕ್ಷ್ಯಾರ್ಥವೆಂದು ಅರ್ಥದ್ವಯಂ ಗಳವರಲ್ಲಿ, ಪೂರ್ವೋಕ್ತ ಸ್ಥೂಲಾದಿ ತನುತ್ರಯ ಸಮಷ್ಟಿರೂಪರಾದ ವಿರಾಟ್ಪುರುಷ ಹಿರಣ್ಯಗರ್ಭ, ಈಶ್ವರರುಗಳನು, ಬ್ರಹ್ಮವನು ಕೂಡಿ, ತಪ್ತಾಯ ಪಿಂಡದಂತೆ ಏಕಾ ಕಾರಮಾಗಿ ಕಾಣ್ಬುದೇ ತತ್ ಪದಕ್ಕೆ ವಾಚ್ಯಾರ್ಥವೆಂದು, ಮುಖ್ಯಾರ್ಥವೆಂದು ಅಭಿಧಾನಾರ್ಥವೆಂದೆನಿಸೂದು. ಬಳಿಕಾ ತನುತ್ರಯವ್ಯಷ್ಟಿರೂಪರಾದ ವಿಶ್ವ, ತೈಜಸ ಪ್ರಾಜ್ಞರುಗಳನು ಪ್ರತ್ಯಗಾತ್ಮನನುಕೂಡಿ ತಪ್ತಾಯ ಪಿಂಡದಂತೆ ಒಂದೆಂದು ಕಂಡಲ್ಲಿ ತ್ವಂ ಪದಕ್ಕೆ ವಾಚ್ಯಾರ್ಥವೆಂದು, ಮುಖ್ಯಾರ್ಥವೆಂದು, ಅಭಿಧಾನಾರ್ಥ ವೆಂದೆನಿಸೂದು. ೧೩೯

### ತತ್ತ್ವಂಪದ ಲಕ್ಷ್ಯಾರ್ಥ :

ಬಳಿಕ ವಿರಾಟ್ಪುರುಷಾದಿಗಳಂ ಬೇರ್ಪಡಿಸಿದ ನಿರುಪಾಧಿಕ ಬ್ರಹ್ಮವೇ ತತ್ ಪದಕ್ಕೆ ಲಕ್ಷ್ಯಾರ್ಥವೆಂದು ಶೋಧಿತ ತತ್ ಪದಾರ್ಥವೆಂದೆನಿಸೂದು.

ಮತ್ತಮಾ ವಿಶ್ವಾದಿಗಳಂ ಪೃಥಕ್ಕರಿಸಿದ ನಿರುಪಾಧಿಕ ಪ್ರತ್ಯಗಾತ್ಮನೇ ತ್ವಂ ಪದಕ್ಕೆ ಲಕ್ಷ್ಯಾರ್ಥವೆಂದು ಶೋಧಿತ ತ್ವಂ ಪದಾರ್ಥವೆಂದೆನಿಸುತ್ತಿರ್ಕುಂ. ೧೪೦

### ಲಕ್ಷಣಾ ಭೇದ :

ಬಳಿಕ ಲಕ್ಷಣಂ ಜಹಲ್ಲಕ್ಷಣೆ, ಅಜಹಲ್ಲಕ್ಷಣೆ, ಜಹದಜಹಲ್ಲಕ್ಷಣೆಯೆಂದು ತ್ರಿವಿಧಮಾಗಿರ್ಪುದವಕ್ಕೆ : "ಗಂಗಾಯಾಂ ಘೋಷಃ ಪ್ರತಿವಸತಿ" "ಕುಂತಾಃ ಪ್ರವಿಶಂತಿ," "ಸೋಯಂ ದೇವದತ್ತಃ" ಎಂಬವೆ ಕ್ರಮದಿಂದುದಾಹರಣತ್ರಯಂಗ ಳವರಲ್ಲಿ. ೧೪೧

### ಜಹಲ್ಲಕ್ಷಣೆ :

ಗಂಗಾ ಶಬ್ದವೇ ಪ್ರವಾಹ ರೂಪಮಾದ ತನ್ನ ಮುಖ್ಯಾರ್ಥವಂ, ಘೋಷ ವೆಂಬ ಗೊಲ್ಲವಳ್ಳಿಗಾಶ್ರಯತ್ವಂ ಘಟಿಸದಾಗಿ ಬಿಟ್ಟು ತೀರವಂ ಲಕ್ಷಿಸುತ್ತಿಹುದು. ೧೪೨

ಅಜಹಲ್ಲಕ್ಷಣೆ :

ಬಳಿಕ ಕುಂತಶಬ್ದವೇ ತನ್ನ ಮುಖ್ಯಾರ್ಥವಂ ಬಿಡದೆ, ಕುಂತಧಾರಿಗಳಾದ ಪುರುಷರಂ ಲಕ್ಷಿಸುತ್ತಿಹುದು. ೧೪೩

ಜಹದಜಹಲ್ಲಕ್ಷಣೆ :

ಬಳಿಕ ಸಃ ಎಂಬ ಶಬ್ದವೇ ಭೂತಕಾಲ, ದೇಶ, ವಯೋವಿಶಿಷ್ಟನಾದ ದೇವದತ್ತನಂ ಪೇಳ್ವುದು. ಅಯಂ ಎಂಬ ಶಬ್ದವೇ ವರ್ತಮಾನಕಾಲ, ದೇಶ, ವಯೋವಿಶಿಷ್ಟನಾದ ದೇವದತ್ತನಂ ಪೇಳ್ವುದು, ಇಂತುಭಯ ವಿರುದ್ಧಧರ್ಮಮುಳ್ಳ ಪದಾರ್ಥಂಗಳಿಗೈಕ್ಯತೆ ಘಟಿಸದಿರೆ, ಬಳಿಕಲಾ ಉಭಯ ಪದಾರ್ಥಗತ ವಿರುದ್ಧ ಧರ್ಮಾಂಶವಂ ಬಿಟ್ಟು, ಅವಿರುದ್ಧ ಧರ್ಮಾಂಶಮಾದ ದೇವದತ್ತ ಮಾತ್ರವನೆ ಸ್ವೀಕರಿಸೆ, ಬಳಿಕಾತನೇ ಈತನು, ಈತನೇ ಆತನೆಂದಿಂತು ತಾದಾತ್ಮ್ಯಂ ಘಟಿಸುಗುಮಿದೇ ಜಹದಜಹಲ್ಲಕ್ಷಣೆಯೆಂದು, ಅರ್ಥಲಕ್ಷಣೆಯೆಂದು, ಭಾಗತ್ಯಾಗ ಲಕ್ಷಣೆಯೆಂದು ಪರ್ಯಾಯ ನಾಮಂಗಳುಳ್ಳುದಾಗಿಹುದಾಗಿ, ತತ್ವಮಸಿಯೆಂಬ ವಾಕ್ಯದಲ್ಲಿ ಉದಾಹರಣಮಾಗಿ ಇದೊಂದು ಪೇಳಲು ಯೋಗ್ಯವದೆಂತೆನೆ. ೧೪೪

ತತ್ವಮಸ್ಯಾರ್ಥ :

ತತ್ ಎಂಬ ಪದವೇ ವಾಚ್ಯಾರ್ಥಮಾದ ಸರ್ವಜ್ಞತ್ವಾದಿ ಸದ್ಗುಣವಿಶಿಷ್ಟನಪ್ಪ ಅಪರೋಕ್ಷನಾದ ಶಿವನಂ ಪೇಳ್ವುದು. ತ್ವಂ ಎಂಬ ಪದವೇ ವಾಚ್ಯಾರ್ಥಮಾದ ಕಿಂಚಿಜ್ಞತ್ವಾದಿ ಹೀನಗುಣ ವಿಶಿಷ್ಟನಪ್ಪ ಅಪರೋಕ್ಷನಾದ ಜೀವನಂ ಪೇಳ್ವುದು. ಇಂತುಭಯ ವಿರುದ್ಧ ಧರ್ಮಮುಳ್ಳ ಪದಾರ್ಥಂಗಳಿಗೆ ಏಕತ್ವಂ ಘಟಿಸದಾಗಿ, ಬಳಿಕಾ ಉಭಯ ಪದಾರ್ಥಗತ ಪರೋಕ್ಷತ್ವಾಪರೋಕ್ಷತ್ವಾದಿ ವಿರುದ್ಧ ಧರ್ಮಾಂಶವಂ ಬಿಟ್ಟು, ಅವಿರುದ್ಧಮಾದ ಚೈತನ್ಯಮಾತ್ರಮಪ್ಪ ಲಕ್ಷ್ಯಾರ್ಥಮಾದ ಬ್ರಹ್ಮಕೂಟಸ್ಥರಂ ಸ್ವೀಕರಿಸಿ, ಅದೇ ಇದು, ಇದೇ ಅದು, ಎಂದಿಂತು ತಾದಾತ್ಮ್ಯಂ ಘಟಿಸುತ್ತಿಹುದು. ೧೪೫

ಬಳಿಕ ಅಸಿ ಎಂಬ ಪದವೇ ಉಭಯ ಲಕ್ಷ್ಯಾರ್ಥಂಗಳಲ್ಲಿಯ ಪರೋಕ್ಷತ್ವ ಅ ಪರೋಕ್ಷತ್ವಾದಿಗಳನವಿದ್ಯಾಕಲ್ಪಿತ ಮತವೆಂದು ಬೋಧಿಸುತ್ತಂ ಸಫಲವಹುದಿಂತಾಗಲಾತ್ಮರಿಗಖಂಡೈಕರಸ ಬೋಧ ಮಾತ್ರವೇ ಸಿದ್ಧವೆಂಬುದುವಾಕ್ಯಾರ್ಥಮಕ್ಕುಂ. ೧೪೬

ಬಳಿಕೀ ತತ್ವಮಸಿಯೆಂಬ ಮಹಾವಾಕ್ಯದಲ್ಲಿ, ಪ್ರತ್ಯಗಾತ್ಮ ಪರಾತ್ಮರಿಗೆ ಏಕತ್ವಮೆಂಬುದಾದೊಡೆ ಘಟಾದ್ಯುಪಾಧಿಯಂ ನೀಗಿಳೆದಾಕಾಶವೊಂದೇಯೆಂಬಂತೆ, ರಾಮಚಂದ್ರನ ಮನುಜತ್ವವಂ ಬಿಡಿಸಿ ನೀನೇ ವಿಷ್ಣುವೆಂಬಂತೆ, ಕರ್ಣನ ವ್ಯಾಧ

ಭಾವವಮಂ ಬಿಡಿಸಿ ನೀನೇ ಕುಂತೀ ಪುತ್ರನೆಂಬಂತೆ, ದಶಮಪುರುಷನ ಮರಣ ದುಃಖವಮಂ ಬಿಡಿಸಿ ನೀನೇ ದಶಮನೆಂಬಂತೆ ಸ್ವಭಾವ ಸಿದ್ಧವು, ಅಲ್ಲದೆ. ೧೪೭

## ವಾಕ್ಯಾರ್ಥ ಪ್ರತಿಪತ್ತಿ ನಿರಾಕರಣೆ :

ಬಳಿಕೊಂದು ಪೂವಿಗೆ ಸ್ವರ್ಗವೆಂಬ ವಾಕ್ಯದಂತೆ ಮೋಕ್ಷದೊಳಾಪೇಕ್ಷೆಯಂ ಪುಟ್ಟಿಸುವರ್ಥವಾದವೆಂದು, ಪ್ರತಿಮೆಯುಂ ದೇವತಾಕೃತಿಯೆಂಬ ವಾಕ್ಯದಂತೆ ಉಪಾಸನಾ ಪರವೆಂದು, ಮನುಜನಂ ದೇವೇಂದ್ರನೆಂಬ ವಾಕ್ಯದಂತೆ ಸ್ತುತಿಪರ ವೆಂದು, ಆಳನರಸನೆಂಬ ವಾಕ್ಯದಂತೆ ಔಪಚಾರಿಕವೆಂದು, ಅಗ್ನಿಮಾರ್ಣವಕನೆಂಬ ವಾಕ್ಯದಂತೆ ಗುಣಸಾದೃಶ್ಯವೆಂದು, ಇದು ಗೋವಿನ ದೇಹವೆಂಬ ವಾಕ್ಯದಂತೆ ಜಾತಿ ವ್ಯಕ್ತಪರವೆಂದು, ಘಟವ್ಯೃತ್ತಿಕೆಗನನ್ಯವೆಂಬ ವಾಕ್ಯದಂತೆ ಕಾರ್ಯ ಕಾರಣವೆಂದು, ನೀಲೋತ್ಪಲವೆಂಬ ವಾಕ್ಯದಂತೆ ಗುಣಗುಣಿತ್ವವೆಂದು, ಕ್ಷೀರ ದಧಿಗಳಿಗಭೇದವೆಂಬ ವಾಕ್ಯದಂತೆ ವಿಕಾರವೆಂದು, ವಾರಿ ಕಣಂಗಳಿಗೇಕವೆಂಬ ವಾಕ್ಯದಂತೆ ಅಂಶಾಂಶಿಕವೆಂದು, ಬಿಂಬ ಪ್ರತಿಬಿಂಬಗಳಿಗೈಕ್ಯವೆಂಬ ವಾಕ್ಯದಂತೆ ಬಿಂಬ ಪ್ರತಿಬಿಂಬವಾದವೆಂದು ಬಹು ವಿಧದಿಂದೆ ಇಂತು ಭೇದಪರವಾಗಿ ವಿಕಲ್ಪಿಸಿ ಪೇಳೆ ಶ್ರುತಿ ವಿರೋಧಮಕ್ಕುಂ ೧೪೮

## ಮಿಥ್ಯೆಯರಿತರೆ ಸತ್ಯಸಿದ್ಧಿ :

ಬಳಿಕ ಸಕಲ ಪ್ರಪಂಚಕ್ಕೆ ಮಿಥ್ಯಾತ್ವವಮಂ ಪೇಳ್ವ ವೇದಾಂತ ಪಕ್ಷದಲ್ಲಿ ಶ್ರುತಿ ವಿಚಾರದಿಂದೆಂತು, ಸತ್ಯವಾದ ಮುಕ್ತಿ ಘಟಿಪುದೆಂದೊಡೆ : ಭ್ರಾಂತಿಯಾದ ಸ್ವಪ್ನ ದಲ್ಲಿ ವನಿತಾ ಸಂಭೋಗಾದಿಕದಿಂ ಸತ್ಯಮಪ್ಪ ವೀರ್ಯಪತನಾದಿಕವಮಂ, ಕಲ್ಪಿತ ಶಿಲಾಭೈರವಾದಿ ದೇವತಾ ಭಜನೆಯಿಂ ತಥ್ಯಮಾದ ಸಂಪದಾದಿ ಸಿದ್ಧಿಗಳುಂ, ಯಥಾ ರ್ಥವಲ್ಲದ ದರ್ಪಣ ಪ್ರತಿಬಿಂಬಾದಿಗಳಿಂ ಸತ್ಯಮಾದ ಮುಖಲಾವಣ್ಯಾದಿಗಳುಂ, ದೃಷ್ಟಮಪ್ಪಂತೆ, ಪ್ರಸಮಾತ್ಮಕ ಶ್ರುತಿವಿಚಾರದಿಂ ಪರಮಾರ್ಥಮಾದ ಮುಕ್ತಿ ಸಿದ್ಧಿಯಕ್ಕುಂ. ೧೪೯

## ಮುಕ್ತಿಗೆ ವಿಘ್ನತ್ರಯ :

ಬಳಿಕ ಅಜ್ಞಾನ, ಸಂಶಯ, ವಿಪರೀತವೆಂಬವೆ ಮುಕ್ತಿಗೆ ವಿಘ್ನತ್ರಯಂ ಗಳವರಲ್ಲಿ : ನಾನು ಬ್ರಹ್ಮವಲ್ಲವೆಂಬುದೇ ಅಜ್ಞಾನವೆನಿಸೂದು. ನಾನು ಬ್ರಹ್ಮವ ಹುದೋ ಅಲ್ಲವೋ ಎಂಬುದೇ ಸಂಶಯವೆನಿಸೂದು. ಶೃತಿಯುಕ್ತಿಗಳಿಂ ನಾನು ಬ್ರಹ್ಮವಹುದಾದೊಡಂ ಮುನ್ನಿನ ಜೀವಭಾವವೆನಗಿದೆ ಎಂಬುದೇ ವಿಪರೀತವಕ್ಕುಂ. ೧೫೦

## ವಿರೋಧಿತ್ರಯ ಪರಿಹಾರ :

ಬಳಿಕ ಶ್ರವಣ, ಮನನ, ನಿಧಿಧ್ಯಾಸವೆಂಬವೇ ಕ್ರಮದಿಂ ಅಜ್ಞಾನಾದಿಗಳಿಗೆ ವಿರೋಧಿತ್ರಯಂಗಳವರಲ್ಲಿ: ಶ್ರುತಿವಿಚಾರದಿಂ ಸೂತಕಾದಿಗಳಲ್ಲಿ ದೃಢಬುದ್ಧಿಯುಪ್ಪು ದೆಂತಂತೆ ಪ್ರತ್ಯಗಾತ್ಮ ಬ್ರಹ್ಮರಿಗೈಕ್ಯವೆಂಬುಪನಿಷದ್ವಾಕ್ಯ ತಾತ್ಪರ್ಯವನವಧರಿಸೂದೆ ಶ್ರವಣವೆನಿಸೂದು. ಆ ಶ್ರುತ್ಯರ್ಥವನೆ ಯುಕ್ತಿಯಿಂ ಚಿಂತನಗೈಯ್ವುದೇ ಮನನವೆನಿ ಸೂದು. ಆ ಶ್ರವಣ ಮನನಂಗಳಿಂ ನಿಶ್ಚಿತವಾದ ಅರ್ಥದಲ್ಲಿ ಚಿತ್ತನಿಶ್ಚಲಮಾಗಿ ಹುಜೇ ನಿಧಿಧ್ಯಾಸವಮುಕ್ಕುಂ. ೧೫೧

## ಸಹಕಾರಿ ಕಾರಣ :

ಬಳಿಕಿಲ್ಲಿ ಶ್ರವಣದಿಂದುತ್ಪನ್ನವಾದ ಜ್ಞಾನದಿಂದಾತ್ಮಸಾಕ್ಷಾತ್ಕಾರವಾಗಿಪ್ಪು ದಾಗಿ ಶ್ರವಣವೇ ಮುಖ್ಯವಪ್ಪುದರಿಂದಂಗಿಯೆನಿಸೂದು. ಮನನ, ನಿಧಿಧ್ಯಾಸನಂಗಳ ವಕ್ಕೆ ಸಹಕಾರಿಗಳಪ್ಪುದರಿಂ ಮುಖ್ಯವಲ್ಲಾಗಿ ಅಂಗಂಗಳಕ್ಕುಂ, ಅಂದೆಂತೆನೆ : ಅರ್ಥ ಪ್ರಕಾಶವಾದ ದೀಪದ ಚಂಚಲಾವಸ್ಥೆಯಲ್ಲಿ ಕಾರ್ಯಸಮರ್ಥವಿಲ್ಲಾಗಿ, ಬಳಿಕ ವಾಯುಸಂಚಾರಕ್ಕೆ ಮರೆಗಟ್ಟುವ ತೆರೆಯಂತೆ ಮನನವದರ ಬತ್ತಿಯನೆ ನೆರೆ ನೂಂಕಿ ಪ್ರಜ್ವಲಂ ಮಾಡುವಂತೆ ನಿಧಿಧ್ಯಾಸನವಮುಕ್ಕುಂ. ೧೫೨

## ಶ್ರುತಿ ತಾತ್ಪರ್ಯ ನಿರ್ಣಯಲಿಂಗ :

ಬಳಿಕ ಉಪಕ್ರಮೋಪಸಂಹಾರ, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ ಉಪಪತ್ತಿಯೆಂಬವೆ ಶ್ರವಣಕ್ಕೆ ಷಡ್ವಿಧಲಿಂಗ ತಾತ್ಪರ್ಯಂಗಳವರಲ್ಲಿ : ಸೃಷ್ಟಿಗಿಂ ಮೊದಲೀ ಜಗತ್ತು ಸದ್ರೂಪ ಬ್ರಹ್ಮವೇ ಆಗಿತ್ತೆಂದು, ಮತ್ತಾ ಬ್ರಹ್ಮಕ್ಕೆ ಸ್ವಗತಾದಿ ಭೇದತ್ರಯಮಂ ನಿವಾರಿಸುತ್ತ ಖಂಡೈಕರಸವಂ ಪೇಳ್ವುದೇ ಉಪಕ್ರಮವೆನಿಸೂದು. ಬಳಿಕ ನಾಮರೂಪಾತ್ಮಕ ಜಗತ್ತಿಗಾ ಬ್ರಹ್ಮದಲ್ಲಿ ಲಯಮಂ ಮಾಡಿ ಪ್ರತ್ಯಗಾತ್ಮಂಗಾ ಬ್ರಹ್ಮದೊಡನೇಕತ್ವಮಂ ಬೋಧಿಸುತಾ ಬ್ರಹ್ಮಮದ್ವಿತೀಯಮೆಂದು ಪೇಳ್ವುದೇ ಉಪಸಂಹಾರವೆನಿಸೂದು. ಈ ಉಪಕ್ರಮೋಪಸಂಹಾರವೆಂಬೆರಡು ಕೂಡಿ ಒಂದು ಲಿಂಗಮುಕ್ಕುಂ.

ಮತ್ತಂ ಪ್ರತ್ಯಗಾತ್ಮನೆ ಬ್ರಹ್ಮವೆಂದು ಮರಳಿ ಮರಳಿ ಪೇಳ್ವುದೇ ಅಭ್ಯಾಸ ವೆನಿಸೂದು.

ಮತ್ತಂ ಪ್ರತ್ಯಗಾತ್ಮಂಗೆ ಪ್ರತ್ಯಕ್ಷಾದಿ ಪ್ರಮಾಣಾತೀತತ್ವವಂ ಪೇಳ್ವುದೇ ಅಪೂರ್ವ ತೆಯೆನಿಸೂದು.

ಮತ್ತವಾತ್ಮನೋರ್ವನರಿಯಲ್ಪಡಲಾಗಿ, ಸರ್ವವೂ ಅರಿಯಲ್ಪಟ್ಟಿತ್ತೆಂದು ಪೇಳ್ವುದೇ ಫಲವೆನಿಸೂದು.

ಮತ್ತಮಾ ಪ್ರತ್ಯಗಾತ್ಮರೂಪ ನಿರ್ವಿಕಾರ ಬ್ರಹ್ಮಕ್ಕೆ "ಸ್ಥಿತಸ್ಯಗತಿಶ್ಚಿಂತನೀಯಾ" ವೆಂಬ ನ್ಯಾಯಮುಂಟಾಗಿ ಜಗತ್ತಿನ ಸೃಷ್ಟ್ಯಾದ್ಯನುಪ್ರವೇಶಾಂತಮಾದ ಪಂಚ ಕೃತ್ಯ, ಕರ್ತೃತ್ವಮಂ ಪೇಳ್ವುದೇ ಭೂತಾರ್ಥವಾದವೆನಿಸೂದು.
ಮತ್ತಂ ಘಟಕ್ಕೆ ಮೃತ್ತಿಕೆ, ತಂತುವಿಂಗೂರ್ಣನಾಭಿಯು ನಿಮಿತ್ತವೆಂಬಂತೆ, ಬ್ರಹ್ಮವೆ ಜಗತ್ಕಾರಣವೆಂದು ಪೇಳ್ವುದೇ ದೃಷ್ಟಾಂತ (ಉಪಪತ್ತಿ) ಮಕ್ಕುಂ. ೧೫೩

## ಮನನ ಸಾಮಗ್ರಿ :

ಬಳಿಕ ಯುಕ್ತಿ, ತರ್ಕ, ಅನುಮಾನಂಗಳೇ ಮನನ ಸಹಾಯಗಳವರಲ್ಲಿ : ಆತ್ಮರುಗಳನೇಕರಾಗಿ ವ್ಯಾಪಕರೆಂಬ ಸಂಖ್ಯಾದಿ ಮತದೊಳಾ ಸಮಸ್ತಾತ್ಮರ್ಗೆಯುಂ ಪ್ರತ್ಯೇಕ ಶರೀರಂಗಳಲ್ಲಿ ಸಂಬಂಧಮುಂಟಪ್ಪುದರಿಂದೀತಂಗೆಯೇ ಈ ಶರೀರಂ ಭೋಗ ಸಾಧನವನ್ಯರ್ಗಾಗದೆಂದು, ಭೋಗಸ್ಥಿತಿಯಂ ಪೇಳ್ವುದೇ ಘಟಿಸದು. ಬಳಿಕ್ಷೇತ್ರ ಲಾನುಮಿತನ ಸುಕೃತಾದಿಕದಿಂ ಗಳಿಸಲ್ಪಟ್ಟುದಾಗಿ, ಈ ಶರೀರವೀತಂಗೆಯೇ ಅನ್ಯ ರ್ಗಲ್ಲ ಎಂದೊಡೆ ಆ ಸುಕೃತಾದಿಕಮುಂ ಸರ್ವರಿಗೂ ಇಲ್ಲವೆಯೇನು ? ಬಳಿಕೀತನ ಪೂರ್ವದೇಹಾಭಿಮಾನದಿಂ ಮಾಡಲ್ಪಟ್ಟ ಸುಕೃತಾದಿಕಮಿತನದೇ ಎಂದೊಡೆ, ಆ ಅಭಿಮಾನಮುಂ ಪೂರ್ವದೇಹದಲ್ಲಿರ್ದ ಅನೇಕಾತ್ಮರ್ಗೆಯುಂ ಇಲ್ಲವೆಯೇನು ? ಬಳಿ ಕೆಂತು ಸರ್ವಸಾಂಕರ್ಯಮಾದ ಅನವಸ್ಥಾ ದೂಷಣಮಂ ನಿವಾರಿಸಲಶಕ್ಯವದೆಂತೆನೆ: ಸರ್ವಾತ್ಮರನಾದಿಯಪ್ಪರಾಗಿ ಬಳಿಕೇಕಾತ್ಮಪಕ್ಷದಲ್ಲಿ ಭೋಗವ್ಯವಸ್ಥೆ ಘಟಿಸದೆಂದು ನಾನಾತ್ಮಪಕ್ಷವನಾಶ್ರೈಸಿದೊಡಿಂತು ಭೋಗಸ್ಥಿತಿ ಘಟಿಸದಾಯತ್ತು. ಬಳಿಕುಭಯ ಮತದಲ್ಲಿಯೂ ಈಶಂಕೆ ಸಮಾನವೆಂದೊಡೆ ಏಕಾತ್ಮಪಕ್ಷದಲ್ಲಿ, ಬಿಂಬ ಪ್ರತಿ ಬಿಂಬ ನ್ಯಾಯದಿಂದುಪಾಧಿಗಳಾದಂತಃಕರಣದಿ ಕಂಪ ಕಾಲುಷ್ಯಾದಿ ನಾನಾತ್ವದ ದೆಶೆಯಿಂ, ವಿಚಿತ್ರ ಭೋಗಸ್ಥಿತಿ ಸುಲಭವೆಂಬುದೆ ಯುಕ್ತಿಯಕ್ಕುಂ. ೧೫೪
ಬಳಿಕ ತರ್ಕಾನುಮಾನಂಗಳ ಲಕ್ಷಣಮಾದೊಡೆ, ಹರ್ಷಮಿಶ್ರಾಚಾರ್ಯಾದಿ ಗಳಿಂ, ಖಂಡನಾದಿಗಳಲ್ಲಿ ಪ್ರಸಿದ್ಧಮಪ್ಪುದರಿಂದಿದು ಸುಖಾನುಭವ ಪ್ರಕರಣವಹು ದಾಗಿಯುಂ, ಗ್ರಂಥಬಾಹುಲ್ಯಮಪ್ಪುದೆಂಬ ಭೀತಿಯಿಂ ಪ್ರತಿಪಾದಿಸಲ್ಪಟ್ಟುದಿಲ್ಲಂ. ೧೫೫

## ನಿಧಿಧ್ಯಾಸನ ಪಂಚಯೋಗ :

ಬಳಿಕ ಮಂತ್ರಯೋಗ, ಸ್ಪರ್ಶಯೋಗ, ಭಾವಯೋಗ, ಅಭಾವಯೋಗ, ಮಹಾಯೋಗವೆಂಬವೆ ನಿಧಿಧ್ಯಾಸನರೂಪ ಯೋಗಪಂಚಕಂಗಳವರಲ್ಲಿ: ಪ್ರಣವಾದಿ ಮಂತ್ರಾನುಸಂಧಾನದಿಂ ಪರಮಾತ್ಮನಲ್ಲಿ ಮನೋಲಯಮವಹುದೇ ಮಂತ್ರಯೋಗ ವೆನಿಸೂದು. ೧೫೬

ಮತ್ತಮಾ ಮಂತ್ರಯೋಗ ಸಹಿತಮಾಗಿ ಮನಪವನಂಗಳೊಂದುಗೂಡಿ, ಮೂಲಾಧಾರದಿಂ ಸುಷುಮ್ನಾನಾಡೀ ಮಾರ್ಗದೊಳೆಯ್ದಿ, ಶಿರೋಮಧ್ಯಗತ ಪರಮಾತ್ಮತೇಜಸ್ಸಿನೊಳಾ ಮನೋಲಯವಹುದೇ ಸ್ಪರ್ಶಯೋಗವೆನಿಸೂದು. ೧೫೭

ಮತ್ತಂ ಮೊದಲು ಸ್ವರ್ಗವೇ ಮೂರ್ಧ್ನಿ, ದಿಕ್ಕೇ ಶ್ರೋತ್ರಂ, ಚಂದ್ರಾರ್ಕರೇ ನೇತ್ರ, ಅಗ್ನಿಯೇಮುಖ, ಅಂತರಿಕ್ಷವೇನಾಭಿ, ಭೂಮಿಯೇ ಪಾದಂಗಳಾದೀಶ್ವರನ ವಿರಾಡ್ರೂಪಮಂ ನೆನೆದು, ಅಲ್ಲವೆ, ಪರಿಮಿತ ಭುಜಾಸ್ತ್ರಾಭರಣಾದಿ ಸಹಿತನಾದೀಶ್ವರನ ದಿವ್ಯಮೂರ್ತಿಯಂ ಪರಿಭಾವಿಸಿ, ಬಳಿಕ್ಕದರವಯವಂಗಳೊಂದೊಂದಂ ಬಿಟ್ಟುಳಿದ ಅವಯವ ಮಾತ್ರನಾದ ಸದ್ರೂಪ ಬ್ರಹ್ಮನಲ್ಲಿ ಮನೋಲಯವಪ್ಪುದೇ ಭಾವಯೋಗವೆನಿಸೂದು. ೧೫೮

ಮತ್ತಂ ಕರಣಗೋಚರವಲ್ಲದ ಪ್ರಮಾಣಾತೀತಮಪ್ಪ ನಿರುಪಾಧಿಕ ಬ್ರಹ್ಮದಲ್ಲಿ ಮನೋಲಯವಹುದೇ ಅಭಾವಯೋಗವೆನಿಸೂದು.

ಮತ್ತಂ ಜಗದುದಯ ಲಯಂಗಳಲ್ಲಿಯುಂ ಅರಿದೆನರಿಯೆನಂಬಲ್ಲಿಯುಂ ತನಗಾವ ಹಾನಿಯುಂ ಇಲ್ಲದೊಂದೇ ಪ್ರಕಾರಮಾದ ಪ್ರತ್ಯಗಾತ್ಮರೂಪ ಬ್ರಹ್ಮದಲ್ಲಿ ಮನೋಲಯವಹುದೇ ಮಹಾಯೋಗಮಕ್ಕುಂ. ೧೫೯

## ಪ್ರತಿಬಂಧಕತ್ರಯ :

ಬಳಿಕ ಭೂತ ಪ್ರತಿಬಂಧ, ವರ್ತಮಾನ ಪ್ರತಿಬಂಧ, ಆಗಾಮಿ ಪ್ರತಿಬಂಧವೆಂಬವೆ ಆತ್ಮಸಾಕ್ಷಾತ್ಕಾರಕ್ಕೆ ವಿರೋಧಿತ್ರಯಂಗಳವರಲ್ಲಿ : ಮೋಕ್ಷಾಪೇಕ್ಷೆಯಿಂ ಸರ್ವಸಂಗ ಪರಿತ್ಯಾಗಮಂ ಮಾಡಿ ಶ್ರೀ ಗುರುವನೆಯ್ದಿ ಶ್ರವಣಾದಿಕಮಂ ಮಾಡಿದೊಡಂ, ಮೊದಲು ಗೃಹಸ್ಥಾಶ್ರಮದಲ್ಲಿ ಸ್ವೀಕರಿಸಿರ್ದ ವನಿತಾದಿ ವಸ್ತುಗಳ ರೂಪು, ಯೌವನ, ಶೃಂಗಾರಾದಿ ಸದ್ಗುಣಂಗಳನುಭವದ ಸವಿಯ ಸಂಸ್ಕಾರ ಬಲದಿಂ ಬಂದು ಬಂದು ಮನವನಳ್ಳಿರಿದು ಅಡಿಗಡಿಗೆ ಚಿಂತೆಯಂ ಪುಟ್ಟಿಸುತ್ತಾತ್ಮ ಸಾಕ್ಷಾತ್ಕಾರವನಾಗಲೀಯದಿಹುದೇ ಭೂತಪ್ರತಿಬಂಧವೆನಿಸೂದು. ಮತ್ತಂ ಜಡಬುದ್ಧಿ, ಜನಸಂಗರತಿ, ವಿಷಯಾಸಕ್ತಿ, ಕುತರ್ಕ, ಅಭಿಮಾನ, ಚಪಲತ್ವಾದಿಗಳುಂಟಾಗಿ ತತ್ವ ವಿಚಾರಂಗೆಯ್ದೊಡಂ ಆತ್ಮಸಾಕ್ಷಾತ್ಕಾರವನಾಗಲೀಯದಿಹುದೇ ವರ್ತಮಾನ ಪ್ರತಿಬಂಧವೆನಿಸೂದು. ಮತ್ತಂ ಮುಂದೆ ಕೆಲವು ಜನ್ಮಾಂತರವನಿತ್ತಲ್ಲದೆ ತೀರದಾ ಪ್ರಾರಬ್ಧ ವಿಶೇಷವೆಂಬ ಬ್ರಹ್ಮಾದಿ ಲೋಕವಾಂಛೆಯೆಂಬ ದೋಷದ್ವಯಯುಕ್ತಮಾಗಿರ್ದು ವೇದಾರ್ಥವನರಿದಿರ್ದೊಡಂ ಆತ್ಮಸಾಕ್ಷಾತ್ಕಾರವನಾಗಲೀಯದಿಹುದೇ ಆಗಾಮಿ ಪ್ರತಿಬಂಧಮಕ್ಕುಂ. ೧೬೦

## ಪ್ರತಿಬಂಧನಿವರ್ತಕ :

ಬಳಿಕಾ ಬಂಧತ್ರಯಮಂ ಜಯಿಸಲೋಸುಗವಾಗಿ ಜ್ಞಾನ, ವೈರಾಗ್ಯ, ಉಪರತಿಗಳೆಂಬ ಮುಖ್ಯಸಾಧನಂಗಳನೆ ಬಿಡದಭ್ಯಾಸಂಗೆಯ್ವುದಕ್ಕೆ ಕಾರಣ, ಸ್ವರೂಪು, ಕಾರ್ಯವೆಂಬ ಮೂರು ಲಕ್ಷಣಂಗಳಂ ಕ್ರಮದಿಂ ಬೇರೆ ಬೇರೆ ಪೇಳ್ವೆನದೆಂತೆಂದೊಡೆ : ೧೬೧

## ಜ್ಞಾನಾದಿಗಳ ಲಕ್ಷಣ :

ಜ್ಞಾನಕ್ಕೆ ಶ್ರವಣಾದಿಕವೇ ಕಾರಣವಹುದು, ಆತ್ಮಾಹಂಕಾರಂಗಳ ಅಧ್ಯಾಸೈಕ್ಯಮಂ ಬೇರ್ಪಡಿಸೂದೇ ಸ್ವರೂಪವಹುದು. ಬಳಿಕ ಅಹಂಕಾರಗತ ಸಂಸಾರ ಸಾಕ್ಷಿತ್ವವೇ ಕಾರ್ಯಮಕ್ಕುಂ. ವೈರಾಗ್ಯಕ್ಕೆ ವನಿತಾದಿ ವಿಷಯಂಗಳ ಅನಿತ್ಯತ್ವಾದಿ ದೋಷದರ್ಶನವೇ ಕಾರಣವಹುದು. ಮೇಲಾವ ಪ್ರಕಾರದಿಂದಾದೊಡವನು ಬಿಡುವುದೇ ಸ್ವರೂಪವಹುದು. ಬಳಿಕಾ ವಿಷಯಂಗಳಿಗೆರಗದಿಹುದೇ ಕಾರ್ಯಮಕ್ಕುಂ. ಬಳಿಕುಪರತಿಗೆ ಯಮನಿಯಮಾದ್ಯಷ್ಟಾಂಗ ಯೋಗನೇ ಕಾರಣವಹುದು. ಚಿತ್ತವಂತರಂಗದೊಳೇಕಾಗ್ರತೆಯಾದುದೇ ಸ್ವರೂಪವಹುದು. ಮತ್ತೆ ಬಾಹ್ಯ ಕರ್ಮಕ್ಕೆರಗದಿಹುದೇ ಕಾರ್ಯಮಕ್ಕುಂ. ೧೬೨

## ಜ್ಞಾನಾದಿಗಳಿಗವಧಿ :

ಬಳಿಕ ಇವರಲ್ಲಿ ದೇಹಾತ್ಮಭಾವವಳವಟ್ಟಂತೆ ಬ್ರಹ್ಮವೇ ತಾನೆಂಬ ದೃಢಬುದ್ಧಿಯೇ ಜ್ಞಾನಕ್ಕವಧಿ. ಬ್ರಹ್ಮಲೋಕಾದಿ ತೃಣೀಕಾರವೇ ವೈರಾಗ್ಯಕ್ಕವಧಿ, ಸುಷುಪ್ತನಂತೆ ಸಕಲಕಾರ್ಯ ವಿಸ್ಮರಣವೇ ಉಪರತಿಗವಧಿಯಕ್ಕುಂ. ೧೬೩

## ಮೋಕ್ಷ ಕಾರಣ :

ಬಳಿಕವರೊಳಗೆ ಜ್ಞಾನ, ವೈರಾಗ್ಯ, ಉಪರತಿಗಳೆಂಬ ಮೂರೂ ಸಿದ್ಧಿಸಿದೊಡೆ ಆತಂಗೆ ಅದು ಮಹಾತಪಸ್ಸಿನ ಫಲ. ಅದುಅಂತಿರ್ಕೆ. ಮತ್ತೆ ವೈರಾಗ್ಯೋಪರತಿಗಳೆಂಬೆರಡುಂ ಸಂಪೂರ್ಣಮಾಗಿರ್ದು ಜ್ಞಾನನೊಂದಿಲ್ಲದಿರ್ದೊಡೆ ಆತಂಗೆ ಮುಕ್ತಿಯೇ ಘಟಿಸದು. ಮಹಾಸುಖಸ್ಥಾನವಾದ ಊರ್ಧ್ವಲೋಕ ಪ್ರಾಪ್ತಿಯಹುದು. ಮರಳಿ ಜ್ಞಾನವೊಂದಿರ್ದು ವೈರಾಗ್ಯೋಪರತಿಗಳಿಲ್ಲದಿರಲಾತಂಗೆ, ಮರದಕೊನೆ ಮುರಿದೊಡಲ್ಲಿರುತಿರ್ಪ ಮನುಜಂಗೆ ಪತನೇಚ್ಛೆಯಿಲ್ಲದೊಡಂ ಬೀಳ್ವಂತೆ, ದೇಹಾವಸಾನದಲ್ಲಿ ಮುಕ್ತಿಯೇ ಅಹುದು. ಪ್ರಾರಬ್ಧಜನಿತದುಃಖಾನುಭವ ಮುಂಟೆಂಬುದೇ ಸತ್ಯಮಕ್ಕುಂ. ೧೬೪

ಸಪ್ತಜ್ಞಾನಭೂಮಿಕೆ ಮತ್ತು ಕ್ರಮ :

ಬಳಿಕ ಶುಭೇಚ್ಛೆ, ವಿಚಾರಣೆ, ತನುಮಾನಸಿ, ಸಂಸಕ್ತಿ, ಸತ್ವಾಪತ್ತಿ, ಪದಾರ್ಥ ಭಾವನೆ, ತುರ್ಯಗಾಮಿಯೆಂಬವೆ ಸಪ್ತಜ್ಞಾನ ಭೂಮಿಕೆಗಳವರಲ್ಲಿ : ನಾನು ಮೂಢ ನಾಗಿಹ ಕಾರಣವೇನು ? ಶ್ರುತಿ ಗುರುಗಳಿಂದರಿಯಬೇಕೆಂಬುದೇ ಶುಭೇಚ್ಛೆಯೆನಿ ಸೂದು. ಮೇಲೆ ಗುರು ಶಾಸ್ತ್ರಾದಿಗಳಿಂ ಜನಿಸಿದ ಕಿಂಚಿದ್ವೈರಾಗ್ಯಬಲದಿಂ ಸದಾಚಾರ ಪ್ರವೃತ್ತಿಯೇ ವಿಚಾರಣೆಯೆನಿಸೂದು. ಬಳಿಕ ಶುಭೇಚ್ಛೆವಿಚಾರಣೆಗಳ ಬಲದಿಂ ವಿಷಯಾಸಕ್ತಿ ಕೆಡುವುದೇ ತನುಮಾನಸಿಯೆನಿಸೂದು. ಮೇಲಾ ಭೂಮಿಕಾತ್ರಯದ ಭ್ಯಾಸ ಸಾಮರ್ಥ್ಯದಿಂ ಜಾಗ್ರತ್ಪ್ರಪಂಚವೆಲ್ಲವಂ ಕನಸೆಂದು ಕಂಡು ಆತ್ಮನ ಸನ್ಮಾತ್ರಾನುಸಂಧಾನವೇ ಸತ್ವಾಪತ್ತಿಯೆನಿಸೂದು. ೧೬೫

ಬಳಿಕ ಸಕಲ ಪ್ರಪಂಚದ ತೋರಿಕೆಯಡಗಿ ಸುಷುಪ್ತನಂತಾತ್ಮ ಚಿನ್ಮಾತ್ರಾ ವಶಿಷ್ಟತ್ವವೇ ಸಂಸಕ್ತಿಯೆನಿಸೂದು. ಬಳಿಕ ಸರ್ವವಾಸನಾ ವಿಲಯದಿಂ ಗಾಢ ನಿದ್ರಿತನಂ ತಾನಂದಾತ್ಮಲೀನತೆಯೆ ಪದಾರ್ಥಭಾವನೆಯೆನಿಸೂದು. ಮೇಲಂಟಿ ನಿಸದಿಲ್ಲೆನಿಸದೆ ಅಹಂಕೃತಿ ನಿರಹಂಕೃತಿದೋರದೆ ಕೇವಲ ಜ್ಞಪ್ತಿರೂಪವಾದದ್ವೈತ ಪದದಲ್ಲಿ ಬಯಲ ಬರುಗೊಡದಂತೊಳಹೊರಗೆ ಶೂನ್ಯವಾಗಿರ್ಪುದೇ ತುರ್ಯ ಗಾಮಿಯಕ್ಕುಂ. ೧೬೬

ಷಟ್ಸಮಾಧಿಗಳು :

ಮತ್ತಮಾ ಉಪರತಿಗಳಿಗನುಸಾರಿಗಳಾದ ದೃಶ್ಯಾನುವೇದ, ಶಬ್ದಾನುವೇದ, ನಿರ್ವಿಕಲ್ಪವೆಂಬವೇ ಬಾಹ್ಯ-ಅಭ್ಯಾಂತರ ಭೇದದಿಂ ಷಟ್ಸಮಾದಿಗಳವರಲ್ಲಿ: ಘಟಾದಿ ವಿಷಯ ಜಾತದೊಳಾವುದಾನೊಂದುವನಾದರು ಕೊರ್ತದರ ನಾಮರೂಪಂಗಳೆಂಬ ಮೂಯಾಂಶಂಗಳೆರಡನೂ ಪಿಡಿಚಿ ಮತ್ತದರೊಳು ಅಸ್ತಿ, ಭಾತಿ, ಪ್ರಿಯಂಗಳೆಂಬ ಬ್ರಹ್ಮಾಂಶತ್ರಯಂಗಳನನುಸಂಧಾಂನಗೈವುದೇ ಬಾಹ್ಯದ ದೃಶ್ಯಾನುವೇದವೆಂಬ ಸವಿಕಲ್ಪ ಸಮಾಧಿಯೆನಿಸೂದು. ಮತ್ತಮುಖಂಡ ಸಚ್ಚಿದಾನಂದಾದ್ವಿತೀಯ ಸ್ವರೂಪವಾದುದೇ ಬ್ರಹ್ಮವೆಂದು ಧ್ಯಾನಿಸುತ್ತಿಪ್ಪುದೇ ಬಾಹ್ಯದ ಶಬ್ದಾನುವೇದ ವೆಂಬ ಸವಿಕಲ್ಪಸಮಾದಿಯೆನಿಸೂದು. ಮೇಲೆ ಆ ಸಮಾಧಿದ್ವಯದಭ್ಯಾಸ ಬಲ ದಿಂದಾದ ಬ್ರಹ್ಮಾನಂದಾಸ್ವಾದನದಲ್ಲಿಯೇ ಮನೋಮಗ್ನವಾಗಿ ನಿಸ್ತರಂಗ ಸಮುದ್ರ ದಂತೆ ನಿಶ್ಚಲಾತ್ಮಕವಾಗಿಪ್ಪುದೇ ಬಾಹ್ಯದ ನಿರ್ವಿಕಲ್ಪ ಸಮಾಧಿಯಕ್ಕುಂ. ೧೬೭

ಬಳಿಕ ಮನೋಗತ ಕಾಮಸಂಕಲ್ಪಾದಿಗಳೇ ದೃಶ್ಯಂಗಳು, ತಾನವಕ್ಕೆ ಸಾಕ್ಷಿಕ ನೆಂಬನುಸಂಧಾನವೇ ಅಭ್ಯಂತರದ ದೃಶ್ಯಾನುವೇದವೆಂಬ ಸವಿಕಲ್ಪ ಸಮಾಧಿಯೆನಿ ಸೂದು. ಮತ್ತಮಸಂಗ ಸಚ್ಚಿದಾನಂದ ಸ್ವಪ್ರಕಾಶಾದ್ವಯ ಸ್ವರೂಪವೇ ತಾನೆಂದು ಚಿಂತನಗೆಯ್ವುದೇ ಅಭ್ಯಂತರದ ಶಬ್ದಾನುವೇದವೆಂಬಸವಿಕಲ್ಪಸಮಾಧಿಯೆನಿಸೂದು.

ಮತ್ತಮಾ ಸ್ವಾನುಭೂತಿ ರಸಾವೇಶದಿಂದಾ ದೃಶ್ಯ ಶಬ್ದಂಗಳೆರಡನುಳಿದು ನಿವಾತ ಸ್ಥಿತ ದೀಪದಂತೆ ನಿಸ್ಪಂದರೂಪಮಾಗಿಹುದೇ ಅಭ್ಯಂತರದ ನಿರ್ವಿಕಲ್ಪಸಮಾಧಿ ಯೆನಿಸೂದು. ಈ ಆರು ಸಮಾಧಿಗಳಿಂದವೆ ಕಾಲಮಂ ಕಳೆವುತ್ತಿರ್ಪ ಯೋಗೀಶ್ವ ರಂಗೆ ಮನವೆಲ್ಲೆಲ್ಲಿ ಸಂಚರಿಸಿದೊಡೆ ಅಲ್ಲಲ್ಲಿಯೇ ಸಮಾಧಿಯುಕ್ಕುಂ. ೧೬೮

## ಜ್ಞಾನಫಲ ಚತುಷ್ಟಯ :

ಬಳಿಕ ದುಃಖಾಭಾವ, ಸರ್ವಕಾಮಾಪ್ತಿ, ಕೃತಕೃತ್ಯತ್ವ, ಪ್ರಾಪ್ಯಪ್ರಾಪ್ತಿತ ಗಳೆಂಬವೆ ಜ್ಞಾನಫಲ ಚತುರ್ವಿಧಂಗಳವರಲ್ಲಿ : ದುಃಖಾಭಾವವೆಂಬುದಿಹ ಪರ ಲೋಕ ಭೇದದಿಂದಿತ್ತೆರನಾಗಿಹುದವರೊಳಗೆ ಸ್ಥೂಲ ಶರೀರದಲ್ಲಿ ಕುರೂಪತ್ವ, ದುರ್ಗಂಧತ್ವ, ವ್ಯಾಧ್ಯಾದಿಗಳುಂ; ಸೂಕ್ಷ್ಮ ತನುವಿನಲ್ಲಿ ತೋರುವ ಕಾಮಕ್ರೋಧಾದಿ ಗಳುಂ ಕಾರಣ ದೇಹದಲ್ಲಿ ಆದಿ ವ್ಯಾಧಿಗಳಿಗೆ ಬೀಜ ಭೂತಮಾದ ಸಂಸ್ಕಾರಂಗಳು ವೆಂಬ ತ್ರಿವಿಧ ಸಂತಾಪವೇ ಇಹಲೋಕ ದುಃಖವಹುದಲ್ಲಿ ಮಿಥ್ಯಾತ್ಮಕ ಮಾಯಾ ಕಾರ್ಯಮಾದ ಶರೀರಾದಿಗಳತ್ತಣಿಂ ಬೇರ್ಪಡಿಸಲ್ಪಟ್ಟ ಅದ್ವಿತೀಯನಾದ ಪ್ರತ್ಯಗಾತ್ಮ ಜ್ಞಾನದಿಂ, ಮೇಲೆ ಪರಮಾರ್ಥಮಾದ ಭೋಗ ಭೋಕ್ತೃಗಳಿಲ್ಲಾಗಿ ಜ್ಞಾನಿಗಾ ದುಃಖತ್ರಯ ಸಂಬಂಧವಿಲ್ಲದಿರಲದೇ ಇಹಲೋಕ ದುಃಖಾಭಾವವೆನಿಸೂದು. ಬಳಿಕ ಪುಣ್ಯಮೆಂತು ಬರ್ಪುದೋ, ಪಾಪಮೆಂತು ಪೋಪುದೋ ಎಂಬ ಚಿಂತೆಯೇ ಪರಲೋಕ ದುಃಖವಹುದು ಅಲ್ಲಿ ಸಮ್ಯಜ್ಞಾನಾಂತರದಲ್ಲಿ ಕಮಲ ಪತ್ರೋದಕದಂತೆ ಜ್ಞಾನಿಗಾ ಕರ್ಮದ್ವಯ ಲೇಪವಿಲ್ಲಾಗಿಯುಂ, ಕಾಷ್ಠದಲ್ಲಿ ವಹ್ನಿ ಇಹುದಾವಹ್ನಿಯುಲ್ಲಿ ಕಾಷ್ಠ ವಿಲ್ಲದಂತೆ ಕರ್ಮದ್ವಯ ವ್ಯವಹಾರದಲ್ಲಿ ವಿವೇಕಿಯಿರ್ಪನು. ಅವನೊಳಾ ವ್ಯವಹಾರ ವಿಲ್ಲಾಗಿಯುಂ, ದಾವವಡಸಿದ ನಗವನಾವ ಮೃಗ ಪಕ್ಷಿಗಳು ಪುಗದಂತೆ, ಜ್ಞಾನಾಗ್ನಿ ಮಯನಂ ಸುಕೃತಾದಿಗಳ್ಪೊಂಕಲಮ್ಮವಾಗಿಯುಂ, ಅದರಿಂದಾ ಚಿಂತೆದೋರ ದಿಹುದೇ ಪರಲೋಕ ದುಃಖಾಭಾವಮುಕ್ಕುಂ. ೧೬೯

## ಕಾಮಾಪ್ತಿ :

ಮತ್ತಂ ಸರ್ವೈಶ್ವರ್ಯ ಸಂಪನ್ನನಾದ ಸಾರ್ವಭೌಮಾದಿ ಹಿರಣ್ಯ ಗರ್ಭಾಂತ ಮಾದುತ್ತರೋತ್ತರಮಾಗಿ ಬಯಸಲ್ತಕ್ಕ ಶತಗುಣೋತ್ತರಾನಂದಂಗಳೆಲ್ಲಂ ನಿಸ್ಪೃಹ ನಾದ ವಿವೇಕಿಗುಂಟಾಗಿಯುಂ, ಬಳಿಕಾನಂದಂಗಳೆಲ್ಲಂ ಜ್ಞಾನದಿಂದರಿಯಲ್ಪಟ್ಟ ಬ್ರಹ್ಮಾಂಶಂಗಳಪ್ಪುದರಿಂದಾಶಂಗಖಂಡಾನಂದ ಸಿದ್ಧಿಸಿತ್ತಾಗಿಯುಮದೇ ಸರ್ವ ಕಾಮಾಪ್ತಿಯೆನಿಸೂದು.

## ಕೃತ ಕೃತ್ಯತ್ವ :

ಮತ್ತಮಾ ವಿವೇಕಿಗೆ ತತ್ವಜ್ಞಾನಕ್ಕಿಂ ಮೊದಲೇ ಇಹಲೋಕ ಸಂಬಂಧಮಾದ ಇಷ್ಟಪ್ರಾಪ್ತಿ, ಅನಿಷ್ಟ ನಿವೃತ್ತಿಗೋಸುಗ ಕೃಷಿವಾಣಿಜ್ಯಾದಿಕಮುಂ, ಸ್ವರ್ಗಾದಿ

ಸಿದ್ಧಿಗೋಸುಗ ಯೋಗೋಪಾಸನಾದಿಕವುಂ ಮೋಕ್ಷಸಾಧನ ಸಿದ್ಧಿಗೋಸುಗ ಶ್ರವಣಾದಿಕವೆಂಬ ತ್ರಿವಿಧಂ ಕರ್ತವ್ಯಮಾಗಿಹುದೀಗಳೀ ತತ್ವಜ್ಞಾನಾಂತರದಲ್ಲಾದೊಡೆ, ಸಾಂಸಾರಿಕ ಫಲಭೋಗೇಚ್ಛೆಯಿಲ್ಲಾಗಿ ಕೃಷಿ ಮೊದಲಾದ ವ್ಯಾಪಾರವಿಲ್ಲಂ· ಬಳಿಕ ಗವಾಕ್ಷಗತ ಸೂರ್ಯ ಕಿರಣದಲ್ಲಿ ತೋರ್ಪ ಪರಮಾಣುಗಳಾಟವು, ಬಯಲ ಮಹಾ ಬೆಳಗಿನಲ್ಲಿ ಕಾಣಿಸದಂತೆ, ಅಲ್ಪ ಜ್ಞಾನಿಗಳ ವಿಷಯವಾದ ಕರ್ಮವೆಲ್ಲಂ ಸರ್ವಜ್ಞಾನಿಗಳ ಮಧ್ಯದಲ್ಲಿ ತೋರದಿರ್ಪುದರಿಂದನುಷ್ಟಿಸಲ್ಪತಕ್ಕುದಿಲ್ಲಾಗಿ ಯಾಗಾದಿ ವಾಂಛೆದೋರದು. ಬಳಿಕ ಬ್ರಹ್ಮಾನಂದ ಸಾಕ್ಷಾತ್ಕಾರವಾಯಿತ್ತಾಗಿ ಶ್ರವಣಾದಿಕವೆಲ್ಲಂ ಕೃತಪ್ರಾಯವಹುದು. ಇಂತಿದೇ ಕೃತಕೃತ್ಯತ್ವವೆನಿಸೂದು. ೧೭೧

### ಪ್ರಾಪ್ಯಪ್ರಾಪ್ತಿ :

ಮತ್ತಂ ತನಗೆ ವಿಶಿಷ್ಟ ಪುಣ್ಯ ಪರಿಪಾಕ, ಮುಮುಕ್ಷುತ್ವ, ಗುರೂಪಾಸ್ತಿ, ಶಾಸ್ತ್ರಶ್ರವಣ, ಆತ್ಮಾನಾತ್ಮ ವಿವೇಕ, ಅಜ್ಞಾನ ನಿವೃತ್ತಿ, ಆತ್ಮಸಾಕ್ಷಾತ್ಕಾರ, ಸಂಸಾರದುಃಖನಿವೃತ್ತಿ, ನಿಜಾನಂದಾದಿಗಳ ಸಿದ್ಧಿಯೇ ಪ್ರಾಪ್ಯಪ್ರಾಪ್ತಿತ್ವಮಕ್ಕುಂ. ೧೭೨

### ಜೀವನ್ಮುಕ್ತಿ :

ಬಳಿಕ ಜೀವನ್ಮುಕ್ತಿ, ವಿದೇಹ ಕೈವಲ್ಯವೆಂಬವೆ ಮೋಕ್ಷದ್ವೈವಿಧಂಗಳವರಲ್ಲಿ: ವಿವೇಕಿಗಹಮಾತ್ಮರ್ಗನ್ಯೋನ್ಯ ಸಂಬಂಧ ಲಕ್ಷಣ ಹೃದಯಗ್ರಂಥಿ ಶಿಥಿಲತೆಯನೆಯ್ದಿತ್ತಾಗಿ, ಪರಶರೀರದಲೆಂತಂತೆ ಸ್ವಶರೀರದಲ್ಲಿಯು ದೃಢಾಭಿಮಾನವಿಲ್ಲಾಗನುಭವ ಸಾಮ್ಯಮುಪ್ಪುದರಿಂ ಪ್ರಾರಬ್ಧ ಭೋಗ ಸಾಕ್ಷಾತ್ಕಾರಂ. ಮತ್ತಂ ಸುಪ್ತಬಾಲಾದಿಗಳಂತೆ ಮಂದಾನು ಸಂಧಾನವಹುದರಿಂ ದೇಹಾದಿ ನಿರಭಿಮಾನತೆಯಿಂ, ಘಟೋತ್ಪತ್ತಿಯಿಂ ಮೇಲೆ ಕುಲಾಲಚಕ್ರ ಭ್ರಮಣದಂತೆ ತತ್ಪ್ರಾರಬ್ಧವಾಸನಾವಶದಿಂ ಬದುಕುತ್ತಿಹುದೇ ಜೀವನ್ಮುಕ್ತಿಯಕ್ಕುಂ. ೧೭೩

### ಜೀವನ್ಮುಕ್ತಿ ಸಂಗತಿ :

ಬಳಿಕ ಬ್ರಹ್ಮಜ್ಞಾನೋದಯಾನಂತರದಲ್ಲಿಯೆ ಸೂರ್ಯೋದಯದಿಂ ಕತ್ತಲೆ ಕೆಡುವಂತೆ, ಅಜ್ಞಾನದೊಡನದರ ಕಾರ್ಯಮಾದ ಶರೀರಾದಿಕವಳಿದು ವಿದೇಹ ಕೈವಲ್ಯಮಾಗದೆ, ಮಧ್ಯದಲ್ಲಿ ಜೀವನ್ಮುಕ್ತಿ ಕಲ್ಪನೆಯಿಂತೆಂದೊಡೆ, ವಿವೇಕದಿಂ ರಜ್ಜುವಿನಲ್ಲಿಯು ಸರ್ಪಭ್ರಾಂತಿ ಕೆಟ್ಟೊಡಂ ತತ್ಕಾರ್ಯವಾದ ಭಯ ಕಂಪನಾದಿಗಳಿರ್ಪಂತೆ ಜ್ಞಾನದಿಂದಜ್ಞಾನ ಕೆಟ್ಟೊಡಂ ಅದರ ಕಾರ್ಯಮಾದ ಶರೀರಾದಿಗಳಿಗೆ ಸ್ಥಿತಿಯುಂಟಾಗಿಯುಂ, ಬ್ರಹ್ಮ ವಿದ್ಯೋತ್ಪತ್ತಿ ಸಮಯ ಕಾಲದೊಳ್ಳಿಶೇಷಮಾಗಿರ ಆ ಅಜ್ಞಾನದೊಡಗೂಡಿ ದೇಹಪಾತಮಾಗೆ ಬ್ರಹ್ಮವಿದ್ಯಾ ಸಂಪ್ರದಾಯ ವಿಚ್ಛಿತ್ತಿಯಹುದಾಗಿಯುಂ, ಬಳಿಕ್ಕಂತಾದೊಡೇನಾಯಿತ್ತೆನ್ನೆ, ಪರಶಿವನಿಂ ಬ್ರಹ್ಮನು

ಬ್ರಹ್ಮನಿಂ ಪ್ರಜಾಪತಿ, ಪ್ರಜಾಪತಿಯಿಂ ಮನು,ಮನುವಿನಿಂ ಪ್ರಜೆಗಳರಿದೆಂದು ಬ್ರಹ್ಮ ವಿದ್ಯಾ ಸಂಪ್ರದಾಯಮಂ ಪೇಳ್ವ ಛಾಂದೋಗ್ಯ ಶ್ರುತಿ ವಿರೋಧವಹುದಾಗಿಯುಂ, ಜ್ಞಾನಿಗೆ ಜೀವನ್ಮುಕ್ತಿ ಸಿದ್ಧಿಸಲೋಸುಗಮಾಗಿ ಪಾರಬ್ಧ ಕರ್ಮವಾಸನೆ, ಅಜ್ಞಾನ ಲೇಶ, ಸದ್ಭಾವಂಗಳನಂಗೀಕರಿಪುದರಿಂ ದೇಹಸ್ಥಿತಿಯುಂ, ಶಿಷ್ಯೋಪದೇಶಾದಿಕಮುಂ ಸಿದ್ಧಿಸುತ್ತಿರ್ಕುಂ. ೧೭೪

ಜ್ಞಾನ ಪ್ರಭಾವ :

ಮತ್ತಮಾ ಜೀವನ್ಮುಕ್ತಂಗೆ ಸಂಚಿತ ಕರ್ಮವೇ ಜ್ಞಾನಾಗ್ನಿಯಿಂದೆ ಸುಂಕ್ತು ಬಲ್ಲ ಸುಂಕಿನತರಿದು ಪೋಪುದು. ಪ್ರಾರಬ್ಧ ಕರ್ಮವೇ ಉಂಡುತೀರೂದು. ಆಗಾಮಿ ಕರ್ಮವೆ ಅನಧಿಕಾರಿಯಪ್ಪುದರಿಂ ಫಲಿಸುತ್ತಿರದೆಂದನುವದಿಸಲ್ವೇಳ್ಕುಂ.

ಬಳಿಕ ಜ್ಞಾನಾಗ್ನಿಯಿಂ ದಗ್ಧಮಾದಕರ್ಮವೆ ಪ್ರಾರಬ್ಧ ಭೋಗವನೀವುದರಿಂ ಮುಂದೆ ದೇಹೋತ್ಪತ್ತಿಯನು ಮಾಡಲುಳ್ಳುದೆಂದೊಡೆ, ಹುರಿದ ಚಣಕಾದಿ ಬೀಜವು ಭೋಗ ಮಾತ್ರಕ್ಕೆ ಯೋಗ್ಯವಲ್ಲದೆ. ಅಂಕುರೋತ್ಪತ್ತಿಗೆ ಕಾರಣವಲ್ಲದಂತೆ, ಜ್ಞಾನಿಯ ಕರ್ಮವು ಪ್ರಾರಬ್ಧಭೋಗದಿಂದವೆ ತೀರೂದಾಗಿ, ಜನ್ಮಾಂತರಕ್ಕೆ ಹೇತು ವಲ್ಲವೆಂದು ತಿಳಿಯಲ್ವೇಳ್ಕುಂ. ೧೭೫

ಜನ್ಮಾವಧಿ :

ಮತ್ತಮಾ ಪ್ರಾರಬ್ಧ ಕರ್ಮವಾದೊಡೆ ಲೋಕಯಾತ್ರೆಗಳನಧಿಕರಿಸಿದ ಅಸ್ಮದಾದಿನರರ್ಗೆ ಏಕ ದೇಹದಲ್ಲಿಯೆ ಭೋಗ್ಯವಹುದು. ಲೋಕಯಾತ್ರೆಯೊಳಧಿಕೃತ ರಾದ ಮನುವ್ಯಾಸಾದಿ ಮಹಾಪುರುಷರ್ಗೆ ದಶಸಂಖ್ಯಾ ದೇಹದಿಂದಲ್ಲದೆ ತೀರದಿರ್ದೊಡಂ ಜ್ಞಾನಕ್ಕೆ ತಿರೋಧಾನಮಿಲ್ಲಾಗಿ, ಬಾಲ್ಯಕೌಮಾರಾದಿ ಭೇದ ಮುಂಟಾದೊಡಂ ನರನಿಗೊಂದೇ ದೇಹವೆಂತಂತೆಂದರಿಯಲ್ವೇಳ್ಕುಂ. ೧೭೬

ಜ್ಞಾನಿಗೆ ಭೋಗಸಿದ್ಧಿ:

ಬಳಿಕ ಸಕಲ ವಿಷಯಂಗಳಿಗೆ ಸಾಧಿಸುತ್ತಿರ್ದ ಜ್ಞಾನಕ್ಕೆಯುಂ, ವಿಷಯಂ ಗಳಿಗೆ ಸತ್ಯತ್ವಮಂ ಸಂಪಾದಿಸುತ್ತಿರ್ದ ಪ್ರಾರಬ್ಧ ಭೋಗಕ್ಕೆಯುಂ ಅನ್ಯೋನ್ಯ ವಿರೋಧಮುಂಟಾಗಿ, ಜ್ಞಾನಿಗೆಂತು ಭೋಗಸಿದ್ಧಿಯಹುದೆಂದಡೆ ಮಿಥ್ಯಾತ್ಮಕ ಸ್ವಪ್ನ, ಇಂದ್ರಜಾಲಾದಿಗಳಲ್ಲಿ ಕ್ರಮದಿಂ ವನಿತಾದಿ ತೋರಿಕೆಗಳಿಂ ಮೈಥುನಾದಿ, ವಿಸ್ಮಯಾದಿ ನಿಜಭೋಗವಹುದೆಂತಂತೆ, ವ್ಯಾವಹಾರಿಕ ಪ್ರಾರಬ್ಧ ಭೋಗಕ್ಕೆ ವಿಷ ಯಂಗಳಿಗೆ ಸತ್ಯತ್ವದರ್ಶನಮುಂಟಾದಲ್ಲದಾಗದೆಂಬ ನಿಯಮಮಿಲ್ಲಾಗಿ, ಪ್ರಾರಬ್ಧ ಭೋಗಕ್ಕೆಯುಂ, ಜ್ಞಾನಕ್ಕೆಯು ಮನ್ಯೋನ್ಯ ವಿರೋಧವಿಲ್ಲವದರಿಂ ಜ್ಞಾನಿಗೆ ಪ್ರಾರಬ್ಧ ಭೋಗಮುಂಟೆಂದು ವಿಧಿತಮಕ್ಕುಂ. ೧೭೭

ಭೋಗ ದೃಷ್ಟಾಂತ :

ಬಳಿಕಿಲ್ಲಿ ಭ್ರಾಂತಿ ಕೆಟ್ಟಾಕ್ಷಣದಲ್ಲಿಯೇ ಶುಕ್ತಿಯ ರಜತಕ್ಕೆ ಹಾನಿಯಪ್ಪಂತೆ, ಜ್ಞಾನದಿಂದ ಜ್ಞಾನವಳಿದಾಗಳೇ ಜಗತ್ಪ್ರಪಂಚದ ತೋರ್ಕೆಯಿಲ್ಲಾಗಿ, ವಿವೇಕಿಗೆ ಪ್ರಾರಬ್ಧ ಭೋಗವೆಂತಪ್ಪುದೆಂದೊಡೆ ;

ಶುಕ್ತಿಕಾರಜತವೆಂಬುದು ನಿರುಪಾಧಿಕ ಭ್ರಮೆಯಪ್ಪುದರಿಂದಲ್ಲಿ ತಿಳಿದಾಗಲೇ ರಜತಸ್ವರೂಪಕ್ಕೆ ನಾಶವಹುದೀ ಸೋಪಾಧಿಕ ಭ್ರಮೆಯೊಳಂತಲ್ಲದೆಂತೆನೆ : ತೀರಗೊಳನ ತೀರದಲ್ಲಿದ ಮನುಷ್ಯನು ತಾನಾ ಜಲದೊಳಧೋಮುಖನಾಗಿಪ್ಪುದು ಪುಸಿಯೆಂದು ತೀರದಲ್ಲಿರ್ದತನ್ನಲ್ಲಿಯೇ ಬುದ್ಧಿನಿಷ್ಠನಾಗಿರ್ದರೂ, ಆ ಅಧೋಮುಖ ರೂಪುದೋರುತ್ತಿರ್ಪುದಂತೆ ಅಹಂಕಾರ ಸಂಬಂಧಮಾದ ಜೀವಭಾವಾದಿಕವೇ ಮಿಥ್ಯೆ ಪ್ರತ್ಯಗಾತ್ಮನೇ ತಾನೆಂದರಿದು ಜೀವತ್ವಾದಿ ಪ್ರಪಂಚವಿಹುದಾಗಿ ಜೀವನ್ಮುಕ್ತಂಗೆ ಪ್ರಾರಬ್ಧ ಭೋಗವ್ಯವಹಾರಮಂಗೀಕೃತಮಕ್ಕುಂ. ೨೨೪. ೨೨। ೨ ೧೭೮

ಜೀವನ್ಮುಕ್ತ ಸದ್ಗುಣ ;

ಮತ್ತಮಾ ಜೀವನ್ಮುಕ್ತಂಗೆ ಮೈತ್ರಿ, ಕರುಣಾ, ಮುದಿತಾ, ಉಪೇಕ್ಷೆಯೆಂಬ ಸದ್ಗುಣ ಚತುಷ್ಟಯಂಗಳುಂಟವರಲ್ಲಿ: ಸತ್ಪುರುಷರೊಡತನ ಸ್ನೇಹವೇ ಮೈತ್ರಿಯೆನಿಸೂದು. ದುಃಖಿತಾತ್ಮರಲ್ಲಿಯು ಮರುಕವೇ ಕರುಣೆಯೆನಿಸೂದು. ಪುಣ್ಯಕಾರಿಗಳಲ್ಲಿಯ ಸಂತೋಷವೇ ಮುದಿತವೆನಿಸೂದು. ಪಾಪಿಗಳಲ್ಲಿ ರಾಗ ದ್ವೇಷವಿಲ್ಲದಿಹುದೇ ಉಪೇಕ್ಷೆಯುಕ್ಕುಂ. ೧೭೯

ಜೀವನ್ಮುಕ್ತ ಪ್ರಯೋಜನ ಪಂಚಕ :

ಬಳಿಕಾ ಜೀವನ್ಮುಕ್ತಂಗೆ ಜ್ಞಾನರಕ್ಷೆ, ತಪಸ್ಸು, ಸರ್ವಸಂವಾದ, ದುಃಖ ಸಂಕ್ಷಯ, ಸುಖಾವಿರ್ಭಾವವೆಂಬ ಪಂಚ ಪ್ರಯೋಜನಗಳುಂಟವರಲ್ಲಿ : ವಾಸನಾ ಕ್ಷಯ, ಮನೋನಾಶಂಗಳಿಂ ಬುದ್ಧಿನಿರ್ಮಲವಾಗಿರ್ಪುದೇ ಜ್ಞಾನರಕ್ಷೆಯೆನಿಸೂದು. ಬಳಿಕ್ಕದರತ್ತಣಿಂದಿಂದ್ರಿಯ ಮನಸ್ಸುಗಳಿಗೇಕಾಗ್ರತೆಯೆ ತಪಸ್ಸೆನಿಸೂದು. ಬಳಿಕಾ ತಪೋನಿಷ್ಠನಾದ ಜೀವನ್ಮುಕ್ತನಂ ಆ ಬಾಲ ಪಂಡಿತರೆಲ್ಲರೂ ಯೋಗೀಶ್ವರನೆಂದು ಸ್ತುತಿನಮಸ್ಕಾರಾದಿಗಳಿಂ ಬಹು ಮನ್ನಣೆಗೆಯ್ವುದೇ ಸರ್ವ ಸಂವಾದವೆನಿಸೂದು. ಬಳಿಕ ಅಸ್ಮಿತಾದಿ ಕ್ಲೇಶವಿಲ್ಲದಿಹುದೇ ದುಃಖ ಸಂಕ್ಷಯವೆನಿಸೂದು. ಬಳಿಕಾ ಸಾಧನಂಗಳಿಂದಾತ್ಮಂಗೊಂದು ಪ್ರತಿಬಂಧವಿಲ್ಲದಿಹುದೇ ಸುಖಾವಿರ್ಭಾವಮಕ್ಕುಂ. ೧೮೦

ಜ್ಞಾನದ ದಶ ಚಿಹ್ನೆಗಳು :

ಬಳಿಕ ಅಕ್ರೋಧ, ಆರೋಗ್ಯ, ಜಿತೇಂದ್ರಿಯತ್ವ, ದಯೆ, ಕ್ಷಮೆ, ಜನಪ್ರಿಯತ್ವ, ಅಲೋಭತ್ವ, ದಾತೃತ್ವ, ಅಭಯ, ನಿರ್ಮದಂಗಳೆಂಬವೇ ಜ್ಞಾನದ ದಶ ಚಿಹ್ನಂಗಳು. ೧೮೧

ಜ್ಞಾನಿಯಿಂ ಪ್ರಯೋಜನ :

ಮತ್ತಾ ಜೀವನ್ಮುಕ್ತನಿಂ ಶಿಷ್ಯ, ಭಕ್ತ, ಉದಾಸೀನ, ಪಾಪಿಗಳೆಂಬ ಚತುರ್ವಿಧ ಜನಾನುಗ್ರಹಂ ದೊರೆಕೊಳ್ಳುವುದೆಂತೆನೆ :

ತತ್ತ್ವೋಪದೇಶಂಗೆಯ್ವ ಜೀವನ್ಮುಕ್ತನಲ್ಲಿ ಶಿಷ್ಯಂಗೆ ವಿಶ್ವಾಸದಿಂ ಮುಕ್ತಿಯುಂ,
ಬಳಿಕ್ಕನುರಾಗದಿಂದಾತನನಾರಾಧಿಸುವ ಭಕ್ತಂಗೆ ಸುಕೃತಾತಿಶಯಮುಂ,
ಬಳಿಕ್ಕಾತನ ಸಚ್ಚರಿತ್ರಮಂ ಕಂಡ ಉದಾಸೀನಂಗೆ ಪುಣ್ಯಕೃತಾಭಿರತಿಯುಂ,
ಬಳಿಕ್ಕಾತನ ದರ್ಶನ ಸ್ಪರ್ಶನಾದಿಗಳಿಂದ ಪಾಪಿಗೆ ಪಾಪಕ್ಷಯಂಗಳಕ್ಕುಂ. ೧೮೨

ಉಪದೇಶ ಸಂಗತಿ :

ಬಳಿಕಿಲ್ಲಿ ಕರ್ತೃತ್ವಾದಿಕಮಿಲ್ಲದ ಜೀವನ್ಮುಕ್ತದಿಂ ವೇದಾಂತ ವಾಕ್ಯಶಕ್ತಿ, ತಾತ್ಪರ್ಯ, ತರ್ಕಾನುಕೂಲ, ದೃಷ್ಟಾಂತಾದಿಗಳಿಂ ಯತ್ನಪುರಸ್ಸರಮಾದ ಬ್ರಹ್ಮೋಪದೇಶಾದಿಕಮೆಂತು ಘಟಿಪುದೆಂದೊಡೆ : ಅತಿರೋಹಿತ ಬ್ರಹ್ಮ ಸ್ವರೂಪನಪ್ಪುದರಿಂ, ರಾಗದ್ವೇಷಾದಿಗಳಿಲ್ಲದೀಶ್ವರಂಗೆ ಅನುಗ್ರಾಹ್ಯ, ನಿಗ್ರಾಹ್ಯ, ಜನರ ಸುಕೃತ ದುಷ್ಕೃತ ವಶದಿಂದನುಗ್ರಹನಿಗ್ರಹಚೇಷ್ಟೆ ದೊರೆಕೊಂಬಂತೆ,ಸಾಧಕ ಸುಕೃತಾದಿ ಪ್ರಭಾವದಿಂ, ಜ್ಞಾನಿಗುಪದೇಶಾದಿಗಳಹವೆಂಬುದೇ ಸಿದ್ಧಮಕ್ಕುಂ. ೧೮೩

ಜೀವನ್ಮುಕ್ತರ ಪ್ರಾರಬ್ಧವು :

ಬಳಿಕಿಲ್ಲಿ ಜೀವನ್ಮುಕ್ತರಿಂತು ಪೇಳ್ದ ಸಲ್ಲಕ್ಷಣದಿಂದಿರದೆ ಬಹು ಪ್ರಕಾರಮಾಗಿರ್ಪರೆಂತೆನೆ : ಪ್ರಾರಬ್ಧಕರ್ಮಸಂಸ್ಕಾರವೆಂಬುದಾದೊಡೆ:- ತ್ರೀವ್ರವೆಂದೂ, ಮಧ್ಯವೆಂದೂ, ಮಂದವೆಂದೂ, ಸುಪ್ತವೆಂದೂ ನಾಲ್ಕು ತೆರನಾಗಿಹುದವರಲ್ಲಿ :

ಸಮ್ಯಜ್ಞಾನಿಯಾದರೂ ಭೋಗದಲ್ಲಿಯೇ ತತ್ಪರನಾಗಿ ಪಶುವಿನಂತಾತ್ಮ ಪ್ರೀತಿ ಮಾತ್ರವಿಹುದೇ ತೀವ್ರ ಸಂಸ್ಕಾರವೆನಿಸೂದು.

ಭೋಗಕ್ಕೆ ಮುಖ್ಯತ್ವವಾದರೂ ತಾನಾತ್ಮತತ್ಪರನಾಗಿ ಬಾಲಕನಂತೆ ವಿನೋದದಿಂದಿರ್ಪುದೇ ಮಧ್ಯಸಂಸ್ಕಾರವೆನಿಸೂದು.

ಸಕಲ ಭೋಗವನುಳಿದು ಪರಮಾತ್ಮನಲ್ಲಿಯೇ ತತ್ಪರನಾಗಿ ಸುರತಸುಖ ಮಿಥುನದಂತೆ ನಿಜಾನಂದದಿಂದಿರ್ಪುದೇ ಮಂದ ಸಂಸ್ಕಾರವೆನಿಸೂದು.

ಸರ್ವ ವ್ಯಾಪಾರವಳಿದು ನಿರುಪಾಧಿಕಾತ್ಮನಲ್ಲಿಯೇ ತತ್ಪರನಾಗಿ ಪರಮುಕ್ತನಂತೆ ಪರಮ ಸುಖದಿಂದಿರ್ಪುದೇ ಸುಪ್ತಸಂಸ್ಕಾರಮಕ್ಕುಂ

ಬಳಿಕಿಂತು ನಾಲ್ಕು ಪ್ರಕಾರಮಾದ ಪ್ರಾರಬ್ಧಕರ್ಮವಶದಿಂ ಜೀವನ್ಮುಕ್ತರು ನಾನಾ ವರ್ತನೆಗಳಿಂದಿರ್ದರೂ, ಋಜು ಕುಟಿಲಗತಿಯ ನದಿಗಳ ಸಮುದ್ರ ಸಂಬಂಧದಂತೆ ಕಡೆಯಲ್ಲಿ ಬ್ರಹ್ಮಸ್ವರೂಪಮಾಗಿರ್ಪ ಮುಕ್ತಿಸುಖವೊಂದೇ ಪ್ರಕಾರಮಕ್ಕುಂ. ೧೮೪

## ಪ್ರಾರಬ್ಧತ್ರಯ :

ಬಳಿಕಿಚ್ಛಾ ಪ್ರಾರಬ್ಧ, ಅನಿಚ್ಛಾಪ್ರಾರಬ್ಧ, ಪರೇಚ್ಛಾಪ್ರಾರಬ್ಧವೆಂಬ ತ್ರಿವಿಧ ಪ್ರಾರಬ್ಧಗಳೇ ದೇವತೆಗಳಿಂದವು ನಿವಾರಿಸಲಶಕ್ಯಮಾಗಿರ್ಪವವರಲ್ಲಿ :

ಅಪಥ್ಯಸೇವಾದಿಕವಂ ತನಗೆ ಬರ್ಪನರ್ಥವನರಿದರೂ ಬಿಡಲೀಯದೆ ಮಾಡಿಪುದೇ ಇಚ್ಛಾಪ್ರಾರಬ್ಧವೆನಿಸೂದು.

ಮಾಡಲೊಲ್ಲೆನೆಂದರೂ ಹಿಂಸಾದಿಕವಂ ರಾಜಾಜ್ಞೆಯಂತೆ ಬಲತ್ಕಾರದಿಂ ಮಾಡಿಪುದೇ ಅನಿಚ್ಛಾಪ್ರಾರಬ್ಧವೆನಿಸೂದು.

ತನಗಿಚ್ಛಾನಿಚ್ಛೆಗಳಿಲ್ಲದಿರ್ದರೂ, ಪರದಾಕ್ಷಿಣ್ಯದಿಂ ಸುಖದುಃಖವನನುಣಿಪುದೇ ಪರೇಚ್ಛಾಪ್ರಾರಬ್ಧವೆನಿಸೂದು.

ಇಂತುತ್ರಿವಿಧ ಪ್ರಾರಬ್ಧಾನುಸಾರದಿಂ ಜೀವನ್ಮುಕ್ತರ್ಗೆ ವಿಚಿತ್ರಚರಿತಂಗಳುಂಟೆಂಬುದೇ ಸಿದ್ಧಮಕ್ಕುಂ. ೧೮೫

## ಜೀವನ್ಮುಕ್ತರು :

ಬಳಿಕೀಯರ್ಥದಲ್ಲಿ ಸನಕ, ಜನಕ, ಭರತ, ಯಾಜ್ಞವಲ್ಕ್ಯ, ಶುಕ, ವಾಮದೇವ ಗೌತಮ, ಪ್ರಹ್ಲಾದ, ವಿಶ್ವಾಮಿತ್ರ. ವಾಶಿಷ್ಠ, ದೂರ್ವಾಸ, ನಾರದಾದಿಗಳ ವರ್ತನಾ ಭೇದಗಳೇ ನಿದರ್ಶನಮಕ್ಕುಂ. ೧೮೬

## ಜ್ಞಾನ್ಯಜ್ಞಾನಿ ಭೇದ :

ಬಳಿಕಿಲ್ಲಿ ಜ್ಞಾನಿಗೆ ಪ್ರಾರಬ್ಧಭೋಗವನಿಂತಂಗೀಕರಿಸೆ, ಅಜ್ಞಾನಿ ಜ್ಞಾನಿಗಳಿಗೇನು ಭೇದವೆಂದೊಡೆ : ವ್ರಾತ್ಯಶ್ರೋತ್ರಿಯರ್ಗೆ, ವೇದಾಧ್ಯಯನಪರಿತ್ಯಾಗ, ವೇದಾಧ್ಯಯನ ಯುಕ್ತತೆಗಳಿಂದವೆ ಭೇದವಲ್ಲದೆ ಆಹಾರ ನಿದ್ರಾದಿಗಳಿಂ ಭೇದವಿಲ್ಲದು. ಅಂತೆ ಜ್ಞಾನಿಗಳೆಯು ಅಜ್ಞಾನಿಗಳೆಯು ಹೃದಯಗ್ರಂಥಿಯ ಸಂಬಂಧಾಸಂಬಂಧಂಗಳಿಂ ಭೇದವೈಸೆ. ಭೋಗಸ್ಥಿತಿಯಿಂ ಭೇದವಿಲ್ಲೆಂಬುದೇ ಸಮ್ಮತಮಕ್ಕುಂ. ೧೮೭

## ಸ್ವನಾಶ ಪ್ರಯತ್ನೋಪಪತ್ತಿ :

ಬಳಿಕಿಲ್ಲಿ ತತ್ವಜ್ಞಾನದಿಂ ಬ್ರಹ್ಮಪ್ರಾಪ್ತಿಯಾಗೆ ವ್ಯಾಘ್ರಸಂದರ್ಶಕನಂತೆ ಜೀವತ್ವಂ ಕೆಡುಗುವುದಾಗಿ, ತನ್ನನಾಶಕೆಂತು ಜೀವಂ ಪ್ರವರ್ತಿಪನೆಂದೊಡೆ : ಎಂತು ಲೋಕದಲ್ಲಿ ದೇವತ್ವದಭಿವಾಂಛೆಯಿಂ ಭೃಗು ಅಗ್ನಿ ಗಂಗೆ ಪ್ರಯಾಗಾದಿಗಳಲ್ಲಿ ನರತ್ವ ಪರಿತ್ಯಾಗವನಂಗೀಕರಿಸುತ್ತಿರ್ಪರಂತೆ ಪ್ರತ್ಯಗಾತ್ಮರೂಪ ಬ್ರಹ್ಮತ್ವದಿಂದಿರ ಲೋಸುಗಮಾಗಿ ಜೀವಂ ತತ್ವಜ್ಞಾನದೆ, ತನ್ನ ನಾಶವನೊಡಂಬಡುತ್ತಿರ್ಪನೆಂಬುದು ಪ್ರಸಿದ್ಧಮಕ್ಕುಂ. ೧೮೮

ಜೀವನ್ಮುಕ್ತ ಪ್ರಶಂಸೆ :

ಬಳಿಕ ವ್ಯಾಸಾದಿಗಳಂತೆ ಶಾಪಾನುಗ್ರಹ ಸಾಮರ್ಥ್ಯಮಾವಾತಂಗುಂಟಾತನೇ ತತ್ವಜ್ಞಾನಿಯಲ್ಲದೆ ಬೇರೊಬ್ಬನಲ್ಲೆಂದೊಡಾ ಸಾಮರ್ಥ್ಯವು ತಪಸ್ಸಿನ ಫಲವೈಸೆ. ತತ್ವಜ್ಞಾನದ ಫಲವಲ್ಲವೆಂದೇಕಾಣ್ಬುದು. ಬಳಿಕ್ಕಂತಾದೊಡೆ ತತ್ವಜ್ಞಾನಕ್ಕೆ ತಪವೇ ಮೂಲವೆಂಬ ಶ್ರುತಿಯುಂಟಾಗಿ, ತಪೋರಹಿತಂಗೆ ತತ್ವಜ್ಞಾನವೆತ್ತಣದೆನೆ, ಶಾಪಾದಿಗಳಿಗೆ ಕಾರಣಮಾದ ಸಕಾಮ್ಯ ತಪದಿಂದನ್ಯಮಾದ ನಿಷ್ಕಾಮ್ಯತಪಸ್ಸಿನಿಂ, ತತ್ವಜ್ಞಾನವಪ್ಪುದೆಂದು ಪರಾಮರ್ಶಂಗೆಯ್ಯಲ್ತಕ್ಕುದು. ಮತ್ತಮಾ ವ್ಯಾಸಾದಿಗಳಿಗೆ ತತ್ವಜ್ಞಾನ ಸಾಮರ್ಥ್ಯಂಗಳೆರಡೂ ಉಂಟಲ್ಲಾ ಎನಲವರ್ಗೆ, ಉಭಯವಿಧ ತಪಮುಂಟಾಗಿ ಜ್ಞಾನ ಸಾಮರ್ಥ್ಯಂಗಳೆಂಬ ದ್ವಿವಿಧವು ಸಂಭವಿಸುತ್ತಿಹವು. ಬಳಿಕೊಂದೇ ತಪಸನಾಚರಿಸಿದೊಡಾತಂಗೊಂದೊಂದೇ ಸಿದ್ಧಿಸುತ್ತಿಹವಾಗಿ ವಿರೋಧ ವಿಲ್ಲಂ. ೧೪೯

ಬಳಿಕ ಶಾಪಾದಿ ಸಾಮರ್ಥ್ಯವಿಲ್ಲದ ವಿಧಿಶೂನ್ಯನಾದ ತತ್ವಜ್ಞಾನಿಯಂ ಕ್ರಿಯಾ ನಿಷ್ಠರೆಲ್ಲಾ ನಿಂದಿಸುತ್ತಿಹರಲಾ ಎನಲು, ಆ ಕ್ರಿಯಾನಿಷ್ಠರ್ಗೆಯೂ, ಆ ವಿಷಯ ಲಂಪಟರಾದ ಪಾಮರರಿಂ ನಿಂದ್ಯತ್ವಮುಂಟಪ್ಪುದರಿಂ ವೈಷಮ್ಯವಿಲ್ಲಂ. ಮತ್ತಮಾ ವಿಷಯಲಂಪಟರಿಂದಾದ ನಿರಾಕರಣದಿಂ ಕ್ರಿಯಾನಿಷ್ಠರಾದ ವಿಶಿಷ್ಟರ್ಗಾವಹಾನಿ ಯೆನೆ, ದೇಹವೇ ಆತ್ಮನೆಂಬ ಬುದ್ಧಿಯುಳ್ಳ ಕ್ರಿಯಾನಿಷ್ಠರ್ ಮಾಳ್ಪ ದೂಷಣದಿಂ ತತ್ವಜ್ಞಾನಿಗಾವ ಹಾನಿಯೂ ಇಲ್ಲವೆಂಬುದೇ ಯಥಾರ್ಥಮುಕ್ಕುಂ. ೧೫೦

ಮತ್ತಮಾ ಜೀವನ್ಮುಕ್ತನಲೌಕಿಕನಪ್ಪುದರಿಂ ಪ್ರಾರಬ್ಧವಶದಿಂ ವಿದ್ವ ದವಸ್ಥೆಯೊಳಿರ್ದೊಡಂ ಮಾರುತನಿಂ ಶ್ರಿತಾಶ್ರಿತ ಮೇಘ ಪಟಲಗಗನದಂತೆ ನಿತ್ಯ ನಿರ್ಮಳನಪ್ಪಂ. ಮತ್ತಮದೃಷ್ಟವೆಂಬ ಪರಿಚಾರಕನಿಂ ದತ್ತಮಾದ ಸ್ರಕ್ಚಂದನಾದಿ ಭೋಗಸ್ವೀಕಾರಮಿರ್ದೊಡಂ ನಿಜಭರ್ತ್ರವಿನೊಳ್ಸುರತಂಗೆಯ್ವ ಪುಂಶ್ಚಲಿಯಂತೆ ಪರಾ ಕತೆಯುಕ್ಕುಂ. ಮತ್ತಂ ಮೂಢನಂತೆ ಕಲಾಭಿಜ್ಞತೆಯೊಳ್ ಮೌನನಾಗಿರ್ದೊಡಂ ಕಲ್ಪಿತ ದ್ವೈತಪರ ಶ್ರುತಿವಾಕ್ಯ ವೈಖರಿ ವಿಷಯದೊಳಲಸನಪ್ಪಂ. ಮತ್ತಂ ಪ್ರಸ್ತು ತವನರಿಯದ ಬಹುಭಾಷಣನಂತೆ ಏನನುಡಿದೊಡಮದೇ ಗೂಢಾಭಿಪ್ರಾಯಗರ್ಭಿತ ಮಾಡ. ಸತ್ಯಾದ್ವೈತನಿಷ್ಠೆ ನಿಗಮಾಭಿಪ್ರಾಯಮುಕ್ಕುಂ. ಮತ್ತಮಾಚಾರ್ಯ ನಂತೆ ಶಿಷ್ಯರನುಪದೇಶಿಸುತ್ತಿರ್ದೊಡಮಾತನು ನಿತ್ಯಮುಕ್ತನಪ್ಪುದರಿಂ ಬೋಧ್ಯ ಬೋಧಕತ್ವವೆ ಮಾಯಾರಚನಾತ್ಮಕವೆಂಬ ಕೃತನಿಶ್ಚಯದಿಂ ಗಗನವಾಣಿಯಂತೆ ಗುರುತ್ವಾಭಿಮಾನರಹಿತನಪ್ಪಂ. ಮತ್ತಮುನ್ಮತ್ತನಂತೆ ಅನುಚಿತವಕ್ತೃವಾದೊಡಂ ದ್ವೈತಭಾವವಳಿದಾತ್ಮಾರಾಮನಪ್ಪುದರಿಂ ಸುರತಾಂತ್ಯ ಸಮಯದೊಳಗೆ ರತಿಕಾಮಾಸಕ್ತ ಮಿಥುನವಾಕ್ಯದಂತೆ ಅನಭಿದೇಯ ವಿಷಯಮುಕ್ಕುಂ. ಮತ್ತಂ ಪಿಶಾಚ ಗ್ರಹವಿಷ್ಟನಂತೆ ಗಳಗಳನೆ ನಡೆದೊಡಂ ಪೂರ್ಣೈಕ ಸ್ವಭಾವನಿಷ್ಠನಪ್ಪುದರಿಂ

ವಿರಹಿಯ ಗಮನದಂತೆ ಅಪ್ರಾಪ್ಯಾನುಸಂಧಾನಮಕ್ಕುಂ. ಮತ್ತಂ ಪುತ್ರವಿಯೋಗಾನುಭವವನುಳ್ಳ ಗ್ರಾಮ್ಯಜನಕನಂತೆ ಶೋಕಂಗೆಯ್ಯಲದೆ ಸರ್ವೇಂದ್ರಿಯಂಗಳ್ ಬ್ರಹ್ಮಂಗಳೆಂದಾಲೋಚನಂಗೆಯ್ಯದೆ ಕಲ್ಪಿತ ಸಾಧಕಾವಸ್ಥೆಯೊಳ್ ಮಂಡಿತ ಸರ್ವೇಂದ್ರಿಯ ಧರ್ಮವಿಷಯಮಾದ ಕರುಣರಸಮಕ್ಕುಂ. ಮತ್ತಂ ವಿಕೃತ ಬಹುರೂಪ ದರ್ಶನವಿನೋದದೊಳಟ್ಟಹಾಸಂಗೆಯ್ದೊಡಂ ವಿಚಿತ್ರ ಪುಣ್ಯಪಾಪಾದಿ ವ್ಯವಹಾರವಂ ಸತ್ಯವೆಂದು ಪ್ರತಿಪಾದಿಪ ಮೀಮಾಂಸಾದಿ ದರ್ಶನ ವಿಷಯಮಾದ ಪರಿಹಾಸಮಕ್ಕುಂ. ಮತ್ತಂ ವಿಟನಂತೆ ಸ್ತ್ರೀಲೋಲನಾಗಿರ್ದೊಡಂ ಪೂರ್ಣೈಕಸ್ವಭಾವನಪ್ಪುದರಿಂ ನಿಜಾನಂದಾನುಭವಿಯಪ್ಪಂ. ಮತ್ತಂ ಶತ್ರುವಿನಂತಾವಾತನಂ ಕ್ರೋಧದಿಂ ಸಂತಾಪಂ ಬಡಿಸಿದೊಡಂ ಕ್ಷೇತ್ರ ದಾಹಕಾಗ್ನಿಯಂತೆ ವಿಶಿಷ್ಟಫಲಸಂಪತ್ತಿಗಾತನನಾಶ್ರಯಂ ಮಾಡುವಾತನೆಂದು ವಿಶ್ವಾಸಂಗೆಯಲ್ವೇಳ್ಕುಂ. ೧೯೧

ವಿದೇಹ ಕೈವಲ್ಯ :

ಅನಂತರದೊಳಾವ ಕಾಲದಲ್ಲಿಯುಂ ಆವದೇಶದಲ್ಲಿಯುಂ ಆವುದಾನೊಂದು ಶರೀರಂಬಡೆಯದೆ ಸಚ್ಚಿದಾನಂದ ಬ್ರಹ್ಮಸ್ವರೂಪದಿಂದಿಹುದೇ ವಿದೇಹಕೈವಲ್ಯಮಕ್ಕುಂ. ಬಳಿಕಾ ವಿದೇಹ ಕೈವಲ್ಯವನೆಯ್ದುವ ಕ್ರಮವೆಂತೆಂದೊಡೆ. ೧೯೨

ಆವನಾನೋರ್ವ ಮುಮುಕ್ಷುವಿಗೆ ನಿತ್ಯಕರ್ಮಾನುಷ್ಠಾನದಿಂ ಧರ್ಮೋತ್ಪತ್ತಿ, ಧರ್ಮೋತ್ಪತ್ತಿಯಿಂ ಪಾಪನಿವೃತ್ತಿ, ಪಾಪನಿವೃತ್ತಿಯಿಂ ಚಿತ್ತಶುದ್ಧಿ, ಚಿತ್ತಶುದ್ಧಿಯಿಂ ಸಂಸಾರದೋಷದರ್ಶನವದರಿಂ ವಿಷಯವಿರಕ್ತಿ, ವಿಷಯವಿರಕ್ತಿಯಿಂ ಮೋಕ್ಷಾಪೇಕ್ಷೆ, ಮೋಕ್ಷಾಪೇಕ್ಷೆಯಿಂ ಬಾಹ್ಯಕರ್ಮೋಪರತಿ, ಕರ್ಮೋಪರತಿಯಿಂ ಯೋಗಾಭ್ಯಾಸವದರಿಂ ಪ್ರತ್ಯಗಾತ್ಮಾಭಿರತಿ, ಪ್ರತ್ಯಗಾತ್ಮಾಭಿರತಿಯಿಂ ತತ್ವಮಸ್ಯಾದಿ ಮಹಾವಾಕ್ಯ ವಿಚಾರ, ಅದರಿಂದದ್ವೈತ ಜ್ಞಾನವದರಿಂದವಿದ್ಯಾನಾಶವದರಿಂದದ್ವೈತ ಭ್ರಾಂತಿ ನಷ್ಟವದರಿಂ ಶುಭಾಶುಭಬುದ್ಧಿ ಪರಿತ್ಯಾಗವದರಿಂ ರಾಗದ್ವೇಷಹಾನಿ, ರಾಗದ್ವೇಷಹಾನಿಯಿಂ ವಿಧಿನಿಷೇಧನಿರಸನವದರಿಂ ಪುಣ್ಯಪಾಪಕ್ಷಯವದರಿಂ, ದೇಹಭಾವವಿಚ್ಛಿತ್ತಿ, ದೇಹಭಾವವಿಚ್ಛಿತ್ತಿಯಿಂ ಸರ್ವಪಾಶ ವಿಮೋಚನವದರಿಂ, ಸರ್ವೋತ್ಕರ್ಷಮಾದ ಚರಮಸ್ಥಾನಮಪ್ಪ ಪುನರಾವೃತ್ತಿರಹಿತಮಾದ ಸಕಲಶಾಸ್ತ್ರ ಪರ್ಯವಸಾನಮಪ್ಪ ನಾಮ, ರೂಪು, ಜಾತಿ, ಕ್ರಿಯಾವಾಸನೆ ಪುಗದ ವಾಚಾಮಗೋಚರಮಪ್ಪ ನಿತ್ಯಾನಂದ ಸ್ವರೂಪಮಾದ ವಿದೇಹ ಕೈವಲ್ಯವಹುದೆಂದು ನಿಶ್ಚಯಿಪುದೇ ಶ್ರುತ್ಯಾಚಾರ್ಯಪ್ರಸಾದ ಸಿದ್ಧಿಯಕ್ಕುಂ. ೧೯೩

ಇತಿ ವೇದಾದಿ ಸಕಲ ಶಾಸ್ತ್ರಾರ್ಥ ನಿರ್ಣಯಂ
ಪ್ರಥಮ ಪರಿಚ್ಛೇದಃ

|| ಶ್ರೀ ಶಂಭುಲಿಂಗಾಯನಮಃ ||

# ದ್ವಿತೀಯ ಪರಿಚ್ಛೇದ

ಕಂದ|| ಇಂತಖಿಳವೇದ ಶಾಸ್ತ್ರಾ
ರ್ಥಂ ತಿಳಿವಂತೊರೆದೆನಿನ್ನು ಪರತರ ಶಿವಸಿ |
ದ್ಧಾಂತ ಪದ್ಧತಿಯನರಿದೋ
ರಂತುಪುರ್ವೆಂ ಸಾಧಕರ್ಗೆ ಸಂತಸಮಪ್ಪುದಿಸಲ್ ||

ಅಂತಾದೊಡಾ ಸಿದ್ಧಾಂತ ಶಾಸ್ತ್ರದೊಳೀ ಲೋಕದಲ್ಲಿ ಪ್ರತ್ಯಕ್ಷ ಫಲದಿಂ ವಿಶ್ವಾಸಂ ಘಟಿಸಲೋಸುಗವಾಗಿ ವಿಜ್ಞಾನ ಕೇವಲರೆಂಬಾತ್ಮವರ್ಗದೊಳಾಯಾಯಾ ನಾಮಧೇಯಮುಳ್ಳವರಿಂದುಕ್ತಮಾದ ಗಾರುಡ, ದಕ್ಷಿಣ, ವಾಮ, ಭೂತಂಗಳೆಂಬ ನಾಲ್ಕು ತಂತ್ರಾಂತರಂಗಳವರಲ್ಲಿ, ಕ್ರಮದಿಂ ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತವೆಂಬ ಚತುರ್ವಿಧ ಬ್ರಹ್ಮಮೂರ್ತ್ಯುಪಾಸನೆಗಳುಂ, ಸರ್ಪಚಿಕಿತ್ಸೆ, ಶತ್ರುಜಯ, ರಸವಾದ, ಗ್ರಹೋಚ್ಚಾಟನಾರ್ಥಮಾಗಿ ಕ್ರಮದಿಂ ಗಾರುಡ, ಮಾರಣ ವಾದ, ಮಂತ್ರೌಷಧ ಪ್ರಯೋಗಂಗಳುಂ ಸಮರ್ಥಿತಂಗಳಕ್ಕುಂ. ೧೯೪

## ಆಗಮ ಭೇದಗಳು :

ಮತ್ತಮಾ ಸಿದ್ಧಾಂತ ಭೇದಂಗಳಾವವೆಂತೆಂದೊಡೆ :

| | | | |
|---|---|---|---|
| ಕಾಮಿಕಾಗಮ | ಯೋಗಜಾಗಮ | ಚಿಂತ್ಯಾಗಮ | ಕಾರಣಾಗಮ |
| ಅಜಿತಾಗಮ | ದೀಪ್ತಾಗಮ | ಸೂಕ್ಷ್ಮಾಗಮ | ಸಹಸ್ರಾಗವ |
| ಅಂಶುಮಾನಾಗಮ | ಸುಪ್ರಭೇದಾಗಮ | ವಿಜಯಾಗಮ | ವಿಮಲಾಗಮ |
| ವಿಶ್ವಾಸಾಗಮ | ಸ್ವಯಂಭುವಾಗಮ | ಅನಲಾಗಮ | ಶಾಂತಾಗಮ |
| ವೀರಾಗಮ | ರೌರವಾಗಮ | ಮಕುಟಾಗಮ | ಲಲಿತಾಗಮ |
| ಚಂದ್ರಜ್ಞಾನಾಗಮ | ಬಿಂಬಾಗಮ | ಪ್ರೋದ್ಗೀತಾಗಮ | ಸಿದ್ಧಾಗಮ |
| ಪಾರಮೇಶ್ವರಾಗಮ | ಸರ್ವೋತ್ತಾಗಮ | ವಾತೂಲಾಗಮ | ಕಿರಣಾಗಮ |

ವೆಂಬವೆ ಇಪ್ಪತ್ತೆಂಟು ದಿವ್ಯಾಗಮಂಗಳಕ್ಕುಂ. ೧೯೫

ಬಳಿಕ್ಕವಾದೊಡೆ ಕಾಮಿಕಾದಿಕ್ರಮದಿಂ ಸದಾಶಿವನ ಸದ್ಯೋಜಾತ ಮುಖದಲ್ಲೈದು, ವಾಮದೇವ ಮುಖದಲ್ಲೈದು, ಅಘೋರ ಮುಖದಲ್ಲೈದು, ತತ್ಪುರುಷ ಮುಖದಲ್ಲೈದು, ಈಶಾನಮುಖದಲ್ಲೈದು ಜನಿಸಿದವವರಲ್ಲಿ ಕಾಮಿಕಾದಿ ಸುಪ್ರಭೇದಾಂತಮಾದ ಹತ್ತಾಗಮಂಗಳೇ ಶಿವಭೇದವೆನಿಸಿಕೊಂಬವು. ಮಿಕ್ಕ ವಿಜಯಾದಿ ವಾತೂಲಾಂತಮಾದ ಹದಿನೆಂಟಾಗಮಂಗಳೇ ರುದ್ರಭೇದವೆನಿಸಿಕೊಳ್ಳುತ್ತಿರ್ಕುಂ. ೧೯೬

ಆಗಮಾವತರಣ :

ಮತ್ತಮಾ ಶಿವ-ರುದ್ರರುಗಳಿಂದಾಗಮಂಗಳವತರಿಸಿದ ಕ್ರಮವೆಂತೆಂದೊಡೆ: ಸದ್ಯೋಜಾತಮುಖದಿಂ ಕಾಮಿಕಾಗಮವನೇ ಮೊದಲು ಪ್ರಣವನು, ಬಳಿಕವನಿಂ ತ್ರಿಕಲನು, ಮೇಲವನಿಂ ಹರನ್ನೈದಿದನು. ಯೋಗಾಜಾಗಮವನೆ ಮೊದಲು ಸುಧಾಖ್ಯನು, ಮೇಣವನಿಂ ಯೋಗಾಹ್ವಮನು ಮತ್ತವನಿಂದಂಬಿಕೆ ಕೇಳಿದಳು. ಕಾರಣಾಗಮವನೆಮೊದಲು ಕಾರಣಾಖ್ಯನು, ಬಳಿಕವನಿಂ ಶರ್ವನು, ಮೇಲವನಿಂ ಪ್ರಜಾಪತಿ ಕೇಳಿದನು. ಅಜಿತಾಗಮವನೆ ಮೊದಲು ಶಿವನು, ಮತ್ತವನಿಂ ಸುಶಿವನು ಮೇಣವನಿಂದಚ್ಯುತನು ಕೇಳಿದನು. ಬಳಿಕ ವಾಮದೇವ ಮುಖದಿಂ ದೀಪ್ತಾಗಮವನೆ ಮೊದಲೀಶನು, ಮೇಲವನಿಂ ತಿಮೂರ್ತಿ, ಬಳಿಕವನಿಂ ಹುತಾಶನನರಿದನು. ಸೂಕ್ಷ್ಮಾಗಮವನೆ ಮೊದಲು ಸೂಕ್ಷ್ಮನು ಮತ್ತವನಿಂ ವೈಶ್ರಣವನು, ಬಳಿಕವನಿಂ ಸುಪ್ರಭಂಜನನ್ನೈದಿದನು. ಸಹಸ್ರಾಗಮವನೆ ಮೊದಲು ಕಾಲರುದ್ರನು, ಮೇಲವನಿಂ ಭೀಮರುದ್ರನು, ಮತ್ತವನಿಂಧರ್ಮನರಿದನು. ಅಂಶುಮಾನಾಗಮವನೆ ಮೊದಲು ಅಂಬು, ಬಳಿಕವನಿಂದುಗ್ರನು, ಮೇಲವನಿಂದೌರಸನರಿದನು. ಸುಪ್ರಭೇದಾಗಮವನೆ ಮೊದಲು ಶೇಷನು, ಮತ್ತವನಿಂ ವಿಘ್ನೇಶ್ವರನು, ಮೇಲವನಿಂ ಶಶಿತಿಳಿದನಿಂತು ದಶ ಶಿವಭೇದಂಗಳಕ್ಕುಂ. ೧೯೭

ಬಳಿಕ ಅಘೋರಮುಖದಿಂ ವಿಜಯಾಗಮವನೆ ಮೊದಲು ರುದ್ರನು, ಮತ್ತವನಿಂದನಾದಿ, ಮೇಲವನಿಂ ಪರಮೇಶ್ವರನರಿದನು. ವಿಶ್ವಾಸಾಗಮವನೆ ಮೊದಲು ಉದಯನು, ಮತ್ತವನಿಂ ಗಿರಿಜೆ ಕೇಳಿದಳು. ಸ್ವಯಂಭುವಾಗಮವನೆ ಮೊದಲು ನಿಧನೇಶಮನು, ಬಳಿಕವನಿಂ ಸ್ವಯಂಭೂತನೆಯ್ದಿದನು. ಅನಲಾಗಮವನೆಮೊದಲು ವ್ಯೋಮನು ಮತ್ತವನಿಂ ಹುತಾಶನನರಿದನು. ವೀರಾಗಮವನೆ ಮೊದಲು ತೇಜಸನು ಮೇಲವನಿಂ ಪ್ರಜಾಪತಿ ಕೇಳಿದನು. ಬಳಿಕ ತತ್ಪುರುಷಮುಖದಿಂ ರೌರವಾಗಮವನೆ ಮೊದಲು ಬ್ರಹ್ಮೇಶನು, ಮೇಲವನಿಂ ನಂದಿಕೇಶ್ವರನರಿದನು. ಮುಕುಟಾಗಮವನೆ ಮೊದಲು ಶಷಾಖ್ಯನು ಬಳಿಕವನಿಂ ಮಹಾದೇವನೆಯ್ದಿದನು. ವಿಮಲಾಗಮವನೆ ಮೊದಲು ಸರ್ವಾತ್ಮಕನು, ಮೇಣವನಿಂ ವೀರಭದ್ರನರಿದನು. ಚಂದ್ರಜ್ಞಾನಾಗಮವನೆ ಮೊದಲು ಅನಂತನು, ಮತ್ತವನಿಂ ಬೃಹಸ್ಪತಿ ಕೇಳಿದನು. ಬಿಂಬಾಗಮವನೆ ಮೊದಲು ಪ್ರಶಾಂತನು, ಬಳಿಕವನಿಂ ದಧೀಚಿ ಕೇಳಿದನು.

ಬಳಿಕ ಈಶಾನ್ಯ ಮುಖದಿಂ ಪ್ರೋದ್ಗೀತಾಗಮವನೆ ಮೊದಲು ಶೂಲಿ, ಮೇಲ ವನಿಂ ಕವಚಾಖ್ಯನೆಯ್ದಿದನು. ಲಲಿತಾಗಮವನೆ ಮೊದಲು ಮಲಯನು ಮತ್ತವನಿಂ ಲಲಿತನರಿದನು. ಸಿದ್ಧಾಗಮವನೆ ಮೊದಲು ಇಂದ್ರನು, ಬಳಿಕವನಿಂ ಚಂಡೇಶ ನೆಯ್ದಿದನು. ಶಾಂತಾಗಮವನೆ ಮೊದಲು ವಶಿಷ್ಠನು ಮೇಲವನಿಂ ಶ್ವಸ ಪಾಯನರಿದನು.

ಸರ್ವೋಕ್ತಾಗಮವನೆ ಮೊದಲು ಸೋಮನು, ಮೇಲವನಿಂ ನೃಸಿಂಹನೆಯ್ದಿದನು ಪಾರಮೇಶ್ವರಾಗಮವನೆ ಮೊದಲು ದೇವಿ ಕೇಳಿದಳು ಕಿರಣಾಗಮವನೆ ಮೊದಲು ದೇವಪಿತನು, ಬಳಿಕವನಿಂ ಸಂವರ್ತನರಿದನು. ವಾತೂಲಾಗಮವನೆ ಮೊದಲು ಶಿವರುದ್ರನು, ಮತ್ತವನಿಂ ಮಹಾಕಾಳನೆಯ್ದಿದನಿಂತಷ್ಟಾದಶ ರುದ್ರಭೇದಂಗಳಕ್ಕುಂ. ೧೯೮

ಆಗಮ ಸಂಖ್ಯೆ :

ಬಳಿಕಾ ೨೮ ಆಗಮಂಗಳನೊಂದುಗೂಡೆಣಿಸಿದೊಡೆ ೨ ಶಂಖಮುಂ ೧ ಪದ್ಮಮುಂ ೧ ಅರ್ಭುದಮುಂ ೧೯ ಕೋಟಿಯುಂ ೩೨ ಲಕ್ಷಮುಂ, ನಾಲ್ವತ್ತು ನಾಲ್ಕುಸಾವಿರ ಗ್ರಂಥಸಂಖ್ಯೆಯುಳ್ಳವಾಗಿ, ೧೯೬ ಭೇದಂಗಳಾಗಿರ್ಪವಾ ಭೇದಂಗಳಾವಾವೆಂತೆಂದೊಡೆ.

ಉತ್ತರ, ಭೈರವೋತ್ತರ, ನಾರಸಿಂಹವೆಂಬವೆ ಕಾಮಿಕಾಗಮದ ತ್ರಿಭೇದಂಗಳು

ವೀಣಾಶಿಖೋತ್ತರ, ತಾರತಂತ್ರ, ಸೌಖ್ಯಾಗಮ, ಶಾಂತಾದ್ಯಾಗಮ, ಆತ್ಮ ಯೋಗವೆಂದು ಯೋಗಜಾಗಮದೈದು ಭೇದಂಗಳು.

ಸುಚಿಂತ್ಯಾಗಮ, ಶುಭಗಾಗಮ, ವಾಮತಂತ್ರ, ಪಾಪನಾಶಕ, ಸಾರೋದ್ಭವ ಅಮೃತಾಗಮವೆಂದು ಚಿಂತ್ಯಾಗಮದಾರು ಭೇದಂಗಳು.

ಕಾರಣತಂತ್ರ, ಪಾವನತಂತ್ರ, ದೌರ್ಘ್ಯತಂತ್ರ, ಮಹೇಂದ್ರತಂತ್ರ, ಭೀಮತಂತ್ರ ಮಾರಣತಂತ್ರ, ಈಶಾನ ತಂತ್ರವೆಂದು ಕಾರಣಾಗಮದ ಸಪ್ತಭೇದಂಗಳು.

ಪ್ರಭೂತಾಗಮ, ಪರೋದ್ಭೂತಾಗಮ, ಪಾರ್ವತೀತಂತ್ರ, ಪದ್ಮಸಂಹಿತೆ ಯೆಂದು ಅಜಿತಾಗಮದ ನಾಲ್ಕು ಭೇದಂಗಳು.

ಅಮೇಯಾಗಮ, ಅಪ್ರಮಾಗಮ, ಆಪ್ಯಾಗಮ, ಅಸಂಖ್ಯಾಗಮ, ಅಮಿತೌ ಜಸಾಗಮ, ಆನಂದಾಗಮ, ಮಾಧವೋದ್ಭೂತಾಗಮ, ಅದ್ಭುತಾಗಮ, ಅಮೃತಾಗಮವೆಂಬು. ದೀಪ್ತಾಗಮದ ನವಭೇದಂಗಳು.

ಸೂಕ್ಷ್ಮ ಸಂಹಿತೆಯೆಂದು ಸೂಕ್ಷ್ಮಾಗಮವೊಂದೇ ಭೇದವಾಗಿಹುದು.

ಅತೀತಾಗಮ, ಅಮಲಾಗಮ, ಶುದ್ಧಾಗಮ, ಅಪ್ರಮೇಯಾಗಮ, ಜ್ಯೋತಿ ಭಾನಾಗಮ, ಪ್ರಬುದ್ಧಾಗಮ, ವಿಬುದ್ಧಾಗಮ, ಹಸ್ತಾಗಮ, ಅಲಂಕಾರಾ ಗಮ, ಸುಬೋಧಾಗಮವೆಂದು ಸಹಸ್ರಾಗಮದ ದಶ ಭೇದಂಗಳು-

ವಿದ್ಯಾಪುರಾಣಾಗಮ, ಭಾಸ್ವರಾಗಮ, ನೀಲಲೋಹಿತತಂತ್ರ,

ಪ್ರಕರಣಾಗಮ, ಭೂತತಂತ್ರ, ಆತ್ಮಾಲಂಕಾರ, ಕಾಸ್ಯಪಾಗಮ, ಗೌತಮಾಗಮ, ಮಹೇಂದ್ರಾಗಮ, ಬ್ರಹ್ಮಾಗಮ, ವಾಶಿಷ್ಟಾಗಮ, ಈಶಾನೋತ್ತರವೆಂದು ಅಂಶುಮಾನಾಗಮದ ದ್ವಾದಶಭೇದಂಗಳು.

ವಿಜಯತಂತ್ರ, ಉದ್ಭವತಂತ್ರ, ಸೌಮ್ಯತಂತ್ರ, ಅಘೋರತಂತ್ರ, ಮೃತ್ಯುನಾಶಕತಂತ್ರ, ಕುಬೇರತಂತ್ರ, ವಿಮಲತಂತ್ರ, ಮಹಾಘೋರತಂತ್ರವೆಂದು ವಿಜಯಾಗಮದೆಂಟು ಭೇದಂಗಳು.

ಸ್ವಾಯಂಭೂತ, ಪ್ರಜಾಪತಿಮತ, ಪದ್ಮತಂತ್ರವೆಂದು ಸ್ವಾಯಂಭೂವಾಗಮದ ತ್ರಿಭೇದಂಗಳು.

ಆಜ್ಞೇಯವೊಂದು ಅನಲಾಗಮವೊಂದೇ ಭೇದವಾಗಿಹುದು.

ಪ್ರಸ್ತರತಂತ್ರ, ಪ್ರಸ್ಫುರತಂತ್ರ, ಪ್ರಬೋಧತಂತ್ರ, ಬೋಧಸತಂತ್ರ, ಅಮೋಹತಂತ್ರ, ಮೋಹಶಮಯತಂತ್ರ, ಸಕಟತಂತ್ರ, ಸಾಕಟೇಯತಂತ್ರ ಹಲತಂತ್ರ, ವಿಲೇಖನತಂತ್ರ ಭದ್ರತಂತ್ರ, ವೀರತಂತ್ರವೆಂದು ವೀರಾಗಮದ ಹದಿಮೂರು ಭೇದಂಗಳು.

ಕಲಾದಹನ, ರೌರವೋತ್ತರ, ಕೌಮಾರ, ಕಾಳ, ಮಹಾಕಾಳ, ಇಂದ್ರಾಗಮವೆಂದು ರೌರವಾಗಮದಾರುಭೇದಂಗಳು.

ಮಕುಟ, ಮಕುಟೋತ್ತರವೆಂದು ಮಕುಟಾಗಮದೆರಡು ಭೇದಂಗಳು.

ಅನಂತಭೋಗಾಗಮ, ಆಕ್ರಾಂತಾಗಮ, ಹೃದ್ಭಾಸಾಗಮ, ಅರಿಕೃತಾನಾಗಮ ಅದ್ಭುತಾಗಮ, ಮಾರಣತಂತ್ರವೆಂದು ವಿಮಲಾಗಮದಾರು ಭೇದಂಗಳು.

ಸ್ಥಿರಸಂಹಿತೆ, ಸ್ಥಾಣುಸಂಹಿತೆ, ಮಹಂತಸಂಹಿತೆ, ನಂದಿಸಂಹಿತೆ, ನಂದಿಕೇಶ್ವರ ಸಂಹಿತೆ, ಏಕಪಾದ ಪುರಾಣ, ಶಂಕರಾಗಮ, ನೀಲಭದ್ರತಂತ್ರ, ಶಿವಭದ್ರಾಗಮ, ಕಲಾಭೇದಾಗಮ, ಶ್ರೀ ಮುಖಾಗಮ, ಶಿವಶಾಸನಾಗಮ, ಶಿವಶೇಖರಾಗಮ, ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು.

ಚತುರ್ಮುಖತಂತ್ರ, ಮಲಯತಂತ್ರ, ಮಹಾಯೋಗ, ಸಂಸ್ತೋಭಾಗಮ, ಪ್ರತಿಬಿಂಬಾಗಮ, ಅರ್ಥಾಲಂಕಾರ, ವಾಯುವ್ಯತಂತ್ರ, ಕೌಟಿಲತಂತ್ರ, ತುಟನಿಲಕರ, ತುಲಾವೃತ್ತ, ತುಲಾಯೋಗ, ಕುಟ್ಟಿಮತಂತ್ರ, ವರ್ಗಶೇಖರ, ಮಹಾವಿದ್ಯೆ, ಮಹಾಸೌರವೆಂದು ಬಿಂಬಾಗಮದ ಹದಿನೈದು ಭೇದಂಗಳು.

ಕವಚಾಗಮ, ವರಾಹತಂತ್ರ, ಪಿಂಗಳಮತ, ಪಾಶಬಂಧಸಂಹಿತೆ, ದಂಡಧರ ತಂತ್ರ, ಕುಶತಂತ್ರ, ಧನುಃಧಾರಿಣಿ, ಶಿವಜ್ಞಾನ, ವಿಜ್ಞಾನ, ತ್ರಿಕಾಲಜ್ಞಾನ, ಆಯುರ್ವೇದ, ಧನುರ್ವೇದ, ಸರ್ಪದಂಷ್ಟ್ರವಿಭೇದನ, ಸಂಗೀತ, ಭರತ, ಆತೋದ್ಯವೆಂದು ಪ್ರೋದ್ಗೀತಾಗಮದ ಷೋಡಶ ಭೇದಂಗಳು.

ಲಲಿತ, ಲಲಿತೋತ್ತರ, ಕೌಮಾರತಂತ್ರ ವಿಘ್ನೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು.

ಸಾರೋತ್ತರ, ದೇವೇಶೋಕ್ತ, ಕಾಲಭೇದ, ಕಶಿಮಂಡಲವೆಂದು ಸಿದ್ಧಾಗಮದ ನಾಲ್ಕು ಭೇದಂಗಳು.

*ಲಿಂಗಾಧ್ಯಕ್ಷ, ಸುರಾಧ್ಯಕ್ಷ, ಶಂಕರತಂತ್ರ, ಮಹೇಶ್ವರಾಗಮ. ಅಸಂಖ್ಯತಂತ್ರ, ಅನಿಲಾಗಮ, ದ್ವಂದ್ವಾಗಮ, ಶಾಂತಾಗಮದೇಳು ಭೇದಂಗಳು.*

*ಮಾತಂಗತಂತ್ರ. ಯಕ್ಷಿಣೀಶಾಸ್ತ್ರ, ಪದ್ಮಾಗಮ, ಪೌಷ್ಕರ, ಸುಪ್ರಯೋಗ,* ಹಂಸಾಗಮ, ಸಾಮಾನ್ಯಾಗಮವೆಂದು ಪಾರಮೇಶ್ವರಾಗಮದೇಳು ಭೇದಂಗಳು.

ಗರುಡಾಗಮ, ನೈರುತ್ಯಾಗಮ, ನೀಲತಂತ್ರ, ರೂಕ್ಷಾಗಮ, ಭಾನಾಗಮ, ವೈಕ್ರಮಾಗಮ, ಬುದ್ಧಾಗಮ, ಪ್ರಬುದ್ಧಾಗಮ, ಕಾಲತಂತ್ರವೆಂದು, ಅರಣಾಗಮದ, ನವಭೇದಂಗಳು.

ವಾತೂಲ, ಉತ್ತರವಾತೂಲ, ಕಾಲಜ್ಞಾನ, ಪರೋಚಿತ, ಸರ್ವಾಗಮ, ಸರ್ವೇಷ್ಟಾಗಮ, ಶ್ರೀಷ್ಠಾಗಮ, ನಿತ್ಯಾಗಮ, ಶುದ್ಧಾಗಮ, ಮಹಾನಾಗಮ, ವಿಶ್ವಾಸಾಗಮವೆಂದು ವಾತೂಲಾಗಮದ ದ್ವಾದಶಭೇದಂಗಳಕ್ಕುಂ. ೧೯೯

ಆಗಮ ಪ್ರತಿಪಾದ್ಯ :

ಬಳಿಕ ಸಕಲಾಗಮಂಗಳಲ್ಲಿಯು ಕ್ರಿಯಾಪಾದ, ಚರ್ಯಾಪಾದ, ಯೋಗಪಾದ ಜ್ಞಾನಪಾದವೆಂಬ ನಾಲ್ಕು ಪಾದಂಗಳುಂ, ಪತಿ, ಕುಂಡಲಿನಿ, ಮಾಯೆ, ಪಶು, ಪಾಶ, ದೀಕ್ಷೆಯೆಂಬ ಷಟ್ಪದಾರ್ಥಂಗಳುಂ.

ಗುರುಮುಖದಿಂ ನಿರ್ಗತಮಾದ ಜ್ಞಾನವೆಂಬ, ಪತ್ಯಾದಿರೂಪ ಜ್ಞೇಯವೆಂಬ, ಲಿಂಗಾರ್ಚಲಕ್ಷಣಮಾದನುಷ್ಠಯುವೆಂಬ, ಭಸ್ಮಧಾರಣಾತ್ಮಕಮಾದಧೀಕೃತವೆಂಬ, ಶಿವಮಂತ್ರರೂಪ ಸಾಧನವೆಂಬ, ಶಿವಸಮಾನತಾ ಮುಕ್ತಿರೂಪ ಸಾಧ್ಯವೆಂಬವಾರು ಪದಾರ್ಥಂಗಳುಂ ಪ್ರತಿಪಾದ್ಯಂಗಳಕ್ಕುಂ. ೨೦೦

ಪಾದಾದಿ ವಿಷಯ :

ಬಳಿಕ್ಕವರಲ್ಲಿ ಮೊದಲು ಕ್ರಿಯಾಪಾದದೊಳಾತ್ಮಂಗೆ ಪಶುತ್ವಕ್ಷಯ, ಶಿವತ್ವಾಭಿವ್ಯಕ್ತಿ, ನಿತ್ಯಾದಿ...ರ್ಮಾಧಿಕಾರಿತ್ವಂಗಳಂ ಸಂಪಾದಿಪುದೇ ಲಕ್ಷಣಮಾಗಿ, ಶಿವನ ಕ್ರಿಯಾ ಶಕ್ತಿರೂಪಮಾದುದೇ ದೀಕ್ಷೆಯಹುದಾ ದೀಕ್ಷಾವಿಶೇಷಯುಕ್ತಮಾದ ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಪ್ರವರಶೈವ, ಅಂತರಶೈವವೆಂಬವೇ ಸಪ್ತಶೈವಂಗಳವರಲ್ಲಿ ; ಶಿವನೇ ಅನಾದಿಶೈವನು. ಶಿವನ ಪಂಚವಕ್ತ್ರದಿಂ ದೀಕ್ಷಿತರಾದ ಕೌಶಿಕಾದಿ ಋಷೀಶ್ವರರೇ ಆದಿಶೈವರು. ಆ ಋಷಿಯ ವಂಶಜರಾಗಿ ದೀಕ್ಷಿತರಾದ ದ್ವಿಜರೇ ಮಹಾಶೈವರು, ಶಿವಸಂಸ್ಕಾರಿಗಳಾದ ಕ್ಷತ್ರಿಯರೇ ಅನುಶೈವರು. ಶಿವದೀಕ್ಷಾ ಸಂಪನ್ನರಾದ ಶೂದ್ರರೇ ಅವಾಂತರಶೈವರು, ಶಿವದೀಕ್ಷಾಯುಕ್ತರಾದ ಅಂಬಷ್ಟ ಕುಲಾಲಾದಿಗಳೇ ಪ್ರವರಶೈವರು, ದೀಕ್ಷಾನ್ವಿತರಾದುಳಿದ ಜಾತಿಗಳೇ ಅಂತರ ಶೈವವೆನಿಸಿಕೊಳ್ವಂತಿರ್ಕುಂ. ೨೦೧

## ಶೈವಭೇದ :

ಮತ್ತಮಾ ಶೈವವೇ ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತವೆಂದು ನಾಲ್ಕು ತೆರನಾಗಿರ್ಪುದವರಲ್ಲಿ ಶಕ್ತಿ ಪರವಾದುದೇ ವಾಮವೆನಿಸೂದು. ಭೈರವ ಪರ ವಾದುದೇ ದಕ್ಷಿಣವೆನಿಸೂದು. ಸಪ್ತಮಾತೃಕಾ ಪರವಾದುದೇ ಮಿಶ್ರವೆನಿಸೂದು, ಪರಶಿವ ಪರವಾದುದೇ ಸಿದ್ಧಾಂತವುಕ್ಕುಂ. ೨೦೨

ಬಳಿಕಾ ಶೈವಂಗಳಲ್ಲಿ ಮುಖ್ಯಮಾದ ಸಾಮಾನ್ಯ ಶೈವ, ಮಿಶ್ರಶೈವ, ಶುದ್ಧ ಶೈವ, ವೀರಶೈವವೆಂದು ಚತುರ್ವಿಧ ಶೈವಂಗಳವರಲ್ಲಿ. ೨೦೩

## ಸಾಮಾನ್ಯಶೈವ :

ಆವನಾನೋರ್ವನು ಶ್ರೀ ವಿಭೂತಿಧಾರಣಮಾತ್ರದಿಂ ಶುದ್ಧಾತ್ಮನಾಗಿ ಸ್ವಯಂ ಭುಲಿಂಗವನಾದೊಡಂ, ದೇವ, ದಾನವ, ಋಷಿ, ಮಾನವಾದಿ ಪ್ರತಿಷ್ಠಿತ ಲಿಂಗವನಾ ದೊಡಂ, ಕಾಣುತ್ತಲೆ ನಮಸ್ಕಾರ. ಪ್ರದಕ್ಷಿಣ, ಪೂಜಾದಿಕಮಂ ಯಥಾಶಕ್ತಿಯಿಂ ಮಾಡುತ್ತೆ, ಶಿವಭಕ್ತಜನವಾತ್ಸಲ್ಯ, ಶಿವಪೂಜಾರತಿ, ಶಿವಾರ್ಚನೆ, ಶಿವಾರ್ಥಮಾದ ವ್ಯಾಪಾರ, ಶಿವಕಥಾಶ್ರವಣೇಚ್ಛೆ, ಶಿವಧ್ಯಾನ, ಶಿವಾನುಕೂಲತೆ, ಪರಮ ಸಾತ್ವಿಕ ಮೆಂಬಷ್ಟವಿಧಭಕ್ತಿಯುಕ್ತನಾಗಿರ್ಪಾತನೇ ಸಾಮಾನ್ಯ ಶೈವನಪ್ಪಂ. ೨೦೪

## ಮಿಶ್ರಶೈವ :

ಬಳಿಕ ಪೀಠಸ್ಥಶಿವಲಿಂಗಪೂಜೆಯೊಡನೆ ವಿಷ್ಣು, ಉಮೆ, ಷಣ್ಮುಖ, ವಿಘ್ನೇಶ್ವರ ಸೂರ್ಯರೆಂಬೀ ಪಂಚಪೂಜೆಗಳಂ, ಮಿಕ್ಕ ಬ್ರಹ್ಮೇಂದ್ರಾದಿ ದೇವತಾರಾಧನೆಗಳಂ ಆಯಾಯ ಮಂತ್ರಂಗಳಿಂ ಮಾಡುತ್ತೆ, ಶಿವನು ಸರ್ವಾತ್ಮಕನೆಂಬ ಬುದ್ಧಿಯಿಂದವೂ, ವಿಷ್ಣ್ವಾದಿ ದೇವತೆಗಳೆಲ್ಲಂ ಶಿವಭಕ್ತರೆಂಬ ಭಾವನೆಯಿಂದವೂ ಸಮಾನಭಕ್ತಿಯುಕ್ತ ನಾಗಿರ್ಪಾತನೇ ಮಿಶ್ರಶೈವನಪ್ಪಂ. ೨೦೫

## ಶುದ್ಧ ಶೈವಲಕ್ಷಣ :

ಮತ್ತಮನಾದಿ ಶೈವನಾದ ಸದಾಶಿವನ ಸದ್ಯೋಜಾತಾದಿ ಪಂಚಮುಖದಿಂ ದೀಕ್ಷಿತರಾದ ಕೌಶಿಕ, ಕಾಶ್ಯಪ, ಭಾರದ್ವಾಜ, ಅತ್ರಿ, ಗೌತಮರೆಂಬ ಆದಿಶೈವರ ಗೋತ್ರಸಂಭವನಾಗಿ ಮಹಾಶೈವನೆನಿಪ ಶುದ್ಧ ಶೈವನೇ ವೇದಾಗಮ, ಪುರಾಣೇತಿ ಹಾಸ, ಸೂತ್ರಭಾಷ್ಯಾದಿ ಸಕಲಶಾಸ್ತ್ರ ಸಂಪನ್ನನಾಗಿ, ಸ್ಥೂಲ, ಸೂಕ್ಷ್ಮ, ಕಾರಣಂ ಗಳೆಂಬ ಶಿವಲಕ್ಷಣಂಗಳಂ. ಶುದ್ಧ ಮಿಶ್ರ ಸಂಕೀರ್ಣವೆಂಬ ಶಿವಸ್ವರೂಪಂಗಳಂ, ಶಿವಾಕರ್ಷಣಾದಿ ಸಕಲ ದೇವತಾಕರ್ಷಣಂಗಳಂ, ಲಿಂಗಪ್ರತಿಷ್ಠೆ ಮೊದಲಾದ ಸಮಸ್ತ ದೇವತಾ ಪ್ರತಿಷ್ಠೆಗಳಂ, ಲಿಂಗಸ್ಥಾಪನಾದಿ ಸಕಲದೇವತಾ ಸ್ಥಾಪನಂಗಳಂ,

ನಿತ್ಯೋತ್ಸವ, ಮಾಸೋತ್ಸವ, ರಥೋತ್ಸವಾದಿ. ಕ್ರಿಯೆಗಳಂ; ಪುಷ್ಪ,ಗಂಧ, ಮಧು, ಇಕ್ಷು, ನಾಳಿಕೇರ, ಕ್ಷೀರ, ರಜನೀಚೂರ್ಣ, ಸರ್ಪಿ ತೈಲ. ಜಲ, ವನವೆಂಬ ಶಿವನ ಏಕಾದಶ ವಿಧೋತ್ಸಾಹಂಗಳಂ ಲೇಸಾಗೆ ವಿಚಾರಂಗೆಯ್ದು ೨೦೬

ಬಳಿಕ ಸೂರ್ಯನಿಂದಾರೋಗ್ಯಾದಿಗಳು, ಇಂದ್ರನಿಂ ಸೌಭಾಗ್ಯಾದಿಗಳು, ಅಗ್ನಿಯಿಂದೈಶ್ವರ್ಯಾದಿಗಳು, ಯಮನಿಂ ಪಿತೃಯಾನಾದಿಗಳು, ವಾಯುವಿನಿಂ ಬಲಾದಿಗಳು, ದುರ್ಗಿಯಿಂ ವಿಜಯಾದಿಗಳು, ಸರಸ್ವತಿಯಿಂ ವಾಕ್ಸಿದ್ಧ್ಯಾದಿಗಳು, ಲಕ್ಷ್ಮಿಯಿಂ ಸಂಪದಾದಿಗಳು, ಷಣ್ಮುಖನಿಂದಿಷ್ಟ ಸಿದ್ಧ್ಯಾದಿಗಳು. ಚಂದ್ರನಿಂ ಕೀರ್ತಿ ಚಿತ್ತಶುದ್ಧ್ಯಾದಿಗಳು, ಬ್ರಹ್ಮನಿಂ ಬ್ರಾಹ್ಮಣ್ಯ ಶಾಂತ್ಯಾದಿ ಸದ್ಗುಣಂಗಳು, ವಿಷ್ಣುವಿನಿಂ ದೇವಯಾನ ಮುಮುಕ್ಷುತ್ವಾದಿಗಳು, ವಿಘ್ನೇಶ್ವರನಿಂ ಕಾರ್ಯಸಿದ್ಧಿ ಗುರುಭಕ್ತ್ಯಾದಿಗಳು, ಶ್ರೀ ಗುರುವಿನಿಂ ಶ್ರವಣಾದಿ ಜ್ಞಾನಸಾಧನಂಗಳು, ಶ್ರೀ ಪಾರ್ವತಿಯಿಂ ಸಂಪದ ವಿವೇಕಾದಿಗಳು, ಶ್ರೀ ಶಿವನಿಂ ಭೋಗಜ್ಞಾನ ಮೋಕ್ಷಾದಿಗಳೆಲ್ಲಂ ಸಕಾಮನಿಷ್ಕಾಮ ಕ್ರಿಯಾಭೇದದಿಂ ಸಿದ್ಧಿಸುತ್ತಿಹವೆಂಬುದಂ ಪರಾಮರ್ಶಂಗೆಯ್ದು ೨೦೭

## ವಿಭೂತಿ ಭೇದಂಳು :

ಮತ್ತಮಾ ಸಮಸ್ತ ಶೈವ ಕ್ರಿಯೆಗಳಿಗೆ ಶ್ರೀ ಮದ್ವಿಭೂತಿ ಧಾರಣವೇ ಮುಖ್ಯ ವಹುದಾಗಿ ತದ್ವಿಧಾನವಂ ಶುದ್ಧಶೈವನರಿಯಬೇಕಿಲ್ಲಿ : ಸದ್ಯೋಜಾತಾದಿ ಪಂಚಬ್ರಹ್ಮ ಪೃಥುವ್ಯಾದಿ ಪಂಚಭೂತ, ನಿವೃತ್ಯಾದಿ ಪಂಚಕಲೆಗಳಿಂ, ಕ್ರಮದಿಂ ಕಪಿಲವರ್ಣದ ನಂದೆ, ಕೃಷ್ಣವರ್ಣದ ಭದ್ರೆ, ರಕ್ತವರ್ಣದಸುರಭಿ, ಶ್ವೇತವರ್ಣದ ಸುಶಿಲೆ,ಚಿತ್ರವರ್ಣದ ಸುಮನೆಯೆಂಬ ಕೃಶ್ಯಾಂಗಾದಿ ದೋಷವಿಲ್ಲದ ಸಲಕ್ಷಣವಾದ ಪಂಚಗೋವುಗಳುದಿಸಿದವವರಲ್ಲಿ, ನವೀನವಾದ, ದುರ್ಗಂಧಾದಿ ದೋಷವಿಲ್ಲದ ಗೋಮಯಂಗಳಲ್ಲಿ ಪ್ರಣವಪೂರ್ವಕವಾದ ಸದ್ಯೋಜಾತಾದಿ ಪಂಚಬ್ರಹ್ಮಮಂತ್ರ ಕ್ರಮವಿಡಿದು; ಗ್ರಹಣ, ಕಬಳನ, ಶೋಷಣ, ದಹನ, ಶೋಧನವೆಂಬ ಪಂಚಕ್ರಿಯೆಯಿಂ; ಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆಗಳೆಂಬ ಪಂಚವಿಧ ವಿಭೂತಿ ಗಳ್ಕ್ರಮದಿಂ ಜನಿಸಿ, ಐಶ್ವರ್ಯಕಾರಣತ್ವದಿಂ, ಸರ್ವಾಭಾಸಕತ್ವದಿಂ, ಸರ್ವಾಘ ಭತ್ಸ್ರ್ಯನತ್ವದಿಂ,ಅಪದಾತ್ ಕಾರಣತ್ವದಿಂ,ಭೂತಾದಿಭೀತಿ ರಕ್ಷಣತ್ವದಿಂದಾಯಾಯ ಪೆಸರ್ವಡೆದು ಜಗದ್ಧಿತಾರ್ಥವಾಗಿಪ್ಪವು. ೨೦೮

ಬಳಿಕಾ ನಂದೆ ಮೊದಲಾದೈದು ಗೋವರ್ಣಕ್ರಮವಾಂತ ಭೂತಾದಿಗಳೈದು ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರಾಯಶ್ಚಿತ್ತ, ಮುಕ್ತಗಳೆಂಬ ಪಂಚಕ್ರಿಯೆಗಳಿಗೆ ಪರಿವಿಡಿದು ಯೋಗ್ಯವಾಗಿರ್ಪವು ಆ ಸಮಸ್ತ ಭಸಿತಂಗಳಾವಾವವೆಂತೆಂದೊಡೆ. ಕಲ್ಪ, ಅನುಕಲ್ಪ, ಉಪಕಲ್ಪ, ಅಕಲ್ಪವೆಂದು ನಾಲ್ಕು ತೆರನಾಗಿರ್ಪವವರಲ್ಲಿ ಪೂರ್ವೋಕ್ತ ಗ್ರಹಣ ಕಬಳನಾದಿ ವಿಧಿಯಿಂ ಮಾಡಿದುದೇ ಕಲ್ಪವೆನಿಸೂದು. ವನದೊಳೊಣಗಿದ

ಗೋಮಯಮಂ ಮತ್ತೆ ಚೂರ್ಣೀಕರಿಸಿ ದಹಿಸಿ ಮಾಡಿಕೊಂಬುದೇ ಅನುಕಲ್ಪ ವೆನಿಸೂದು ಮೊದಲು ದಹನವಾಗಿರ್ದುದನೆ ಬಳಿಕವಸ್ತ್ರದಿಂ ಶೋಧಿಸಿ ಗೋಮೂತ್ರದಿಂ ಕಲಸಿ ಪಿಂಡಮಂಮಾಡಿ ಪೂರ್ವೋಕ್ತವಿಧಿಯಿಂ ಪಚಿಸಿ ಮಾಡಿ ಕೊಂಬುದೇ ಉಪಕಲ್ಪವೆನಿಸೂದು. ಅನ್ಯರಿಂ ಮಾಡಿದುದೇ ಅಕಲ್ಪವೆನಿಸೂದು. ಇವರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ್ಗೆ ಅಗ್ನಿಹೋತ್ರಜ ಭೂತಿ ಯೋಗ್ಯವಾಗಿ ಹುದು. ಗೃಹಸ್ಥಾಶ್ರಮಿಗಳಿಗೆ ವಿರಜಾನಲಾಗ್ನಿ ಪಾಷಾಣಾಗ್ನಿಗಳಿಂದುದಿಸಿದ ಭಸ್ಮ ಯೋಗ್ಯವಾಗಿಹುದು. ಬ್ರಹ್ಮಚಾರಿಗಳಿಗೆ ಸಮಿದಗ್ನಿಯಿಂದಾದ ಭಸಿತ ಯೋಗ್ಯ ವಾಗಿಹುದು. ಶೂದ್ರರಿಗೆ ಶ್ರೋತ್ರೀಯಾಗಾರದ ಪಚನಾಗ್ನಿಯಿಂದೊಗೆದ ಭೂತಿ ಯೋಗ್ಯವಾಗಿಹುದು. ಉಳಿದ ಜಾತಿಗಳ್ಗೆ ದಾವಾಗ್ನಿಯಿಂದುತ್ಪನ್ನವಾದ ಭಸ್ಮ ಯೋಗ್ಯವಾಗಿಹುದು. ಯತಿಗಳಿಗೆಲ್ಲಾಯೆಡೆಯ ವಿಭೂತಿ ಯೋಗ್ಯವಾಗಿಹುದು. ಆತ್ಯಾಶ್ರಮಿಗಳ್ಗೆ ಸ್ಮಶಾನ ಭಸ್ಮ ಯೋಗ್ಯವಾಗಿಹುದು. ಸಮಸ್ತರ್ಗೆಯುಂ ದೇವಾ ಲಯಸ್ಥಿತ ಭಸಿತವೇ ಯೋಗ್ಯವಾಗಿಹುದು. ೨೦೯

ವಿಭೂತಿ ಧಾರಣ :

ಮತ್ತಮಾ ವಿಭೂತಿಗೆ ಸ್ನಾನ, ಉದ್ಧೂಳನ, ಧಾರಣವೆಂಬ ಮೂರು ವಿಧ ಗಳುಂಟವನಾಚರಿಸುವಾತನು, ಮೊದಲು ಹಸ್ತ ಪಾದ ಪ್ರಕ್ಷಾಲನಂ ಗೆಯ್ದು, ಸುಸ್ಥಲದಲ್ಲಿ ಸ್ಥಾಪನದಿಂ ಕುಳ್ಳಿರ್ದು, ಪ್ರಾಣಾಯಮತ್ರಯಮಂ ಮಾಡಿ, ಮೇಲೆ ಭಸ್ಮಸ್ನಾನಂಗೆಯ್ಯುತ್ತಿದ್ದೇನೆಂದು ಸಂಕಲ್ಪಿಸಿ, ಬಳಿಕ ದೃಢಮಾದ ಚೂತ, ಬಿಲ್ವ ಅಶೋಕೆ, ಶಿಲೆ, ವಸ್ತ್ರಾದಿಗಳಿಂ ರಚಿತಮಾದ ಆಧಾರದಲ್ಲಿ ಸುಸ್ಥಿತಮಾಗಿರ್ದು, ಶ್ರೀಮದ್ವಿಭೂತಿಯಂ ಕುರಂಗಮುದ್ರೆಯಿಂ ಸದ್ಯೋಜಾತಾದಿ ಪಂಚಬ್ರಹ್ಮ ಮಂತ್ರಪೂರ್ವಕಮಾಗಿ ತೆಗೆದು ವಾಮಹಸ್ತದಲ್ಲಿರಿಸಿ, ನಮಸ್ಕಾರಮಂತ್ರವನುಚ್ಚರಿಸಿ, ಮೇಲೆ ದಕ್ಷಿಣ ಹಸ್ತದಿಂ ಮುಚ್ಚಿ, ಬಲದ ತೊಡೆಯ ಮೇಲಿಟ್ಟು ಮೂಲ ಮಂತ್ರದಿಂದೇಳುವೇಳೆಮಂತ್ರಿಸಿ, ಅಲ್ಲದೆ, 'ಅಗ್ನಿರಿತಿಭಸ್ಮ' ಎಂಬುದು ಮೊದಲಾದ ಮಂತ್ರೋಚ್ಚಾರಣದಿಂದಾದರೂ ಮಂತ್ರಿಸಿ, ಬಳಿಕ ಮಾನಸ್ತೋಕೇತಿ ಮಂತ್ರ ದಿಂದೆತ್ತಿ. ಶಿರಸ್ಸು, ಮುಖ, ಹೃದಯ, ಗುಹ್ಯ, ಪಾದ, ಸರ್ವಾಂಗವೆಂಬ ಆರು ಸ್ಥಾನಂಗಳಲ್ಲಿಯೆ ಆಯಾಯ ಮಂತ್ರೋಚ್ಚಾರಣದಿಂ ಕ್ರಮದಿಂದ ಈಶಾನಾದಿ ಪಂಚಬ್ರಹ್ಮ ಪ್ರಣವಮಂತ್ರಂಗಳಿಂ, ಸೃಷ್ಟಿ, ಸ್ಥಿತಿ, ಸಂಹಾರಕ್ರಮವನರಿದು ಸಂಪ್ರೋಕ್ಷಣಂಗೆಯ್ವುದೆ ಸ್ನಾನಮಕ್ಕುಂ ೨೧೦

ಮತ್ತಮಾ ಶಿರಸ್ಸು ಮೊದಲಾದಾರು ಸ್ಥಾನಂಗಳಲ್ಲಿಯೇ ಆಯಾಯ ಮಂತ್ರೋಚ್ಚಾರಣದಿಂ ಕ್ರಮದಿಂದೈದು ವೇಳೆ, ನಾಲ್ಕುವೇಳೆ, ಎಂಟುವೇಳೆ, ಹದಿಮೂರುವೇಳೆ, ಒಂದುವೇಳೆ ಅನುಲೇಪನಂಗೆಯ್ವುದೇ ಉದ್ಧೂಳನಮಕ್ಕುಂ,

ಬಳಿಕಲ್ಲಿ ಬ್ರಾಹ್ಮಣರ್ಗೆ, ಚತುರಾಶ್ರಮಿಗಳ್ಗೆ, ಸರ್ವಾಂಗೋದ್ಧೂಳನಂ ಸಲ್ವುದು, ಕ್ಷತ್ರಿಯರ್ಗೆ ಮುಖಮಾತ್ರಮಂ ಬಿಟ್ಟು ಸರ್ವಾಂಗೋದ್ಧೂಳನಂ ಸಲ್ವುದು. ವೈಶ್ಯರ್ಗೆ ಲಲಾಟಮಾತ್ರೋದ್ಧೂಳನಂಸಲ್ವುದು. ಶೂದ್ರರ್ಗೆ ಧಾರಣಮೇಅಕ್ಕುಂ. ೨೧೧

ಬಳಿಕ ಸುಶೀತಳಮಾದ, ಮಂತ್ರೋದಕ ಮಿಶ್ರಿತಮಾದ ವಿಭೂತಿಯಂ ಮೂಲಮಂತ್ರ, ತ್ರಿಯಾಯುಷಮಂತ್ರ, ತ್ರಿಯಂಬಕ ಮಂತ್ರಂಗಳನುಚ್ಚರಿಸುತ್ತಂ ಶಿವಮೂರ್ತಿ ಧ್ಯಾನಯುಕ್ತನಾಗಿ ತ್ರಿಪುಂಡ್ರಧಾರಣಸ್ಥಳಂಗಳಲ್ಲಿ ಧರಿಸಬೇಕು ಆ ಸ್ಥಾನಂಗಳಾವುವೆಂತೆಂದೊಡೆ: ಮೂರ್ಧ್ನಿ, ಲಲಾಟ, ಕರ್ಣದ್ವಯ, ನೇತ್ರದ್ವಯ ಘ್ರಾಣ, ಮುಖ, ಬಾಹುದ್ವಯ, ಭುಜದ್ವಯ, ಮಣಿಬಂಧದ್ವಯ, ಸ್ಥನದ್ವಯ, ವಕ್ಷ, ಉದರ, ಪಾರ್ಶ್ವದ್ವಯ, ನಾಭಿ, ಮೇಢ್ರ, ಪಾಯು, ಪೃಷ್ಟ, ಊರುದ್ವಯ, ಜಾನುದ್ವಯ, ಜಂಘಾದ್ವಯ, ಪಾದದ್ವಯಮೆಂಬವೆ ಮೂವತ್ತೆರಡು ಸ್ಥಾನಂಗಳು. ಬಳಿಕ ಶಿರಸ್ಸು, ಭಾಳ, ಕರ್ಣಯುಗ್ಮ, ಓಷ್ಠದ್ವಯ, ಕಂಠ, ಬಾಹುಯುಗ್ಮ, ಭುಜ ಯುಗಳ, ಮಣಿಬಂಧದ್ವಯ, ಹೃದಯ, ಉಪರ, ನಾಭಿಯೆಂಬವೆ ಹದಿನಾರು ಸ್ಥಾನಂಗಳು. ಬಳಿಕ ಮಸ್ತಕ, ಅಳಿಕ, ಗ್ರೀವ. ಬಾಹುದ್ವಯ, ಹೃದಯ ನಾಭಿ, ಪೃಷ್ಟವೆಂಬವೆ ಎಂಟು ಸ್ಥಾನಂಗಳೆನಿಸಿರ್ಪವವರಲ್ಲಿ ಶಿರಸ್ಸು, ಲಲಾಟ, ಶ್ರೋತ್ರ ದ್ವಯ, ಕಂಠ, ಭುಜದ್ವಯ, ವಕ್ಷ, ಪೃಷ್ಠ, ನಾಭಿ, ಸ್ಕಂದವೆಂಬ ಏಕಾದಶ ಸ್ಥಾನಂ ಗಳೇ ಮುಖ್ಯವಾಗಿರ್ಪವವರಲ್ಲಿ, ಸ್ಥಿರಪದ್ಮಾಸನಾಸೀನರಾದ, ಶುದ್ಧಸ್ಫಟಿಕ ಸನ್ನಿಭರಾದ, ಕಪರ್ದ, ಚಂದ್ರಕಳೆ, ಪ್ರಸನ್ನವದನ ನೀಲಗ್ರೀವ. ಕ್ಷೌಮಾಂಬರ, ಸರ್ಪಾಭರಣಂಗಳುಳ್ಳ, ಮೃಗಿ, ಟಂಕ, ವರದಾಭಯ ಪಾಣಿಗಳಾದ; ಸರ್ವಲಕ್ಷಣ ಸಂಪನ್ನರಾದ ಪರಮಾತ್ಮ, ಶಿವ, ಮಾಹೇಶ್ವರ. ರುದ್ರ, ಶ್ರೀಕಂಠ, ಶಂಭು, ಈಶ್ವರ, ಮಹಾದೇವ, ಪಶುಪತಿ, ಶಂಕರ, ವೃಷಧ್ವಜರೆಂಬ ರುದ್ರರಾ ಶಿರಸ್ಸು ಮೊದಲಾ ದೇಕಾದಶ ಸ್ಥಾನಕ್ರಮದಿಂ ಸ್ಮರಿಸುತ್ತವೆ ತ್ರಿಪುಂಡ್ರಮಂ ಧರಿಸೂದೇ ಧಾರಣ ಮಕ್ಕುಂ. ೨೧೨

## ವಿಭೂತಿ ಧಾರಣಕ್ರಮ :

ಬಳಿಕಾ ಲಲಾಟದಲ್ಲಿ ತ್ರಿಪುಂಡ್ರಧಾರಣಮಂ, ದಕ್ಷಿಣಕರದ ಮಧ್ಯಮೆ ಅನಾಮಿಕೆ, ಅಂಗುಷ್ಟಮೆಂಬಂಗುಲಿತ್ರಯದಿಂದನುಲೋಮದಿಂದಾದರೂ; ಅಲ್ಲವೆ, ಅಕಾರವೇ ಅನಾಮಿಕೆ, ಉಕಾರವೇ ಮಧ್ಯಮೆ, ಮಕಾರವೇ ತರ್ಜನಿಯೆಂಬ ಭಾವನೆಯಿಂದಾ ಮಧ್ಯಮಂಗುಲಿತ್ರಯದಿಂದಾದರೂ ; ಅಗ್ನಿತ್ರಯ, ಅಕ್ಷರತ್ರಯ, ಗುಣತ್ರಯ, ಲೋಕತ್ರಯ, ಆತ್ಮತ್ರಯ, ವೇದತ್ರಯ, ಕಾಲತ್ರಯ, ರುದ್ರ-ಈಶ್ವರ-ಸದಾಶಿವರೆಂಬ ದೇವತಾತ್ರಯಾತ್ಮಕಮೆಂಬನುಸಂಧಾನ ಪೂರ್ವಕವಾಗಿ ತ್ರಿರೇಖೆಗಳಂ ಷಡಂಗುಲ ಪ್ರಮಾಣವಾಗಿ, ನೇತ್ರಯುಗ್ಮ, ಪ್ರಮಾಣವಾಗಿ

ಲಲಾಟಾಂತವಾದರೂ, ಕಠಿಣ, ಮಲಿನ, ವಕ್ರ, ಭಿನ್ನ, ದೂರ, ವಿರಳೆಯೆಂಬಾರು ದೋಷವಿಲ್ಲದೆ; ನಯ, ಶುಭ್ರ, ನೇರ, ಸಾಂದ್ರ, ಸಮೀಪ, ಭಿನ್ನವೆಂಬಾರು ಲಕ್ಷಣಯುಕ್ತವಾಗಿ ಧರಿಸೂದು. ಅಲ್ಲಿ ಬ್ರಾಹ್ಮಣರಿಗೆ ಆರಂಗುಲ ಪ್ರಮಾಣ, ಕ್ಷತ್ರಿಯರ್ಗೆ ನಾಲ್ಕಂಗುಲ ಪ್ರಮಾಣ, ವೈಶ್ಯರ್ಗೆರಡಂಗುಲ ಪ್ರಮಾಣ, ಶೂದ್ರರಿಗೊಂದಂಗುಲ ಪ್ರಮಾಣದಿಂ ತ್ರಿಪುಂಡ್ರಮಂ ಧರಿಪುದೇ ಧಾರಣಮಕ್ಕುಂ. ಬಳಿಕ್ಕಲ್ಲಿ ಗೃಹಸ್ಥರು, ಸ್ತ್ರೀಯರುಗಳು ತ್ರಿಸಂಧ್ಯೆಯಲ್ಲಿಯು ಜಲಮಿಶ್ರಿತವಾದ ಶ್ರೀವಿಭೂತಿಯನೆ ಧರಿಸಬೇಕು. ಯತಿಗಳೆಲ್ಲಾ ಕಾಲದಲ್ಲಿಯು ಜಲಮಿಶ್ರಿತವಿಲ್ಲದೆ ವಿಭೂತಿಯಂ ಧರಿಸಬೇಕು. ವಾನಪ್ರಸ್ಥರು, ಕನ್ನಿಕೆಯರು, ದೀಕ್ಷಾಹೀನ ಮನುಷ್ಯರು ಮಧ್ಯಾಹ್ನ ಪರಿಯಂತರಂ ಜಲಮಿಶ್ರಿತವಾಗಿ ಮೇಲೆ ಕೇವಲ ವಿಭೂತಿಯನೆ ಧರಿಸಲ್ವೇಳ್ಕುಂ.

ಬಳಿಕ್ಕಂತು ಸ್ನಾನ, ಉದ್ಧೂಳನ, ಧಾರಣಕ್ರಮದಿಂ ವಿಧ್ಯುಕ್ತಮಾಗಿ ಶ್ರೀಮದ್ವಿಭೂತಿಯಂ ಧರಿಸೂದೇ ಶಿರೋವ್ರತವೆಂದು, ಪಾಶುಪತವ್ರತವೆಂದು ಪೆಸರ್ವಡೆದು ದೋಷರೋಗಾದಿ ಭೀತಿಯಂ ಬಿಡಿಸಿ, ಭೋಗ ಮೋಕ್ಷಪ್ರದಮೆಂದು ವೇದಾಗಮ ಪುರಾಣಾದಿಗಳಲ್ಲಿ ಪ್ರಸಿದ್ಧವಹುದಾಗಿಯುಂ, ಸಮಸ್ತ ಮನು ಮುನಿ ದೇವತೆಗಳೆಲ್ಲರೂ ಮಹಾವಿಶಿಷ್ಟವೆಂದು ಧರಿಸಿದರಾಗಿಯುಂ, ರಕ್ಷಣಾರ್ಥ, ಮಂಗಲಾರ್ಥ, ಪವಿತ್ರಾರ್ಥ, ಶಿವಾರ್ಥಮಾಗಿಯುಂ, ಬ್ರಾಹ್ಮಣಾದಿ ವರ್ಣಗಳುಂ, ಬ್ರಹ್ಮಚರ್ಯಾದ್ಯಾಶ್ರಮಗಳುಂ, ಸಾಂಖ್ಯಾದಿ ಮತಾಭಿಮಾನಿಗಳುಂ ಸರ್ವಥಾ ಶ್ರೀಮದ್ವಿಭೂತಿಯನೆ ಧಾರಣಂಗೆಯಲ್ವೇಕ್ಕುದೆಂದು ವಿಶ್ವಾಸಿಸಿ. ೨೧೩

ರುದ್ರಾಕ್ಷ ಧಾರಣ ಕ್ರಮ :

ಬಳಿಕ್ಕಂತು ಭಸ್ಮಧಾರಣಾನಂತರದಲ್ಲಿ ರುದ್ರಾಕ್ಷಧಾರಣವೇ ಕರ್ತವ್ಯಮಪ್ಪುದಾಗಿ, ತದ್ವಿಧಾನಮಂ ಶುದ್ಧಶೈವನರಿಯಬೇಕಲ್ಲಿ, ತ್ರಿಪುರದಹನ ಲೀಲಾ ಸಮಯದೊಳೀಶ್ವರನ ಚಂದ್ರಸೂರ್ಯಾಗ್ನಿ ಲೋಚನತ್ರಯದ ಜಲಬಿಂದುಗಳಲ್ಲಿ ಕ್ರಮದಿಂ, ಶುಭ್ರವರ್ಣದ ಷೋಡಶ ವಿಧಮಾದ, ರಕ್ತವರ್ಣದ ದ್ವಾದಶವಿಧಮಾದ, ಕೃಷ್ಣವರ್ಣದ ದಶಪ್ರಕಾರಮಾದ ರುದ್ರಾಕ್ಷಿಗಳು ತಮ್ಮ ನಾಮೋಚ್ಚಾರಣ ದರ್ಶನ ಸ್ಪರ್ಶನಧಾರಣ ಮಾತ್ರದಿಂದುತ್ತರೋತ್ತರಮಾದಧಿಕ ಪುಣ್ಯಂಗಳನೀವುದರಿಂದ, ಲೋಕೋಪಕಾರಮಾಗಿ ಜನಿಸಿದವಾ ರುದ್ರಾಕ್ಷಿಗಳಲ್ಲಿ ಸರಂಗೆಯ್ವುದಕ್ಕೆಯೋಮಣಿಗಳುನ್ನತ ಸ್ಥಾನಗಳೇ ಮುಖಂಗಳು; ನಿಮ್ನ ಸ್ಥಾನಂಗಳೇ ಪೃಷ್ಠಂಗಳಹವು. ಮುಖದ ಗಣನೆಯನರಿವುದಕ್ಕೆ ರೇಖೆಗಳೇ ಮುಖಂಗಳಪ್ಪವು. ಆ ಮಣಿಗಳ ಮೂಲವೇ ಬ್ರಹ್ಮನು, ನಾಳವೇವಿಷ್ಣು, ಮುಖವೇ ರುದ್ರನು, ಕೇಸರಂಗಳೇ ಸಕಲ ದೇವತೆಗಳವರ ಸಲ್ಲಕ್ಷಣಂಗಳಂ ಪರೀಕ್ಷಿಸಿ, ಮೇಲೆ ಪ್ರಕ್ಷಾಲನಾದಿ ವಿಧಿಗಳಿಂ ಸರಂಗೊಳಿಸಿ, ಬಳಿಕ ತಾನು ಸ್ನಾನಾದಿಗಳಿಂ ಶುಚಿಯಾಗಿ ಕುಳ್ಳಿರ್ದು, ಮರಳಿ ಸಮಸ್ತ ಪಾಪಕ್ಷಯಾರ್ಥಮಾಗಿ ಶಿವಜ್ಞಾನ ಸಿದ್ಧ್ಯರ್ಥಮಾಗಿ ಧರಿಸುತ್ತಿದ್ದೇನೆಯೆಂದು ಸಂಕಲ್ಪಿಸಿ. ೨೧೪

ಬಳಿಕ ಶಿಖೆಗೆ ಏಕಮುಖದ ಮಣಿಯೊಂದು ; ಶಿರಕ್ಕೆರಡು, ಮೂರು, ಹತ್ತು ಮುಖದ ಮಣಿಗಳಲ್ಲಿ ಮೂರು ; ಮೂರ್ಧ್ನಕ್ಕೆ ಹನ್ನೊಂದು ಮುಖದ ಮಣಿ ಮುವತ್ತಾರು ; ಕರ್ಣಗಳಿಗೈದೇಳು ಹತ್ತು ಮುಖದ ಮಣಿಗಳಲ್ಲೊಂದೊಂದು ; ಕಂಠಕ್ಕೆಂಟು ಮುಖದ ಮಣಿ ಮೂವತ್ತೆರಡು ; ಉರಕ್ಕೆ ನಾಲ್ಕು ಮುಖದ ಮಣಿಗಳೈವತ್ತು. ಬಾಹುದ್ವಯಕ್ಕೆ ಹದಿಮೂರು ಮುಖದ ಮಣಿ ಹದಿನಾರು ಹದಿನಾರು ; ಮಣಿಬಂಧ ಯುಗಕ್ಕೆ ಒಂಭತ್ತು ಮುಖದ ಮಣಿ ಹನ್ನೆರಡು, ಹನ್ನೆರಡು; ಯಜ್ಞೋಪವೀತಕ್ಕೆ ಹದಿನಾಲ್ಕು ಮುಖದ ಮಣಿ ನೂರೆಂಟು ; ಉದರ ಬಂಧಕಾನಮುಖದ ಮಣಿಯಾದರೂ ಐವತ್ತನಾಲ್ಕನು ಆಯಾಯ ಮಂತ್ರ ಪೂರ್ವಕವಾಗಿ ಧರಿಸೂದು. ಬಳಿಕೀಕ್ರಮದ ಮುಖದ ಮಣಿ ದೊರೆಯದಿರ್ದಡೆ ಎನಿತು ಮುಖದ ಮಣಿಗಳನಾದರೂ ಆಯಾ ಸ್ಥಾನಗಣನೆ ತಪ್ಪದೇ ಧರಿಸಲ್ವೇಳ್ಕುಂ.

೨೧೫

## ರುದ್ರಾಕ್ಷ ದೇವತಾ ಫಲ :

ಬಳಕಲ್ಲಿ ಏಕಮುಖದ ಮಣಿಯೇ ಪರಶಿವನು, ಬ್ರಹ್ಮಹತ್ಯಾದಿ ಪಾತಕವಂ ಕೆಡಿಸಿ ಸರ್ವಸಿದ್ಧಿಗಳನೀವುದು.

ದ್ವಿಮುಖದ ಮಣಿಯೇ ಈಶ್ವರೇಶಾನರು, ಗೋವಧೆಯಂ ಪರಿಹರಿಸೂದು.

ತ್ರಿಮುಖದ ಮಣಿಯೇ ಅಗ್ನಿ, ಸ್ತ್ರೀವಧೆಯಂ ದಹಿಸೂದು.

ಚತುರ್ಮುಖದ ಮಣಿಯೇ ಚತುರ್ಮುಖನು, ಪುರುಷವಧೆಯಂತೊಲಗಿಸೂದು.

ಪಂಚಮುಖದ ಮಣಿಯೇ ಸದಾಶಿವನು, ಅಭಕ್ಷ ಭಕ್ಷಣಾದಿ ದೋಷವಂ ನಿವರ್ತಿಸೂದು.

ಷಣ್ಮುಖದ ಮಣಿಯೇ ಷಣ್ಮುಖನು, ಭ್ರೂಣಹತ್ಯಾದಿ ಪಾತಕವಂ ಕೆಡಿಸೂಗು.

ಸಪ್ತಮುಖದ ಮಣಿಯೇ ಅನಂತನು, ಗೋವಧೆ ಸುವರ್ಣಸ್ತೇಯಾದಿ ಕಲುಷವಂ ಕ್ಷಯಿಸೂದು.

ಅಷ್ಟಮುಖದ ಮಣಿಯೇ ವಿಘ್ನೇಶ್ವರನು, ಸಮಸ್ತ ಪಾತಕಂಗಳನುರುಹಿ ಸರ್ವವಿಘ್ನಂಗಳಂ ನಿವಾರಿಸಿ ಪರಮ ಪದವೀವುದು.

ನವಮುಖದ ಮಣಿಯೇ ಭೈರವನು, ಸಕಲಕಲ್ಮಷಂಗಳಂ ಕಳೆದು ಭುಕ್ತಿ ಮುಕ್ತಿಗಳಂ ಕೊಡುವುದು.

ದಶಮುಖದ ಮಣಿಯೇ ಮಾಧವನು, ಭೂತವೇತಾಳ ಮಾರಿಗಣ ಬ್ರಹ್ಮ ರಾಕ್ಷಸ ಪನ್ನಗಾದಿ ಭೀತಿಯಂ ಬಿಡಿಸೂದು.

ಏಕಾದಶಮುಖದ ಮಣಿಯೇ ಏಕಾದಶರುದ್ರರು, ಅಶ್ವಮೇಧಾದಿಪುಣ್ಯಂಗಳನೀವುದು.

ದ್ವಾದಶಮುಖದ ಮಣಿಯೇ ದ್ವಾದಶಾದಿತ್ಯರು, ಅಗ್ನಿ, ಚೋರ, ವ್ಯಾಘ್ರ, ಖಡ್ಗಾದಿ ಬಾಧೆಗಳಂ ನಿವಾರಿಸಿ, ವ್ಯವಹಾರಸಿದ್ಧಿ ಸುವರ್ಣದಾನಾದಿ ಫಲಂಗಳನೀವುದು.

ತ್ರಯೋದಶ ಮುಖದ ಮಣಿಯೇ ಮಹೇಶ್ವರನು, ಮಾತಾಪಿತೃವಧೆ ಮೊದಲಾದ ದುಷ್ಕೃತಿಯಂ ನಿವಾರಿಸಿ, ರಸ, ರಸಾಯನ, ವಾದ ವಶ್ಯಾದಿಗಳಂ ಫಲಿಸೂದು.

ಚತುರ್ದಶಮುಖದ ಮಣಿಯೇ ಮನುಗಳು, ಸಕಲ ದೇವತಾ ಪೂಜಾಪುಣ್ಯ ಪ್ರದವೆಂದರಿದು. ೨೧೬

## ರುದ್ರಾಕ್ಷ ಧಾರಣ ಬೀಜಮಂತ್ರ:

ಏಕಮುಖದ ಮಣಿ ಮೊದಲಾಗಿ ಚತುರ್ದಶ ಮುಖದ ಮಣಿಪರಿಯಂತರಂ, ಓಂ, ಹ್ರಾಂ, ಲಾಂ, ಓಂ, ಹ್ರೀಂ, ಹ್ರೂಂ, ಹ್ರೌಂ, ಶ್ರೀಂ, ಹ್ರೇಂ, ಮಂ, ವಂ, ಕ್ಷೋಂ, ಕ್ಷಾಂ, ಊಂ ಎಂಬ ಕ್ರಮದಿಂದಾಯಾಮ ಮಂತ್ರಪೂರ್ವಕಮಾಗಿ ಧರಿಸುವುದು. ಆ ರುದ್ರಾಕ್ಷಗಳಂ ಬ್ರಾಹ್ಮಣಾದಿಗಳೆಲ್ಲರುಂ ಸಂಧ್ಯಾವಂದನಾದಿ ಕ್ರಿಯೆಗಳಲ್ಲಿ ಸರ್ವಥಾ ಧರಿಸಬೇಕೆಂದು ನಿರ್ಧರಿಸಿ. ೨೧೭

## ಮಂತ್ರವಿಷಯ :

ಬಳಿಕಿಂತು ಭಸಿತ ರುದ್ರಾಕ್ಷಧಾರಣನಿಷ್ಠನಾದ ಶುದ್ಧಶೈವನು ಪಂಚಾಕ್ಷರಾದಿ ಮಂತ್ರ ಜಪ ವಿಧಿಗಳನರಿಯಬೇಕಲ್ಲಿ ಮೊದಲು : ಸಿದ್ಧ, ಸಾಧ್ಯ, ಸುಸಿದ್ಧ, ಅರಿಯೆಂಬ ಮಂತ್ರಸಿದ್ಧಿ ಸೂಚಕವಾದ ಮಾತೃಕಾ ಚಕ್ರೋದ್ಧರಣವನು, ಕೂರ್ಮಚಕ್ರೋದ್ಧರಣವನು ಸಕಲ, ಮಂತ್ರಾತ್ಮಕಮಾದ ಲಿಂಗೋದ್ಧರಣವನು, ಮಂತ್ರ ಜನನಸ್ಥಾನವಾದ ಮಹಾ ಚಕ್ರೋದ್ಧರಣವನು, ಮಂತ್ರಾರ್ಚನಾಧಿ ಕರಣವಾದ ಯಂತ್ರೋದ್ಧರಣವನು, ಮಂತ್ರಾನುಸಂಧಾನಾಶ್ರಯಮಾದ ಘಟೋದ್ಧರಣಾದಿಗಳಂ ಪರೀಕ್ಷಿಸಿ. ೨೧೮

ಬಳಿಕ ಶುದ್ಧಪ್ರಸಾದ, ಮೂಲಪ್ರಸಾದ, ತತ್ವಪ್ರಸಾದ, ಆದಿಪ್ರಸಾದ, ಆತ್ಮಪ್ರಸಾದನೆಂಬ ಸೃಷ್ಟಿರೂಪ ಪಂಚಶಿವಮಂತ್ರಗಳಂ; ಮೋಕ್ಷದ, ಅಭಿವೃದ್ಧಿ, ಕಾಮ್ಯ, ಶಾಂತಿಕ, ಪೌಷ್ಟಿಕನೆಂಬ ಪಂಚಸದಾಶಿವರೂಪ ಸ್ಥಿತಿ ಮಂತ್ರಂಗಳಂ; ಸೃಷ್ಟಿ ಸ್ಥಿತಿ ಲಯಮೆಂಬ ಮಹೇಶ್ವರ ರೂಪ ತ್ರಿವಿಧ ಸಂಹಾರ ಮಂತ್ರಂಗಳಂ; ಸಾಕಲ್ಯ ಪ್ರಣವ, ಶಾಂಭವಪ್ರಣವ, ಸೌಖ್ಯಪ್ರಣವ, ಸಾವಶ್ಯಪ್ರಣವ, ಸಾಯುಜ್ಯ ಪ್ರಣವನೆಂಬ ಪಂಚಪ್ರಣವ ಮಂತ್ರಂಗಳಂ;ಮೂಲಪಂಚಾಕ್ಷರ, ಸ್ಥೂಲಪಂಚಾಕ್ಷರ, ಸೂಕ್ಷ್ಮಪಂಚಾಕ್ಷರ, ಮಾಯಾಖ್ಯಪಂಚಾಕ್ಷರ, ಪ್ರಸಾದ ಪಂಚಾಕ್ಷರಮೆಂಬ ಪಂಚ ಪಂಚಾಕ್ಷರ ಮಂತ್ರಂಗಳಂ; ಶಿವಾಸ್ತ್ರ, ಕ್ಷುರಿಕಾಸ್ತ್ರ ಪಾಶುಪತಾಸ್ತ್ರ, ವ್ಯೋಮಾಸ್ತ್ರ, ಅಘೋರಾಸ್ತ್ರಮೆಂಬ ಪಂಚಾಸ್ತ್ರಮಂತ್ರಂಗಳಂ; ಸದ್ಯೋಜಾತ, ವಾಮದೇವ,

ಅಘೋರ, ತತ್ಪುರುಷ, ಈಶಾನವೆಂಬ ಪಂಚಬ್ರಹ್ಮ ಮಂತ್ರಂಗಳಂ; ಗಾಯತ್ರಿ, ಮೃತ್ಯುಂಜಯ, ದಕ್ಷಿಣಾಮೂರ್ತಿ, ನೀಲಕಂಠ, ಶರಭ, ವೀರ, ವಿಘ್ನೇಶ್ವರ, ವಿಶಾಖ, ವಿದ್ಯೇಶ್ವರ, ಬ್ರಹ್ಮ, ವಿಷ್ಣು, ಸೂರ್ಯ, ಭೈರವಾದಿ ಮಹಾಮಂತ್ರಂಗಳಂ; ದುರ್ಗೆ, ಶಾರದೆ, ಲಕ್ಷ್ಮಿ, ಗೌರಿ, ಭುವನೇಶ್ವರಿ, ಅನ್ನಪೂರ್ಣೇಶ್ವರಿ, ಅಶ್ವಾರೂಢೆ, ತ್ರಿಪುರಾಂಬಿಕಾದಿ ಮಹಾಶಕ್ತಿ ಮಂತ್ರಂಗಳಂ; ಸಿದ್ಧಶಾಭರ, ಶಕ್ತಿಶಾಭರ, ಮೋರುತಂತ್ರ, ಶಾಕಿನೀತಂತ್ರ, ಡಾಕಿನೀತಂತ್ರ, ಕೂಚಿಮಾರತಂತ್ರ, ಶಲ್ಯತಂತ್ರಾದಿ ಸಿದ್ಧಮಂತ್ರಂಗಳಂ; ಆಂಧ್ರ, ದ್ರವಿಡಾದಿ ಲೌಕಿಕ ದೇಶಭಾಷಾಮಂತ್ರಂಗಳಂ ಬೇರೆ ಬೇರೆ ವಿವೇಕಿಸಿ ನೋಡಿ. ೨೧೯

## ಮಂತ್ರಾಂಗ ಪಲ್ಲವಪ್ರಯೋಗ :

ಮತ್ತಮಾ ಮಂತ್ರಂಗಳ ಹೃದಯ, ಶಿರಸ್ಸು, ಶಿಖಿ, ಕವಚ, ನೇತ್ರ, ಅಸ್ತ್ರವೆಂಬ ಷಡಂಗಕ್ರಮದಿಂ, ನಮಃ ಸ್ವಾಹಾ, ವಷಟ್, ಹುಂ, ವೌಷಟ್, ಫಟ್ ಎಂಬ ಷಟ್ಪಲ್ಲವ ಪ್ರಯೋಗಂಗಳಂ, ಶುಭ್ರ ಪೀತ ರಕ್ತ ಸ್ಫಟಿಕ ಶ್ಯಾಮ ಕೃಷ್ಣವೆಂಬ ಕ್ರಮದಿಂದಾ ಹೃದಯಾದ್ಯಂಗ ವರ್ಣಂಗಳಂ, ಪಂಚಾಂಗ ಮಂತ್ರಂಗಳಿಗೆ ನೇತ್ರ ಪಲ್ಲವಮಂ ಬಿಡಬೇಕೆಂಬುದಂ, ಅಂಗಹೀನಮಂತ್ರಂಗಳಿಗಂಗಮಂ ಕಲ್ಪಿಸಿಕೊಳಬಹುದೆಂಬುದಂ ನಿಶ್ಚೈಸಿ. ೨೨೦

ಮತ್ತಮಾ ಮಂತ್ರ ಷಟ್ಪಲ್ಲವಂಗಳಲ್ಲಿ ಕೋಪೋಪಶಾಂತಿ ಪೂಜಾದಿಗಳಿಗೆ ಹೃದಯ ಪಲ್ಲವಮಂ, ಹೋಮ ವಶ್ಯಾದಿಗಳಿಗೆ ಶಿರಃ ಪಲ್ಲವಮಂ, ಲಾಭಾಲಾಭಾದಿಗಳಿಗೆ ಶಿಖಾಪಲ್ಲವಮಂ, ಛೇದನ, ಮಾರಣ ಪ್ರೀತಿನಾಶಾದಿಗಳಿಗೆ ಕವಚ ಪಲ್ಲವಮಂ, ಮೋಹನೋದ್ದೀಪನ ಪುಷ್ಟಿ ವಿಜಯಾದಿಗಳಿಗೆ ನೇತ್ರ ಪಲ್ಲವಮಂ, ವಿಘ್ನ ಗ್ರಹೋಚ್ಚಾಟನಾದಿಗಳಿಗೆ ಅಸ್ತ್ರ ಪಲ್ಲವಮಂ, ಮಂತ್ರಾಂತ್ಯದಲ್ಲಿ ಪ್ರಯೋಗಿಸಬೇಕೆಂಬುದಂ ವಿಧಿಸಿ. ೨೨೧

## ಮಂತ್ರ ದಶಭೇದ ಸಂಸ್ಕಾರಗಳು :

ಬಳಿಕ ವಾತೂಲ, ಶಾರದಾತಿಲಕ, ಮಂತ್ರದೇವತಾ ಪ್ರಕಾಶಿಕೆ, ಪ್ರಪಂಚಸಾರಾದಿ ಮಂತ್ರಶಾಸ್ತ್ರೋಕ್ತ ಮಹಾಚಕ್ರಗತಮಾದ ಮಾತೃಕೆಗಳಿಂ ತೆಗೆದು, ಮಂತ್ರವನುದ್ಧರಿಸುವ ಜನನವೆಂಬ; ಮತ್ತಮಾ ಮಂತ್ರಾಕ್ಷರಂಗಳಂ ಪ್ರಣವಾಂತರ್ಹಿತಮಂ ಮಾಡಿ ಜಪಿಸುವ ಜೀವನವೆಂಬ; ಮರಳಿ ಮಂತ್ರವರ್ಣಂಗಳಂ ಬರೆದು, ಬೇರೆ ಬೇರೆ ಆ ವರ್ಣಂಗಳಂ ಚಂದನೋದಕದಿಂ ವಾಯುಮಿನಿಂ ಪೊಡೆವ ತಾಡನವೆಂಬ; ಬಳಿಕಾ ಮಂತ್ರಾಕ್ಷರಂಗಳ ಗಣನೆಯೆನಿತು ಕರವೀರದರಳಿಂ ವಾಯುಮಿನಿಂದಿಡುವ ಬೋಧನವೆಂಬ; ಮತ್ತಮಾ ಮಂತ್ರಾಕ್ಷರದ ಸಂಖ್ಯೆಗಳೆನಿತು ಅಶ್ವತ್ಥ ಪಲ್ಲವಂಗಳಿಂ ಮಂತ್ರಾಕ್ಷರಂಗಳಿಗೆ ಮಂತ್ರೋದಕವೆರೆವಭಿಷೇಕವೆಂಬ; ಬಳಿಕಾ ಮಂತ್ರಮಂ ಮನದಲ್ಲಿ ಸ್ಮರಿಸಿ "ತಾರ ವ್ಯೋಮಾಗ್ನಿ ಮಾನಯುಕ್/

ದಂಡಿಜ್ಯೋತಿರ್ಮನುರ್ಮತಃ॥" ಎಂಬ ಗ್ರಂಥಾರ್ಥಮಾದ ಜ್ಯೋತಿರ್ಮಂತ್ರದಿಂ, ಶಿವಮಂತ್ರವಲ್ಲದುಳಿದ ಮಂತ್ರಂಗಳ ಮಲತ್ರಯಮಂ ದಹಿಸುವ ವಿಮಲೀಕರಣ ಮೆಂಬ; ಮತ್ತಮಾ ಜ್ಯೋತಿರ್ಮಂತ್ರದಿಂ ಮಂತ್ರಿತಮಾದ ಕುಶೋದಕದಿಂದಾ ಮಂತ್ರಾಕ್ಷರಂಗಳಂ ಪ್ರತ್ಯೇಕ ಸಂಪ್ರೋಕ್ಷಣಂಗೆಯ್ವ ಆಪ್ಯಾಯನಮೆಂಬ; ಮತ್ತಂ ಮರಳಿ ಮಂತ್ರಕ್ಕೆ ಮಂತ್ರೋದಕದಿಂ ತರ್ಪಣಂಗೊಡುವ ತರ್ಪಣಮೆಂಬ, "ತಾರ ಮಾಯಾ ರಮಾ ಯೋಗೋ ಮನೋ ದೀಪನಮುಚ್ಯತೇ"ಎಂಬಗ್ರಂಥಾರ್ಥ ಮಾದ ದೀಪನಮೆಂಬ; ಮೇಲೆ ಜಪಿಸಲು ಯೋಗ್ಯಮಾದ ಮಂತ್ರಮಂ ಪ್ರಕಟಂ ಗೆಯ್ಯದಿರ್ಪ ಗುಪ್ತಿಯೆಂಬೀ ಮಂತ್ರದಶ ಸಂಸ್ಕಾರಂಗಳಂ ವಿಚಾರಿಸಿ ೨೨

ಪ್ರಣವ ವಿಚಾರ :

ಬಳಿಕಾ ಸಕಲ ಮಂತ್ರಂಗಳೊಳಗೆ ಮುಖ್ಯಮಾದ ಪ್ರಣವವೇ ಪರಪ್ರಣವ, ಅಪರಪ್ರಣವವೆಂದು ದ್ವಿವಿಧಮಾಗಿರ್ಪುದವರಲ್ಲಿ: ಪರಪ್ರಣವವೇ ವಾಚ್ಯಮಾದ ಸತ್ಯಜ್ಞಾನಾದಿ ಲಕ್ಷಣಮುಳ್ಳ ಪರಬ್ರಹ್ಮವೆನಿಸೂದು. ಬಳಿಕ ಅಪರಪ್ರಣವವೇ ವಾಚಕಮಾದ ಶಬ್ದರೂಪಮಾಗಿ ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವರಧಿ ದೇವತೆಗಳಾದ, ರಕ್ತ ಶುಕ್ಲ ಕೃಷ್ಣ ಜ್ಯೋತಿ ಸ್ಪಟಿಕವೆಂಬ ಪಂಚವರ್ಣ ಕ್ರಮುವ ನುಳ್ಳ, ಅಕಾರ, ಉಕಾರ, ಮಕಾರ, ಬಿಂದು, ನಾದವೆಂಬ ಪಂಚಾಕ್ಷರಾತ್ಮಕದಿಂ, ತಾರಕ, ದಂಡಕ, ಕುಂಡಲಾಕಾರ, ಅರ್ಧಚಂದ್ರಾಕಾರ, ದರ್ಪಣಾಕಾರ ಜ್ಯೋತಿ ರಾಕಾರವೆಂಬಾರು ರೂಪದಿಂ, ಓಂಕಾರವೆಂದು, ಬ್ರಹ್ಮವೆಂದು, ಜ್ಞಾನವೆಂದು ಶಿವಾತ್ಮಕವೆಂದು ಸರ್ವಾತ್ಮಕವೆಂದು, ಸರ್ವವಿದ್ಯಾದಿ ಬೀಜವೆಂದು, ತೇಜೋಬೀಜ ವೆಂದು, ಮುಕ್ತಿಬೀಜವೆಂದು, ನಿಷ್ಕಲವೆಂದು, ನಾದವೆಂದು, ನಾದಾದಿಯೆಂದು, ಹೃನ್ನಾದವೆಂದು, ವೇದಾದಿಯೆಂದು, ವೇದಭೂಮಿಯೆಂದು, ಮಂತ್ರಪ್ರಾಣವೆಂದು, ಬ್ರಹ್ಮಮೂರ್ತಿಯೆಂದು, ಆತ್ಮಮಂತ್ರವೆಂದಿವು ಮೊದಲಾದ ಪರಿಯಾಯ ನಾಮಂಗಳುಳ್ಳುದಾಗಿಹುದು. ೨೩

ಮಂತ್ರಾನುಷ್ಠಾನ :

ಬಳಿಕ ಮಂತ್ರಸಿದ್ಧ್ಯರ್ಥಮಾಗಿ ಜಪ ಪ್ರಾರಂಭದಲ್ಲಿ, ಸ್ನಾನಾದಿ ವಿಧಿಯುಕ್ತ ನಾಗಿ, ಬ್ರಹ್ಮಾರಣ್ಯ ನದೀತೀರಾದಿ ಸುಸ್ಥಲದಲ್ಲಿರ್ದ ಬ್ರಹ್ಮವೃಕ್ಷವನಾಶ್ರಯಿಸಿ, ಪ್ರಾಙ್ಮುಖೋದಙ್ಮುಖನಾಗಿ ಸ್ವಸ್ಥಾನದಲ್ಲಿ ಕುಳ್ಳಿರ್ದು, ಪ್ರಾಣಾಯಾಮ ಕ್ರಮುವಂ ಮಾಡಿ, ಬಳಿಕಾ ಮಂತ್ರಕ್ಕೆ ಬ್ರಹ್ಮನೇಋಷಿ, ದೇವಿ ಗಾಯತ್ರಿ ಛಂದಸ್ಸು ಪರಮಶಿವನಧಿದೇವತೆ, ಅಂ ಬೀಜ, ಉಂ ಶಕ್ತಿ, ಮಂ ಕೀಲಕ, ಮೋಕ್ಷಾರ್ಥಮಾದ ಜಪವೇ ವಿನಿಯೋಗವೆಂದು ಮೊದಲು ಸ್ಮರಿಸಿ. ೨೪

### ಮಂತ್ರನ್ಯಾಸಕ್ರಮ :

ಮೇಲಾ ಮಂತ್ರದಿಂ ಕರನ್ಯಾಸಂಗೈವಲ್ಲಿ ಕರದ್ವಯುದಂಗುಷ್ಠಾದಿ ಕನಿಷ್ಠಾಂತ ಮಾದಂಗುಲಿಗಳ ಆದಿಮಧ್ಯಾಂತ ಪರ್ವಂಗಳಲ್ಲಿ ಪ್ರತ್ಯೇಕ ಬಿಂದುಯುಕ್ತವಾದ ಅಕಾರ ಉಕಾರ ಮಕಾರಂಗಳಂ ನ್ಯಾಸಂ ಮಾಡಿ, ಬಳಿಕಾ ಬಿಂದುಯುಕ್ತ ಪ್ರಣವ ಮನಾ ಸರ್ವಾಂಗುಲಿಗಳಲ್ಲಿಯು ನ್ಯಾಸಂಗೆಯ್ದು ಮೇಲಾ ಪ್ರಕಾರದಿಂದವೆ ಕರತಳ ಕರ ಪೃಷ್ಠಂಗಳಿಂ ಸಮ್ಮಾರ್ಜನಂ ಮಾಡಿ, ಇಂತು ಕರನ್ಯಾಸಂಗೈದನಂತರದಲ್ಲಿ, ನಾಭಿ ಹೃದಯ ಮೂರ್ಧ್ನಂಗಳಲ್ಲಿ ಕ್ರಮದಿಂ ಸೊನ್ನೆವೆರಸಿದ ಅಕಾರ ಉಕಾರ ಮಕಾರಂ ಗಳಂ ನ್ಯಾಸಂಮಾಡಿ, ಮೇಲಾ ಮೂರ್ಧ್ನಾದಿ ಪಾದಾಂತವಾಗಿ ಬಿಂದು ಸಹಿತ ಪ್ರಣವನ್ಯಾಸಂಗೈದು, ಇಂತು ದೇಹನ್ಯಾಸಂ ಮಾಡಿ, ಮೇಲೆ "ಓಂ ಭೂರಗ್ನ್ಯಾತ್ಮನೇ ಹೃದಯಾಯನಮಃ" ಎಂದು ದಕ್ಷಿಣ ಕರದ ಚತುರಂಗುಲಿಗಳಿಂ, ಹೃದಯ ಸ್ಪರ್ಶನ ದಿಂದಾ ಹೃದಯಸ್ಥಿತ ಮಂತ್ರ ದೇವತೆಯಂ ನಮಸ್ಕರಿಸಿ, ಬಳಿಕ "ಓಂಭುವೋ ವಾಯ್ವಾತ್ಮನೇ ಶಿರಸೇಸ್ವಾಹಾ" ಎಂದು ದಕ್ಷಿಣ ಕರಾಂಗುಲಿ ಚತುಷ್ಟಯದಿಂದವೆ, ಶಿರಸ್ಸಿನಲ್ಲಿರ್ದ ಮಂತ್ರದೇವತಾ ಸ್ಪರ್ಶನದಿಂದಲ್ಲಿಯೇ ಪರಮ ಚಂದ್ರಾಮೃತಮಂ ನಿಜ ಮೂಲಾಗ್ನಿಯಲ್ಲಿ ಬೆಳಗಿ, ಬಳಿಕ "ಓಂ ಸ್ವಃಸೂರ್ಯಾತ್ಮನೇ ಶಿಖಾಯೈ ವಷಟ್" ಎಂದು ಶಿಖೆಯಲ್ಲಿರ್ದ ಊರ್ಧ್ವಜ್ವಲನ ಸ್ವಭಾವ ಪರಮ ಶಿವನ ಚೈತನ್ಯಮಂ ಊರ್ಧ್ವಾಂಗುಷ್ಟಮುಷ್ಟಿಯಿಂದದಃಕರಿಸಿ, ಬಳಿಕ "ಓಂ ಮಹಃ ಬ್ರಹ್ಮಾತ್ಮನೇ ಕವಚಾಯ ಹುಂ" ಎಂದು ಅಧೋಮುಖ ಶಿವಚೈತನ್ಯಮಂ ತನ್ನ ಶರೀರದ ಪ್ರತಿರೋಮ ಕೂಪಂಗಳಲ್ಲಿ ವಿಜೃಂಭಿಸುವಂತೆ ಕರದ್ವಯದ ತರ್ಜನಿಗಳಿಂ ವಜ್ರಕವಚದಿಂ ನಿರೋಧಿಸಿ, ಬಳಿಕ "ಓಂಜನಃ ಜ್ಞಾನಾತ್ಮನೇ ನೇತ್ರತ್ರಯಾಯ ವೌಷಟ್" ಎಂದು ದಕ್ಷಿಣಕರದ ಮಧ್ಯಾಂಗುಲಿತ್ರಯದಿಂ ನೇತ್ರ ಸ್ಪರ್ಶನದಿಂದಾ ಪರಮ ಶಿವಚೈತನ್ಯಮಂ ಸರ್ವತ್ರ ಸ್ಫುರಿಸುವಂತಭಿವ್ಯಕ್ತಂಮಾಡಿ, ಬಳಿಕ "ಓಂ ತಪಃ ಸತ್ಯಂ ಸತ್ಯಾತ್ಮನೇ ಅಸ್ತ್ರಾಯ ಫಟ್" ಎಂದು, ಬಾಹು ಮೂಲಂಗಳಲ್ಲಿ ಅಂಗುಷ್ಟ ತರ್ಜನಿಗಳಿಂ ಧ್ವನಿಯಪ್ಪಂತೆ ಅಸ್ತ್ರಂಗೆಯ್ದು, ಬಳಿಕ ಪೂರ್ವಾದಿದಶದಿಕ್ಕು ಗಳಲ್ಲಿ ರಕ್ಷಣಾರ್ಥವಾಗಿ ಪರಮ ಶಿವಚೈತನ್ಯ ರೂಪವಾದಾ ಅಸ್ತ್ರಮಂ ಇಂದ್ರಾದಿ ಲೋಕಪಾಲಕ ಹಸ್ತಂಗಳಲ್ಲಿರಿಸಿ, ಬಳಿಕ "ಓಂ ಭೂರ್ಭುವಃ ಸ್ವಾಹ ಅಸ್ತ್ರಾಯ ಫಟ್" ಎಂದು ಆ ದಿಕ್ಪಾಲಕರ್ಗನ್ಯೋನ್ಯ ಸಂಬಂಧಮಂ ಮಾಳ್ಪುದೀ ಷಡಂಗ ಪಲ್ಲವಾರ್ಥ ಕ್ರಮವೆಲ್ಲಾ ಮಂತ್ರಂಗಳಿಗೆಯೂ, ಸಮಾನವಹುದಿದೇ ಬ್ರಹ್ಮ ಕವಚ ವೆನಿಸಿಕೊಂಬುದೀ ಬ್ರಹ್ಮ ಕವಚಮಂ ಧರಿಸಿದಾತನೇ ಬ್ರಹ್ಮಾಸ್ತ್ರ, ಬ್ರಹ್ಮದಂಡ, ಕಾಲದಂಡ, ವಜ್ರಾಯುಧಾದಿಗಳಿಂ ಭೇದ್ಯನಲ್ಲಾಗಿ ಸುರನರಾದಿಗಳಿಂ ಪೂಜ್ಯನಪ್ಪಂ. ೨೨೫

ಬಳಿಕೀಕ್ರಮದಿಂ ಕರನ್ಯಾಸ ದೇಹನ್ಯಾಸ ಅಂಗನ್ಯಾಸಂಗೆಯ್ದು ನಂತರದಲ್ಲಿ ಜಗವೆಲ್ಲವಮಂ ತಪ್ತಾಯಃ ಪಿಂಡದಂತೆ ಪ್ರಣವ ಜ್ಯೋತಿ ವ್ಯಾಪ್ತವೆಂಬನು ಸಂಧಾನದಿಂದಾದರೂ, ಅಲ್ಲವೆ ತನ್ನ ಮೂಲಾಧಾರಾದ್ಯಖಿಳ ಚಕ್ರಭೇದಿನಿಯಾದ ಸುಷುಮ್ನಾನಾಡಿ ಮಧ್ಯಗತ ವಿದ್ಯುಲ್ಲೇಖಾತ್ಮಕ ಬಿಂದು ಚಿಂತನೆಯಿಂದಾದರೂ, ಅಲ್ಲಾ ಮತ್ತೆ, ಹೃತ್ಕಮಲ ಕರ್ನಿಕಾಗ್ರದ ಸೋಮಸೂರ್ಯಾಗ್ನಿ ಮಂಡಲತ್ರಯ ಮಧ್ಯದಲ್ಲಿ, ಮಾಹೇಶ್ವರಧ್ಯಾನಯುಕ್ತಮಾಗಾದೊ, ಹತ್ತು ಲಕ್ಷಜಪದಿಂ ಪುನಶ್ಚರಣಂ ಮಾಡಿದ ಮೇಲಾ ಪ್ರಣವ ಮಂತ್ರಂ ಸಿದ್ಧಿಸಿ, ಬಳಿಕ ಸಕಲ ಪಾಪಕ್ಷಯಮಂ ಷಟ್ಕರ್ಮಸಿದ್ಧಿಯಂ, ಅಷ್ಟ ಮಹದೈಶ್ವರ್ಯಂಗಳಂ, ಸರ್ವವಿದ್ಯಂಗಳಂ ಯಥೇಷ್ಟ ಫಲಂಗಳನೀವುದೇ ಸತ್ಯವೆಂದರಿದು. ೨೨೬

## ಅಜಪ ಮಂತ್ರ ವಿಚಾರ :

ಅನಂತರದೊಳಾ ಮಂತ್ರಂಗಳೊಳಗೆ ಆತ್ಮಪ್ರಸಾದವೆಂಬುದೇ ಸರ್ವಾತ್ಮರಲ್ಲಿ ರೇಚಕ ಪೂರಕವೆಂದು ಪ್ರಾಣಾಪಾನರೂಪ ರವಿಶಶಿಗಳೊಡಗೂಡಿ, ಸಂಚರಿಸಿ, "ಹಂಸಃ ಸೋಹಂ" ಎಂದಿತ್ತೆರನಾಗಿ ಜೀವಮಂತ್ರವೆಂದು ಹಂಸಮಂತ್ರವೆಂದು ಅಜಪಾಗಾಯತ್ರಿಯೆಂದು ಪೆಸರ್ವಡೆದಿಪ್ಪುದದೆಂತೆಂದೊಡೆ, ಪ್ರಾಣಾಯಾಮತ್ರಯ ಪೂರ್ವಕವಾಗಿ ಮೇಲಾಮಂತ್ರಕ್ಕೆ ಹಂಸಋಷಿ, ಅವ್ಯಕ್ತಗಾಯತ್ರಿ ಛಂದಸ್ಸು, ಪರಮ ಹಂಸನೇ ದೇವತೆ, ಹಂ ಬೀಜಂ, ಸ್ವಾಹಾಶಕ್ತಿ ಸೋಹಂಕೀಲಕ ಪರಮಹಂಸ ಪ್ರಸಾದಾರ್ಥವಾದ ಜಪವೇ ವಿನಿಯೋಗಂಗಳೆಂದು ಸ್ಮರಿಸಿ, ಬಳಿಕ "ಹಂ ಸಾಂ ಸೂರ್ಯಾತ್ಮನೇ ಅಂಗುಷ್ಠಾಭ್ಯಾಂ ನಮಃ । ಹಂ ಸೀಂ ಸೋಮಾತ್ಮನೇ ತರ್ಜನೀಭ್ಯಾಂ ನಮಃ। ಹಂ ಸೋಂ ನಿರಂಜನಾತ್ಮನೇ ಮಧ್ಯಮಾಭ್ಯಾಂ ನಮಃ । ಹಂ ಸೈಂ ನಿರಾಭಾಸಾತ್ಮನೇ ಅನಾಮಿಕಾಭ್ಯಾಂ ನಮಃ। ಹಂ ಸೌಂ ಅವ್ಯಕ್ತಾತ್ಮನೇ ಕನಿಷ್ಠಾಭ್ಯಾಂ ನಮಃ । ಹಂ ಸಃ ಅತನು ಸೂಕ್ಷ್ಮಾತ್ಮನೇ ಕರತಳಕರ ಪೃಷ್ಠಾಭ್ಯಾಂ ನಮಃ" ಎಂದು ಕರನ್ಯಾಸಮಂ ಮಾಡಿ ಮೇಲಾಕ್ರಮದಿಂದವೆ ಹೃದಯಾದಿ ಕರಾಂತಮಾದ ಷಡಂಗಳಲ್ಲಿ ಆಯಾಯ ಪಲ್ಲವಂ ಗೂಡಿ, ಅಂಗನ್ಯಾಸಂಗೆಯ್ದು, ಬಳಿಕ ಹೃತ್ಕಮಲ ಕರ್ನಿಕಾಮಧ್ಯದಲ್ಲಿ ಶ್ವೇತವರ್ಣದಿಂ, ಪರಶು ಮೃಗ ವರಾಭಯಂಗಳನುಳ್ಳ ಕರಚತುಷ್ಟಯದಿಂದೆಸೆದು, ಸರ್ವಲಕ್ಷಣ ಸಂಪನ್ನನಾದ ಉಮಾಪತಿ ಧ್ಯಾನ ಯುಕ್ತಮಾಗಿ, ಶ್ರೀ ಗುರೂಪದೇಶದಿಂ ಅರುಣೋದಯ ಸಮಯದಲ್ಲಿ, ಜಪಂಗೆಯ್ವುದು. ಆ ಮಂತ್ರಜಪವೇ ಸೂರ್ಯೋದಯಾದಿ ಸೂರ್ಯೋದಯಾಂತಮಾದ ದಿನ ಒಂದಕ್ಕೆ ಇಪ್ಪತ್ತೊಂದು ಸಾವಿರದರುನೂರಹುದದರೊಳಗೆ, ಆಧಾರಾದಿ ಬ್ರಹ್ಮರಂಧ್ರಾಂತಮಾದ ಸಪ್ತಚಕ್ರ ಕಮಲಂಗಳಲ್ಲಿ ಕ್ರಮವಿಡಿದಿರ್ದ ಶ್ರೀ ಗಣಪತಿಗಾರುನೂರು, ಬ್ರಹ್ಮಂಗಾರುಸಾವಿರ, ವಿಷ್ಣುವಿಂಗಾರು ಸಾವಿರ, ಉಮಾಮಹೇಶ್ವರಂಗಾರುಸಾವಿರ, ಜೀವಾತ್ಮಂಗೆ ಸಾವಿರ, ಪರಮಾತ್ಮಂಗೆ ಸಾವಿರ, ಶ್ರೀ ಗುರುವಿಂಗೆ

ಸಾವಿರ ಅಜಪಾಗಾಯತ್ರೀ ಮಂತ್ರಜಪಮಂ ನಿವೇದಯಾಮಿ ಎಂದು ಸಂಕಲ್ಪಿಸೂದು. ಇಂತು ಜಪಂಗೆಯ್ವಾತಂಗೆ ಸಮಸ್ತ ಪಾತಕಂಗಳಂ ಕೆಡಿಸಿ ಆಯುರಾರೋಗ್ಯಾದಿ ಭೋಗ ಮೋಕ್ಷಂಗಳನೀವುದೆಂದು ನಿರ್ಧರಿಸಿ, ೨೨೭

## ಶಿವಪಂಚಾಕ್ಷರ ಜಪ ವಿಚಾರ :

ಮತ್ತಮಾ ಮಂತ್ರಂಗಳಲ್ಲಿ ಮೂಲ ಪಂಚಾಕ್ಷರಮೆಂಬುದೊಂದೇ ಮುಖ್ಯವಾಗಿ ವಿದ್ಯೆಯೆಂದು ಶಿವನೆಂದು ಶೈವನೆಂದು ಶಿವಹೃದಯವೆಂದು ಸೂತ್ರನೆಂದು ಪರ್ಯಾಯ ನಾಮಂಗಳನುಳ್ಳುದಾಗಿ, ವೇದಾಗಮ ಪುರಾಣದೊಳ್ ಪ್ರಸಿದ್ಧಮೆನಿಸಿ ಸೂಕ್ಷ್ಮ ಮಂತ್ರವಾದರೂ ವಟಬೀಜದಂತೆ ಮಹಾರ್ಥಮುಳ್ಳುದಾಗಿ ಸಕಲ ಶಿವಭಕ್ತರ್ಗೆ ತಾನೆ ಜಪಿಸಲು ಯೋಗ್ಯಮೆನಿಸಿ, ಪ್ರಣವ ಪೂರ್ವಕಮಾದ ಭೂತಾದಿ ಸಕಲ ಪಂಚವರ್ಗಾತ್ಮಕಮಪ್ಪ, ನಕಾರಾದಿ ಯಕಾರಾಂತಮಾದ ಆರಕ್ಕರಂಗಳನುಳ್ಳುದಾಗಿ ನಿಷ್ಪ್ರಯಾಸದಿಂ ಭುಕ್ತಿ ಮುಕ್ತಿ ಪ್ರದವಾಗಿಹುದು. ಆ ಪಂಚಾಕ್ಷರೀ ಮಂತ್ರಮಂ ಮೊದಲು ಶ್ರೀಗುರು ಮುಖದಿಂದರ್ಥ ಸಮೇತಮಾಗರಿದು, ಯಥಾ ಶಕ್ತಿಯಿಂದ ಗುರುದಕ್ಷಿಣೆಯಂ ಕೊಟ್ಟು ಬಳಿಕಾಶ್ರೀಗುರುವಿನಾಜ್ಞೆಯಿಂದಾ ಮಂತ್ರ ಸಿದ್ಧ್ಯರ್ಥಮಾಗಿ ಮುಂದೆ ಪೇಳ್ವ ಶುಭಮಾಸಾದಿ ವಿಧಿಗಳನಾರೈದು, ಬಳಿಕ ಜಲ ಸ್ನಾನ ಭಸ್ಮಸ್ನಾನಾದಿಗಳಂ ಮಾಡಿ, ತನ್ನ ದೇಹದ ಬಲವರಿದು ಶಾಕ ಮೂಲ ಫಲ ಕ್ಷೀರಾದಿಮಿತಾಹಾರಿಯಾಗಿ, ಬಳಿಕ್ಕಕ್ಷರಕ್ಕೊಂದೊಂದುಲಕ್ಷಮಾದಾರುಲಕ್ಷ ಜಪಮಂ ದಿನವೊಂದಕ್ಕೆ ಹನ್ನೆರಡುಸಾವಿರ ಜಪಂಗೆಯ್ವಾತನಾಗಿ, ಹಾಲು ತುಪ್ಪದಿಂದಾದಗು ಪಾಲಾಶ ಕುಸುಮದಿಂದಾದರೂ, ಸಾವಿರ ಹೋಮವನು, ಒಂದುಲಕ್ಷ ತರ್ಪಣಮಂ ಪುರಾಣೋಕ್ತಮಾಗಿ ಮಾಡುವುದು. ಅಲ್ಲವೆ ಮತ್ತೆ ಕಲ್ಪೋಕ್ತಮಾದಿಪ್ಪತ್ತನಾಲ್ಕುಲಕ್ಷ ಜಪವನಾದರೂ ಪೂರ್ವೋಕ್ತ ಸಂಖ್ಯಾಕ್ರಮದಿಂ ಹೋಮತರ್ಪಣಂಗಳಂ ಪೆರ್ಚಿಸಿ ಮಾಡೂದು. ಇಂತು ಪುನಶ್ಚರಣಂಗೆಯ್ದು ಮೇಲೆ ದಿನ ಒಂದಕ್ಕೆ ನೂರೆಂಟನಾದರೂ, ಇನ್ನೂರೈವತ್ತನಾದರೂ, ಮುನ್ನೂರನಾದರೂ ಐನೂರನಾದರೂ ಸಾವಿರವನಾದರೂ, ಹನ್ನೆರಡುಸಾವಿರವನಾದರೂ ಸಂಖ್ಯಾ ನಿಯಮ ಪೂರ್ವಕಮಾಗಿ ನಿತ್ಯಜಪಂಗೆಯುತ್ತಿರ್ಕ್ಕುದು. ಆ ಸಂಖ್ಯಾ ಹೀನ ಜಪದ ಫಲಮಂ ರಾಕ್ಷಸರಪಹರಿಪರೆಂದರಿದು, ೨೨೮

## ಪಂಚಾಕ್ಷರ ಜಪ ಪುನಶ್ಚರಣ ವಿಭಾಗ :

ಬಳಿಕಿಲ್ಲಿ ಪುನಶ್ಚರಣಂಗೆಯ್ಯದೇ ಸಂಖ್ಯಾನಿಯಮದಿಂ ದೇಹಾಂತಮಾಗಿ ಮಾಳ್ಪುದೇ ನಿತ್ಯಜಪವದು ಕನಿಷ್ಟಮೆನಿಸೂದು, ಪುನಶ್ಚರಣಂ ಮಾಡಿಬಿಡುವುದೇ ಪುನಶ್ಚರಣ ಜಪವದು ಮಧ್ಯಮವೆನಿಸೂದು. ಪುನಶ್ಚರಣಂಗೆಯ್ದು ಮೇಲೆ ಸಂಖ್ಯಾ ನಿಯಮದಿಂ ಪ್ರಾಣಾಂತಮಾಗಿ ಮಾಳ್ಪುದೇ ಪುನಶ್ಚರಣ ಪೂರ್ವಕ ನಿತ್ಯ ಜಪವದುತ್ತಮ ವೆನಿಸೂದೆಂದು ವಿಭಾಗಿಸಿ. ೨೨೯

ಜಪಾರಂಭ :

ಮೇಲೆ ಮಂತ್ರಜಪ ಪ್ರಾರಂಭದಲ್ಲಿ ಪ್ರಾಣಾಯಾಮತ್ರಯಮಂ ಮಾಡಿ ಬಳಿಕಾ ಮಂತ್ರಕ್ಕೆ ವಾಸುದೇವಋಷಿ, ಪಙ್ಕ್ತಿ ಛಂದಸ್ಸು, ಸದಾಶಿವನಧಿದೇವತೆ, ಪ್ರಣವವೇಬೀಜ, ಉಮಾಶಕ್ತಿ, ಉದಾತ್ತಸ್ವರ, ಶ್ವೇತವರ್ಣ, ಭೋಗಮೋಕ್ಷಾರ್ಥ ಮಾದ ಜಪವೇ ವಿನಿಯೋಗವೆಂದು ಮೊದಲು ಸ್ಮರಿಸಿ, ಬಳಿಕ ಪಿಂಡಬ್ರಹ್ಮಾಂಡಂಗಳಲ್ಲಿ, ಭೂಮ್ಯಾದ್ಯಾತ್ಮಾಂತಮಾದಾರಸುಕ್ರಮದಿಂ ನಕಾರಾದಿ ಪ್ರಣವಾಂತ ಮಾದಕ್ಷರಾತ್ಮಕವೆಂದನುಸಂಧಾನಿಸಿ. ೨೩೦

ಕರನ್ಯಾಸ ಭೇದಂಗಳು :

ಮತ್ತಮಾ ಮಂತ್ರದಿಂ ಕರನ್ಯಾಸಂಗೈಯ್ವಲ್ಲಿ ಕರದ್ವಯಾಂಗುಷ್ಠಾದಿ ಕನಿಷ್ಠಾಂತಮಾಗಿ, ಯಕಾರಾದಿ ನಕಾರಾಂತಮಾದ ಪ್ರತ್ಯೇಕ ಬಿಂದು ಸಮೇತ ಮಪ್ಪ ಮಂತ್ರಬೀಜಂಗಳೊಂದಕ್ಕೆ ಬಿಂದುಸಮೇತಮಪ್ಪ ಪ್ರಣವದ್ವಯವನಾದ್ಯಂತದಲ್ಲಿ ಕೂಡಿ ಆಯಾಯ ಅಂಗುಲಿಗಳಾದಿಯಿಂದಗ್ರಪರ್ಯಂತರಂ ಮಾಳ್ಪುದೇ ಸೃಷ್ಟಿನ್ಯಾಸವೆನಿಸೂದು. ಬಳಿಕ ಕನಿಷ್ಠಾದ್ಯಾಂಗುಷ್ಠಾಂತಮಾಗಿ ನಕಾರಾದಿ ಯಕಾರಾಂತಮಾದ ವರ್ಣಂಗಳನಾ ಕ್ರಮದಿಂದಾದಿ ಪರ್ಯಂತರಂ ಮಾಳ್ಪುದೇ ಸಂಹಾರನ್ಯಾಸವೆನಿಸುವುದು. ಮತ್ತಮಾ ಮಧ್ಯಮಾಂಗುಲ್ಯಾದಿ ತರ್ಜನ್ಯಂತಮಾಗಿ, ಶಿಕಾರಾದಿ ಮಕಾರಾಂತಮಾದಕ್ಷರಂಗಳನಾ ಪರಿಯಿಂದಾರು ಅಂಗುಲಿಗಳ ಮಧ್ಯದಿಂದಾದ್ಯಗ್ರ ಪರ್ಯಂತರಂ ಮಾಳ್ಪುದೇ ಸ್ಥಿತಿನ್ಯಾಸವೆನಿಸೂದು. ಬಳಿಕಾ ಅಂಗುಲಿಗಳ ಪರ್ವಂಗಳಲ್ಲಿಯೂ ಮಂತ್ರಾಕ್ಷರಂಗಳನಾರೀತಿಯಿಂದುತ್ಪತ್ತ್ಯಾದಿ ಭೇದವನರಿದು ನ್ಯಾಸಂಗೆಯ್ವುದು, ಬಳಿಕ ಪ್ರತ್ಯೇಕಾಂಗುಲಿಗಳಲ್ಲಿಯೂ ಸಂಪುಟೀಕರಿಸಿ ಪ್ರಣವನ್ಯಾಸಂ ಮಾಡೂದು. ಮತ್ತಮಾ ಕರದ್ವಯದ ಚತುರಂಗುಲಿಯನೆ ಆಯಾಅಂಗುಷ್ಠದಿಂ ಅಂಗುಷ್ಠವನೆ ಆಯಾ ತರ್ಜನಿಯಿಂ ನ್ಯಾಸಂಗೆಯ್ವುದು. ಬಳಿಕ ಕರತಳದ್ವಯಕ್ಕೆ ಬಿಂದುಯುಕ್ತ ಪ್ರಣವ ತ್ರಯಮಂ ವಾಮಕರವನೆ ದಕ್ಷಿಣ ಕರದಿಂ ದಕ್ಷಿಣಕರವನೆ ವಾಮಕರದಿಂದಾ ಕರಂಗಳನನುಲೋಮವಾಗಿ ಸಮ್ಮಾರ್ಜನಂಗೆಯ್ವುದೇ ಸೃಷ್ಟಿನ್ಯಾಸವೆನಿಸೂದು. ಲೋಮ ವಿಲೋಮವಾಗಿ ಸಮ್ಮಾರ್ಜನಂ ಮಾಳ್ಪುದೇ ಸಂಹಾರ ನ್ಯಾಸವಹುದು. ಇಂತುಕರನ್ಯಾಸಂ ಮಾಡಿ. ೨೩೧

ದೇಹನ್ಯಾಸ ಭೇದಗಳು :

ಮೇಲೆ ದೇಹನ್ಯಾಸದಲ್ಲಿ ಮೂರ್ಧ್ನಿ ಮುಖ ಕಂಠ ಹೃದಯ ಗುಹ್ಯ ಪಾದಂಗಳಲ್ಲಿ ಕ್ರಮದಿಂ ಪ್ರಣವಾದಿ ಮಕಾರಾಂತಮಾದ ಪ್ರತ್ಯೇಕಬಿಂದು ಸಮೇತ ಮಪ್ಪ ಮಂತ್ರಾಕ್ಷರಂಗಳಂ ಬಿಂದುಯುಕ್ತ ಪ್ರಣವದ್ವಯ ಸಂಪುಟಮಾಗಿಮಾಳ್ಪುದೇ ಸೃಷ್ಟಿನ್ಯಾಸವೆನಿಸೂದು. ಬಳಿಕಾ ಕ್ರಮದಿಂದವೆ ಪಾದಾದಿ ಮೂರ್ಧ್ನಿಪರ್ಯಂತರಂ

ಪ್ರಣವಾದಿ ಯಕಾರಾಂತಮಾಗಿ ಮಾಳ್ಪುದೇ ಸಂಹಾರ ನ್ಯಾಸವೆನಿಸೂದು. ಬಳಿಕ ಹೃದಯ ಗುಹ್ಯ ಪಾದ ಮೂರ್ಧ್ನಿ, ಮುಖ ಕಂಠಂಗಳಲ್ಲಿ ಕ್ರಮದಿಂ ಪ್ರಣವಾದಿ ಮಕಾರಾಂತಮಾಗಿ ಮಾಳ್ಪುದೇ ಸ್ಥಿತಿನ್ಯಾಸವೆನಿಸೂದು. ಬಳಿಕ ಸರ್ವಮಂತ್ರದಿಂ ಶಿರಸಾದಿ ಸರ್ವಾಂಗಮಂ ನ್ಯಾಸಂಗೆಯ್ವುದು. ೨೩೨

ಅಂಗನ್ಯಾಸ ಭೇದಗಳು :

ಬಳಿಕ ಅಂಗನ್ಯಾಸದಲ್ಲಿ ಕನಿಷ್ಠಾಂಗುಷ್ಠಯೋಗದಿಂ ಹೃದಯ, ಅನಾಮಿಕಾಂಗುಷ್ಠ ಯೋಗದಿಂ ಮೂರ್ಧ್ನಿ, ಮಧ್ಯಮಾಂಗುಷ್ಠಯೋಗದಿಂ ಶಿಖಿ, ಕರದ್ವಯದ ತರ್ಜನಿಗಳಿಂ ಕವಚ, ದಕ್ಷಿಣ ಕರದ ಮಧ್ಯಾಂಗುಲಿತ್ರಯದಿಂ ನೇತ್ರ. ದಕ್ಷಿಣ ಚತುರಂಗುಲಿಗಳಿಂ ವಾಮಕರತಳದಲ್ಲಿ ತಾಳತ್ರಯದಿಂದಸ್ತ್ರಂಗಳಂ, ಪ್ರಣವಾದಿ ಯಕಾರಾಂತಮಾದ ಮಂತ್ರಾಕ್ಷರಂಗಳಂ ಪೂರ್ವೋಕ್ತ ಕ್ರಮದಿಂ ಆಯಾ ಪಲ್ಲವಾರ್ಥವರಿದೊಡಗೂಡಿ ಮಾಳ್ಪುದೇ ಸೃಷ್ಟಿನ್ಯಾಸವೆನಿಸೂದು.
ಬಳಿಕ ಮಂತ್ರ ವರ್ಣಭೇದವಿಲ್ಲದೆ ಅಸ್ತ್ರಾದಿಹೃದಯಾಂತಮಾಗಿ ಮಾಳ್ಪುದೇ ಸಂಹಾರ ನ್ಯಾಸವೆನಿಸೂದು.
ಬಳಿಕ ಕವಚಾದಿ ಶಿಖಾಂತಮಾಗಿ ಮಾಳ್ಪುದೇ ಸ್ಥಿತಿನ್ಯಾಸವೆನಿಸೂದು. ೨೩೩

ಬಳಿಕ ಈಶಾನಾದಿ ಸದ್ಯೋಜಾತಾಂತಮಾದುದೇ ಸೃಷ್ಟಿ, ಸದ್ಯೋಜಾತಾದಿ ಈಶಾನಾಂತಮಾದುದೇ ಸಂಹಾರ, ಅಘೋರಾದಿ ತತ್ಪುರುಷಾಂತಮಾದುದೇ ಸ್ಥಿತಿ ನ್ಯಾಸವಹುದೆಂದರಿದು, ಈ ಪಂಚಬ್ರಹ್ಮ ನ್ಯಾಸಂಗಳಂ ಕರ,ದೇಹ, ಅಂಗತ್ರಯಂಗಳಲ್ಲಿ ಮಾಳ್ಪುದು. ಮೇಲೆ ಪೂರ್ವಾದಿ ಊರ್ಧ್ವಾಂತಮಾದ ಪಂಚದಿಕ್ಕುಗಳಲ್ಲಿ ನಕಾರಾದಿ ಯಕಾರಾಂತಮಾದಕ್ಷರಂಗಳನಾ ಕ್ರಮದಿಂದವೆ ಸ್ಥಾಪಿಸೂದು ಬಳಿಕಂಗುಷ್ಠ ತರ್ಜನಿಗಳಿಂ ಧ್ವನಿಯಪ್ಪಂತೆ ಇಂದ್ರಾದಿ ದಶದಿಕ್ಕುಗಳಲ್ಲಿ ಅಸ್ತ್ರಪಲ್ಲವಮಂ ಪ್ರಯೋಗಿಸೂದು. ಬಳಿಕ ಯಕಾರಾದಿ ನಕಾರಾಂತಮಾಗೆ ಸೃಷ್ಟಿಮಂತ್ರವೆನಿಸೂದು. ನಕಾರಾದಿ ಯಕಾರಾಂತಮಾಗೆ ಸಂಹಾರಮಂತ್ರವಹುದು. ಶಿಕಾರಾದಿ ಮಕಾರಾಂತಮಾಗೆ ಸ್ಥಿತಿಮಂತ್ರವಹುದದರಲ್ಲಿ ಸ್ತ್ರೀ ಶೂದ್ರರುಗಳು ಪ್ರಣವವಿಲ್ಲದೆ ನಮೋಂತಮಾದ ಸ್ಥಿತಿ ಮಂತ್ರವನೆ ಜಪಂ ಗೈವುದು. ಆ ಜಪಂಗೆಯ್ವಲ್ಲಿ ಸಾಂಬಶಿವನಾಗಲಿ, ಸದಾಶಿವಮೂರ್ತಿಯನಾಗಲಿ, ತಾಂಡವಾಕಾರವನಾಗಲಿ ಧ್ಯಾನಿಸುತ್ತೆ ಜಪಂಗೆಯ್ವುದೆಂದು ನಿರ್ವಹಿಸಿ. ೨೩೪

ಪಂಚಾಕ್ಷರೀ ವಿನಿಯೋಗ :

ಬಳಿಕೀಕ್ರಮದಿಂ ಪುನಶ್ಚರಣ ಜಪಂಗೆಯ್ವುದಲ್ಲದೆ, ಸಕಲ ಸಾಂಗಿಕಮಾಗಿ ಬಿಲ್ವವೃಕ್ಷವನಾಶ್ರೈಸಿ, ಒಂದೇ ದಿನವನಂತ ಜಪಂಗೆಯ್ಯಲೆಲ್ಲಾ ಮಂತ್ರಂಗಳಿಗೆಯು ಪುನಶ್ಚರಣವಹುದೆಂದೀಶ್ವರ ಗೀತೆ ಮೊದಲಾದವರಲ್ಲಿ ಪೇಳಲ್ಪಟ್ಟುದಾದ ಕಾರಣ ಆ ಪುನಶ್ಚರಣದಿಂ ಸಿದ್ಧಮಾದ ಪಂಚಾಕ್ಷರ ಮಂತ್ರಮಂ ಪರ್ವತಾಗ್ರದಲ್ಲಿ ಒಂದು

ಲಕ್ಷವಂ ಜಪಿಸೆ ಆಯುುವೃದ್ಧಿ. ಮಹಾನದೀತೀರದಲ್ಲಿ ದ್ವಿಲಕ್ಷಜಪಂಗೆಯ್ಯೆ ಆಯುುವೃದ್ಧಿ, ದೂರ್ವೆ, ತಿಲ, ಅಮರದಬಳ್ಳಿ ಗುಳಿಗೆಗಳಂ ಹತ್ತು ಸಾವಿರವಂ ಮಂತ್ರಿಸಿ ಹೋಮಂಗೆಯ್ಯಲಾಗಿ ಆಯುುವೃದ್ಧಿ. ಅರಳಿಯ ಮರವನೇರಿಕೊಂಡು ದ್ವಿಲಕ್ಷವಂ ಜಪಿಸೆ ಅಪಮೃತ್ಯುಪರಿವುದು. ಪ್ರತಿ ದಿನದ ಶನಿವಾರಲ್ಲಿದಯು ಅರಳಿಯ ಮರನನೆರಡು ಕೈಗಳಿಂ ಮುಟ್ಟಿಕೊಂಡು ನೂರೆಂಟು ವೇಳೆ ಜಪಿಸೆ ಮೃತ್ಯುತೊಲಗುವುದು. ಆದಿತ್ಯಾಭಿಮುಖನಾಗಿ ಒಂದು ಲಕ್ಷ ಜಪಂಗೆಯ್ದು ಅರ್ಕಕುಸುಮದಿ ನೂರೆಂಟು ಹೋಮಂಗೆಯ್ಯೆ ಸರ್ವವ್ಯಾಧಿ ಹರಿವುದು. ಒಂದು ಮಾಸ ಪರ್ಯಂತರವಾಗಿ ಪ್ರತಿದಿನದುದಯ ಸಮಯದಲ್ಲಿ ನೂರೆಂಟು ವೇಳೆ ಉದಕವಂ ಮಂತ್ರಿಸಿಕೊಳಲಾಗಿ ಕುಕ್ಷಿರೋಗ ಹರಿವುದು. ಪಾಲಾಶಕುಸುಮದಿಂ ಹತ್ತುಸಾವಿರ ಹೋಮಂಗೆಯ್ಯೆ ಸರ್ವವ್ಯಾಧಿ ಹರಿವುದು. ನದೀತೋಯ ಪೂರ್ಣ ಕುಂಭವಂ ಮುಟ್ಟಿಕೊಂಡು ಹತ್ತು ಸಾವಿರ ಜಪಂಗೆಯ್ದು ಆ ಜಲಸ್ನಾನದಿಂ ಸಕಲವ್ಯಾಧಿ ನಿವೃತ್ತಿಯಹುದು. ಚಂದ್ರಸೂರ್ಯ ಗ್ರಹಣಂಗಳಲ್ಲಿ ಸಮುದ್ರಗಾಮಿ ಯಾದ ನದಿಯೊಳುಪಾಸಿಯಾಗಿ ಶುಚಿಯಾಗಿಕುಳ್ಳಿರ್ದು. ಆ ಗ್ರಹಣಾದಿ ಗ್ರಹ ಶಾಂತ್ಯವಾಗಿ ಬ್ರಾಹ್ಮೀರಸವಂ ನೂರೆಂಟು ವೇಳೆ ಮಂತ್ರಿಸಿಕೊಳಲಾಗ್ದಿ ಇಹದಲ್ಲಿಯೇ ಸರ್ವಶ್ರುತಿ ಪಾರಂಗತನಹನು. ಪ್ರಾತಃಕಾಲದಲ್ಲಿ ಸ್ನಾನಂಗೆಯು ನಿತ್ಯಕ್ರಿಯಾ ಸಂಪನ್ನನಾಗಿ ಪಾಲಾಶ ಪತ್ರದಲ್ಲಿ ವಿಭೂತಿಯನಾದರೂ, ತುಪ್ಪವ ನಾದರೂ, ಪಂಚಗವ್ಯವನಾದರೂ, ತುಂಬಿ ಹಸ್ತದಿಂ ಮುಟ್ಟಿಕೊಂಡು ಸಾವಿರದೆಂಟು ಜಪಂಗೈದುಕೊಳಲಾಗಿ ಸಕಲವಿದ್ಯಾಸಂಪನ್ನನಹನು. ಬಿಲ್ವ ಛಾಯೆಯನಾಶ್ರಯಿಸಿ ಹತ್ತು ಸಾವಿರ ಜಪಂಗೈದು, ಮೇಲೆ ಆ ಬಿಲ್ವಪತ್ರ, ಫಲ, ಕುಸುಮಗಳಿಂದಾದರೂ ಸಾವಿರದೆಂಟು ಹೋಮಂಗೆಯ್ಯೆ ಸಕಲೈಶ್ವರ್ಯ ಸಮೃದ್ಧಿಯಹುದು. ಛಿದ್ರವಿಲ್ಲದ ಪಾಲಾಶಕುಸುಮದಿಂ ಹತ್ತು ಸಾವಿರ ಹೋಮಂಗೈಯೆ ಸರ್ವಲಕ್ಷಣ ಸಂಪನ್ನನಾದ ಪುತ್ರನಹನು, ಆ ಪಾಲಾಶಕುಸುಮದಿಂ ಸಾವಿರದೆಂಟು ಹೋಮಂಗೆಯ್ಯೆ ನಕ್ಷತ್ರ ಗ್ರಹ ಪೀಡಾ ನಿವಾರಣವಹುದು. ಸ್ನಾನವಂ ಮಾಡಿ ಹತ್ತುಸಾವಿರ ಜಪಂಗೈದು ಘೃತದಿಂ ನೂರೆಂಟು ಹೋಮಂಗೈಯೆ ದುಃಸ್ವಪ್ನ ಶಾಂತಿಯಹುದು. ಚಂದ್ರ ಸೂರ್ಯಗ್ರಹ ಣಂಗಳಲ್ಲಿ ಶಿವಲಿಂಗ ಪೂಜೆಯಂ ವಿಧಿವತ್ತಾಗಿ ಮಾಡಿ ಆ ಲಿಂಗ ಸನ್ನಿಧಿಯಲ್ಲಿಯೇ ಹತ್ತು ಸಾವಿರ ಜಪಂಗೈಯೆ ಸರ್ವಕಾಮ್ಯಾರ್ಥ ಸಿದ್ಧಿಯಹುದು. ದಿನಂಪ್ರತಿಯೂ ಹನ್ನೊಂದು ವೇಳೆ ಅನ್ನವಂ ಮಂತ್ರಿಸಿಕೊಳಲಾಗಿ ಕ್ಷತ್ರಿವಂ ಸೋಂಕದು. ಮತ್ತಮಾ ಮೂಲಮಂತ್ರವಾಡೊಡೆ ನೂರೆಂಟು ಜಪದಿಂ ನಿತ್ಯಕರ್ಮಲೋಪ ನಿಷಿದ್ಧಾನ್ನ ಸ್ವೀಕಾರದೋಷಂಗಳಂ ಕೆಡಿಸೂದು. ಹತ್ತುಸಾವಿರವಧಿಕಮಾ ದೊಂದು ಲಕ್ಷ ಜಪದಿಂ ಮಹಾಪಾತಕಂಗಳುಂ ತೊಲಗೊದು. ಐವತ್ತೈದು ಸಾವಿರ ಜಪದಿಂ ಪಾತಕಂಗಳುಂ ನಿವಾರಣವಹುದು. ಇಪ್ಪತ್ತೇಳು ಸಾವಿರದೈನೂರು ಜಪದಿಂ

ದುಪಪಾತಕಂಗಳುಂ ನಿವಾರಣವಹುದು. ಐದು ಸಾವಿರ ಜಪದಿಂ ವ್ಯತಿಪಾತಕಂಗಳನೆ ಬ್ಬಟ್ಟುವುದು. ತತ್ವಗಳಿಗೊಂದೊಂದು ಲಕ್ಷವಾಗಿಪ್ಪತ್ತೈದು ಲಕ್ಷ ಜಪದಿಂ ಭೂಮ್ಯಾದಿ ಪಂಚವಿಂಶತಿ ತತ್ವಮಂ ದಾಟಿಸೂದು. ಐನೂರು ಲಕ್ಷ ಜಪದಿಂ ಸರ್ವಕಾರಣನಾದೀಶ್ವರತ್ವವನೀವುದು. ನೂರು ಲಕ್ಷ ಜಪದಿಂ ರುದ್ರತ್ವವನೀವುದು. ಎಂಭತ್ತು ಲಕ್ಷ ಜಪದಿಂ ವಿಷ್ಣುತ್ವವನೀವುದು. ಅರವತ್ತು ಲಕ್ಷ ಜಪದಿಂ ಬ್ರಹ್ಮತ್ವವ ನೀವುದು. ಇಪ್ಪತ್ತನಾಲ್ಕು ಲಕ್ಷಜಪದಿಂ ವಿರಾಡತ್ವವನೀವುದು. ಲಕ್ಷ ಜಪದಿಂ ಧೀರ್ಘಾಯುವೀವುದು. ಒಂದೊಂದು ಲಕ್ಷಜಪದಿಂ ಮಾರಣಾದಿ ಷಟ್ಕರ್ಮ ಸಿದ್ಧಿಗಳ ನೀವುದು. ಮತ್ತಮಾ ಪಂಚಾಕ್ಷರ ಮಂತ್ರಮಂ ವಾಯುಜಿತನಾಗಿ ಮಧ್ಯರಾತ್ರಿ ಯಲ್ಲಿ ಹತ್ತು ಸಾವಿರ ಜಪಂಗೆಯ್ಯೆ ನಾದ ಸಿದ್ಧಿಯಹುದು. ತತ್ಸಂಖ್ಯಾಜಪಕ್ರಮ ದಿಂದವೆ ಬ್ರಹ್ಮ ಸಿದ್ಧಿಯಹುದು. ಆಲಸ್ಯವಿಲ್ಲದೆ ವಾಯುಜಿತನಾಗಿ ಮೌನಿಯಾಗಿ ಮಧ್ಯರಾತ್ರಿಯಲ್ಲಿ ಲಕ್ಷ ಜಪಂಗೆಯ್ಯೆ ಸರ್ವಾಂಧಕಾರ ನಿವರ್ತಕಮಾದ ಬಿಂದು ದರ್ಶನವಹುದು. ಮಧ್ಯರಾತ್ರಿಯಲ್ಲಿ ವಾಯುಜಿತನಾಗಿ ಲಕ್ಷಜಪಂಗೆಯ್ಯೆ ಸರ್ವಸಿದ್ಧಿ ಗಳಹವೆಂಬಿವು ವಿನಿಯೋಗಂಗಳಂ ವಿಧಿಸಿ. ೨೩೫

ಜಪ ಕಾಲಂಗಳು ;

ಅನಂತರದೊಳೀ ಪಂಚಾಕ್ಷರಾದಿ ಸಕಲ ಮಂತ್ರಪುನಶ್ಚರಣ ಪ್ರಾರಂಭದಲ್ಲಿ, ಶುಭಮಾಸಾದಿ ವಿಧಿಕ್ರಮಂಗಳಂ ವಿಚಾರಿಸಬೇಕಾಗಿಹುದವರಲ್ಲಿ: ಚೈತ್ರ ಮಾಸದಲ್ಲಿ ದುಃಖ, ವೈಶಾಖ ಮಾಸದಲ್ಲಿ ರತ್ನಲಾಭ, ಜೇಷ್ಠಮಾಸದಲ್ಲಿ ಮೃತ್ಯು, ಆಷಾಡ ಮಾಸದಲ್ಲಿ ಬಂಧುನಾಶ, ಶ್ರಾವಣಮಾಸದಲ್ಲಿ ಪೂರ್ಣಾಯು, ಭಾದ್ರಪದದಲ್ಲಿ ಪ್ರಜಾ ಹಾನಿ, ಅಶ್ವಯೂಜದಲ್ಲಿ ಶುಭ, ಕಾರ್ತೀಕದಲ್ಲಿ ಸರ್ವಸಿದ್ಧಿ, ಮಾರ್ಗಶಿರದಲ್ಲಿ ಮಾಂಗಲ್ಯ, ಪುಷ್ಯದಲ್ಲಿ ಹಾನಿ, ಮಾಘದಲ್ಲಿ ಬುದ್ಧಿವೃದ್ಧಿ, ಪಾಲ್ಗುಣದಲ್ಲಿ ಸಕಲ ಸಿದ್ಧಿಗಳಹವೆಂದು ಮಾಸಂಗಳಂ ಮನಂಗೊಂಡು. ಬಳಿಕ ಮೇಷಾದಿ ಮೀನಾಂತ ಮಾದ ಹನ್ನೆರಡು ರಾಶಿಗಳೊಳಗೆ, ಮೇಷ, ಮಿಥುನ, ಸಿಂಹ, ತುಲೆ, ಧನು, ಕುಂಭ ವೆಂಬಾರು ರಾಶಿಗಳೇ ಅಶುಭಂಗಳು ಮಿಕ್ಕಹಾರು ರಾಶಿಗಳೇ ಶುಭಂಗಳೆಂದು ರಾಶಿಗಳ ಲೇಸುವಿಡಿದು.

ಬಳಿಕ ಪಾಡ್ಯ, ಚತುರ್ಥಿ, ಷಷ್ಠಿ, ಅಷ್ಟಮಿ, ನವಮಿ, ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯೆಯೆಂಬೆಂಟು ತಿಥಿಗಳೇ ಅಶುಭಂಗಳು, ಉಳಿದೇಳು ತಿಥಿಗಳೇ ಶುಭಂ ಗಳೆಂದು ತಿಥಿಗಳಂ ಪತಿಕರಿಸಿ.

ಬಳಿಕ ಆದಿತ್ಯವಾರ, ಮಂಗಳವಾರ, ಶನಿವಾರಂಗಳೇ ಅಶುಭಂಗಳು. ಮಿಕ್ಕ ವೆಲ್ಲಾ ಶುಭಂಗಳೆಂದು ವಾರಂಗಳನಾರೈದು.

ಬಳಿಕ ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಂಗಳೊಳಗೆ ಮಖಾ, ಮೃಗ ಶಿರಾ, ಹಸ್ತ, ಸ್ವಾತೀ, ಮೂಲ, ಅನುರಾಧ, ರೋಹಿಣಿ ರೇವತಿ, ಉತ್ತರಾ,

ಉತ್ತರಾಷಾಢ, ಉತ್ತರಾಭಾದ್ರವೆಂಬ ಹನ್ನೊಂದು ಶುಭ ನಕ್ಷತ್ರಂಗಳು, ಉಳಿದ ವೆಲ್ಲಾ ಅಶುಭಂಗಳೆಂದು ನಕ್ಷತ್ರಂಗಳನುಪಲಕ್ಷಿಸಿ, ಬಳಿಕ ವಿಷ್ಕಂಭಾದಿ ವೈಧೃತಿ ಕಡೆಯಾದ ಇಪ್ಪತ್ತೇಳು ಯೋಗಂಗಳೊಳಗೆ, ವಿಷ್ಕಂಭ, ಶೂಲ, ಗಂಡ, ಅತಿಗಂಡ, ವ್ಯಾಘಾತ, ವಜ್ರ, ಧೃತಿ, ಧ್ರುವ, ವೈಧೃತಿ, ವ್ಯತೀಪಾತ, ಪರಿಘವೆಂಬ ಏಕಾದಶ ಯೋಗಂಗಳೆ ಅಶುಭಂಗಳು, ಮಿಕ್ಕ ಹದಿನಾರು ಯೋಗಂಗಂಳೇ ಶುಭಂಗಳೆಂದು ಯೋಗಂಗಳಂ ಸಂಯೋಗಿಸಿ, ಬಳಿಕ ಶಕುನಿ ಮೊದಲಾದ ಭದ್ರೆ ಕಡೆಯಾದ ಹನ್ನೊಂದು ಕರಣಂಗಳೊಳಗೆ, ಶಕುನಿ, ಚತುಷ್ಕ, ನಾಗ, ಕಿಂಸ್ತುಘ್ನ, ವಣಿಜೆ, ಭದ್ರೆಯೆಂಬವಾರು ಕರಣಂಗಳೇ ಅಶುಭಂಗಳು, ಉಳಿದೈದು ಕರಣಂಗಳೇ ಶುಭಂಗಳೆಂದು ಕರಣಂಗಳಂ ಪರೀಕ್ಷಿಸಿ.

ಬಳಿಕ ಶುಭತಿಥಿಯಿಂ ಶ್ರೀಯುಂ, ಶುಭವಾರದಿಂದಾಯುಂ, ಶುಭನಕ್ಷತ್ರದಿಂ ಪಾಪಕ್ಷಯ, ಶುಭಯೋಗದಿಂ ರೋಗನಿವೃತ್ತಿ, ಶುಭಕರಣದಿಂ ಕಾರ್ಯಸಿದ್ಧಿಗಳಪ್ಪವಾಗಿ, ಮಂತ್ರಜಪ ಪ್ರಾರಂಭದಲ್ಲಿವೆಲ್ಲಮಂ ಸರ್ವಥಾ ವಿಚಾರಿಸಬೇಕೆಂಬುದನಂಗೀಕರಿಸಿ. ೨೩೭

ಜಪಮಾಲಿಕಾ ಲಕ್ಷಣ :

ಮತ್ತಮಾ ಮಂತ್ರಜಪಕ್ಕೆ ಮೊದಲು,ಮಾಲಿಕೆಯುಂ ಸಂಪಾದಿಸಬೇಕಾಗಿಹುದು.ಅಲ್ಲಿ ಉತ್ತರೋತ್ತರ ಗುಣವಿಶಿಷ್ಟವಾದ ಮಾಲಿಕೆಗಳೊಳಗೆ ಅಂಗುಲಿಗಳಿಂದಾದರು, ಅಲ್ಲದೆ ಆ ಅಂಗುಲಿಗಳಲ್ಲಿ ಮಧ್ಯಮ ಅನಾಮಿಕೆಗಳೆರಡರ ಮಧ್ಯವೆರಡು ರೇಖೆಗಳೇ ಮೇರುವಾಗಿ, ಮಿಕ್ಕ ಮಧ್ಯಾಂಗುಲೀಯ ಅಗ್ರದ ರೇಖೆಯಿಂ ತೊಡಗಿ, ಪ್ರದಕ್ಷಿಣವಾಗಿ ಹತ್ತುರೇಖೆಗಳನಂಗುಷ್ಠಾಗ್ರದಿಂ ಮುಟ್ಟಿ ಮುಟ್ಟಿ ಮಾಳ್ಪುದೇ ನಿತ್ಯ ಕರ್ಮಾದಿಕಕ್ಕೆ. ಶಂಖದ ಮಣಿಮಾಲೆಯೇ ಐಶ್ವರ್ಯಾದಿಕಕ್ಕೆ. ಸ್ಫಟಿಕದಮಾಲೆಯೇ ಮೋಕ್ಷಾದಿಕಕ್ಕೆ, ಪದ್ಮಾಕ್ಷ ಮಣಿಮಾಲಿಕೆಯೇ ಪುಷ್ಟಿ ಲಕ್ಷ್ಮ್ಯಾದಿಗಳಿಗೆ, ಪುತ್ರಜೀವಿಯ ಮಣಿಮಾಲೆಯೇ ಪುತ್ರ ಪಶು ಧಾನ್ಯಾಭಿವೃದ್ಧಿಗಳಿಗೆ. ಪವಳದ ಮಣಿಮಾಲೆಯೆ ವಶ್ಯ ಧನಧಾನ್ಯ ಸೌಭಾಗ್ಯ ಮುಕ್ತ್ಯಾದಿಗಳಿಗೆ. ಮುಕ್ತಾಮಣಿಮಾಲೆಯೆ ಸರ್ವವಿದ್ಯಾದಿಗಳಿಗೆ. ಮಾಣಿಕ್ಯದ ಮಣಿಮಾಲೆಯೆ ಲೋಕವಶ್ಯ, ಸ್ತ್ರೀವಶ್ಯಾದಿಗಳಿಗೆ ಮರಕತ ಶಿಲೆಗಳ ಮಣಿಮಾಲೆಯೆ ಶತ್ರು ಜಯಾದಿಗಳಿಗೆ, ಕುಶಗ್ರಂಥಿಯೆ ಪಾಪಕ್ಷಯ ವಿದ್ಯಾವೃದ್ಧ್ಯಾದಿಗಳಿಗೆ. ಸುವರ್ಣ ರಜತಂಗಳ ಮಣಿಮಾಲೆಗಳೇ ಶ್ರೀ ಸ್ತ್ರೀ ಕಾಮ್ಯ ಕರ್ಮಾದಿಗಳಿಗೆ. ಮಾತೃಕಾಕ್ಷರಮಾಲೆಯೇ ವಾಕ್ಸಿದ್ಧ್ಯಾದಿಗಳಿಗೆ. ಪಾದರಸದ ಮಣಿಮಾಲೆಯೆ ಪೂರ್ವೋಕ್ತ ಸಕಲ ಕಾರ್ಯಂಗಳಿಗೆ. ರುದ್ರಾಕ್ಷಮಾಲೆಯೇ ಭೋಗ ಮೋಕ್ಷಂಗಳಿಗಪ್ಪವೆಂಬುದಂ ಒಪ್ಪುಗೊಂಡು.

ಬಳಿಕಾ ರುದ್ರಾಕ್ಷ ಮಾಲಿಕೆಯಲ್ಲಿ ಮೇರು ಶೂನ್ಯಮಾದ ಹನ್ನೊಂದು ಮಣಿಮಾಲಿಕೆಯಿಂದೇಕಾದಶರುದ್ರ ಪ್ರೀತಿ. ಹದಿನೈದು ಮಣಿಮಾಲಿಕೆಯಿಂದಭಿಚಾರ

ಕ್ರಿಯೆ, ಇಪ್ಪತ್ತೈದು ಮಣಿಮಾಲಿಕೆಯಿಂದೆ ಮುಕ್ತಿ. ಇಪ್ಪತ್ತಾರು ಮಣಿ ಮಾಲಿಕೆಯಿಂ ಧನವೃದ್ಧಿ. ಇಪ್ಪತ್ತೇಳು ಮಣಿ ಮಾಲಿಕೆಯಿಂ ಸರ್ವಾರ್ಥಸಿದ್ಧಿ. ಇಪ್ಪತ್ತೆಂಟು ಮಣಿಮಾಲಿಕೆಯಿಂ ಪುಷ್ಟಿ. ಮೂವತ್ತು ಮಣಿಮಾಲಿಕೆಯಿಂದರ್ಥ ಲಬ್ಧಿ. ಮೂವತ್ತೆರಡು ಮಣಿಮಾಲಿಕೆಯಿಂ ಜಯಲಕ್ಷ್ಮಿ. ಐವತ್ತು ಮಣಿಮಾಲಿಕೆಯಿಂ ಕಾಮ್ಯಕರ್ಮ ಪ್ರವೃದ್ಧಿ, ಐವತ್ತನಾಲ್ಕು ಮಣಿಮಾಲಿಕೆಯಿಂ ಸರ್ವಸಿದ್ಧಿ. ನೂರು ಮಣಿಮಾಲಿಕೆಯಿಂ ಕಾರ್ಯ ಪ್ರವೃದ್ಧಿ. ನೂರೈದು ಮಣಿಮಾಲಿಕೆಯಿಂ ಭೋಗ ಮೋಕ್ಷಂಗಳು. ನೂರೆಂಟು ಮಣಿಮಾಲಿಕೆಯಿಂ ಭುಕ್ತಿ ಮುಕ್ತಿಗಳಹ ವೆಂಬುದನೊಡಂಬಟ್ಟು. ೨೩೭

ಬಳಿಕಾ ಮಾಲಿಕೆಗಳಿಗೆ ಆಮಳಕಫಲ ಪ್ರಮಾಣಿನ ಮಣಿಯೇ ಉತ್ತಮ. ಬದರಿಫಲ ಪ್ರಮಾಣಿನ ಮಣಿಯೇ ಮಧ್ಯಮ, ಚಣಕ ಪ್ರಮಾಣಿನ ಮಣಿಯೇ ಕನಿಷ್ಟವಹುದವರಲ್ಲಿ, ಅತಿಸ್ಥೂಲ, ಅತಿಸೂಕ್ಷ್ಮ, ಭಿನ್ನ, ಲಘು, ವ್ರಣ ಕಂಟಕ, ಜೀರ್ಣ, ಪೂರ್ವಧಾರಣಾದಿ ದೋಷವಿಲ್ಲದೆ, ಧೃಢ, ವ್ಯಕ್ತ, ಸುವರ್ಣ, ದೃಷ್ಟಿ, ಪ್ರೀತಿ ಮೊದಲಾದ ಸಲ್ಲಕ್ಷಣಂಗಳನುಳ್ಳ ಮಣಿಗಳಿಂದಾಯಾಯಾ ಮಾಲಿಕೆಗಳಿಗೆ ಚಿನ್ನ ಬೆಳ್ಳಿ ತಾಮ್ರ ಸೀಸ, ಕಬ್ಬುನದ ಸರಿಗೆಗಳಾಗಲಿ, ಪಂಚವರ್ಣದ ಪಟ್ಟೆ ನೂಲಾಗಲಿ, ಕಾರ್ಪಾಸದೆಳೆಯಾಗಲವರಲ್ಲಿ, ನವೀನವಾದ ಪವಿತ್ರವಪ್ಪ ಸೂಕ್ಷ್ಮವಾದಿಪ್ಪತ್ತೇಳೆಳೆಗಳನೆ ಸಮಭಾಗದಿಂ ಮುಪ್ಪುರಿಗೂಡಿದುದೆ ಉತ್ತಮ, ಇಪ್ಪತ್ತೊಂದೆಳೆಯಿಂ ಮುಪ್ಪುರಿಗೂಡಿದುದೆ ಮಧ್ಯಮ, ಹದಿನೇಳೆಳೆಯಿಂ ಮುಪ್ಪುರಿಗೂಡಿದುದೆ ಕನಿಷ್ಟ ಮಣಿಮಾಲೆಗಹುದೆಂದರಿದು. ೨೩೮

ಮಾಲಿಕಾರಚನಾದಿ ಮಂತ್ರಂಗಳು :

"ಓಂ ಶುಭಾತ್ಮನೇ ಪರಮಾತ್ಮನೇನಮಃ" ಎಂಬ ಮಂತ್ರದಿಂ ಹೊಸೆದು, ಸೂತ್ರಮಂ ಮಾಡಿ, ಮೇಲಾಸೂತ್ರಮಂ ಪಿಡಿದುದೇ ಮೂಲವಹುದು. ಹುರಿಗೂಡಿದುದೆ ಅಗ್ರವಹುದೆಂದರಿದು, "ಓಂ ಹೃದಯಾಯನಮಃ" ಎಂಬ ಮಂತ್ರದಿಂದಾ ಸೂತ್ರಮಂ ಸುಗಂಧಲೇಪನಾದಿಗಳಿಂ ಸಂಸ್ಕರಿಸಿ. ಮೇಲೆ "ಓಂ ಭವಾಯನಮಃ" ಎಂಬ ಮಂತ್ರದಿಂದುದಕಮಂ ಮಂತ್ರಿಸಿ, "ಓಂ ನಂ ಸದ್ಯೋಜಾತಾಯನಮಃ" ಎಂಬ ಮಂತ್ರದಿಂ ಮಣಿಗಳಂತೊಳೆದು "ಓಂ ಮಂ ವಾಮದೇವಾಯನಮ" ಎಂಬ ಮಂತ್ರದಿಂದಾಮಣಿಗಳನೊರಸೂದು, ಮೇಲೆ "ಓಂ ಶಿಂ ಅಘೋರಾಯನಮಃ" ಎಂಬ ಮಂತ್ರದಿಂ ಧೂಪವನಿಕ್ಕಿ, "ಓಂ ವಾಂ ತತ್ಪುರುಷಾಯನಮಃ" ಎಂಬ ಮಂತ್ರದಿಂದಾ ಮಣಿಪುಂಜವನರ್ಚಿಸಿ, "ಓಂ ಯಂ ಈಶಾಯನಮಃ" ಎಂಬ ಮಂತ್ರದಿಂ ಪ್ರತ್ಯೇಕಮಣಿಗಳಂ ಮಂತ್ರಿಸುತ್ತ ಇಂತು ಪರಿಶುದ್ಧಿಗೆಯ್ದು, ಬಳಿಕ "ಓಂ ಶಿವಚೈತನ್ಯ ರೂಪಾಯಪ್ರಣವಾತ್ಮಕಾಯನಮಃ" ಎಂಬ ಮಂತ್ರದಿಂ ಸ್ಥೂಲವಾದ ಮಣಿಗಳನಾ ಸೂತ್ರ ಮೂಲದಲ್ಲಿ ಸೂಕ್ಷ್ಮವಾದ ಮಣಿಗಳನದರಗ್ರದಲ್ಲಿ

ಗೋಪುಚ್ಛದಾಕಾರವಪ್ಪಂತೆ, ಸೇರುವೆಯರಿದು ಮುಖಮುಖಂಗಳಂ ಸಂಯೋಗಿಸಿ, ಸರಂಗೊಳಿಸಿ ಮೇಲೆ ಮಣಿಮಣಿಗಳೊರಸದಂತೆ "ಓಂ ಬ್ರಹ್ಮಸ್ವರೂಪಾಯ ಸರ್ವಜ್ಞಾಯ ನಮಃ" ಎಂಬ ಮಂತ್ರದಿಂದೆರಡು ಸುತ್ತಿನ ಗಂಟನಿಕ್ಕಿಬಿಗಿದು, ಮೇಲೆ ಮೂಲಾಗ್ರಂಗಳನೊಂದುಗೂಡಿ, ಬೇರೆ ಗಣನೆಯೊಳಗಲ್ಲದೊಂದು ಮಣಿ, ಯನು "ಓಂ ಶಿಖಾಮಧ್ಯಸ್ಥಿತ ರೂಪಾಯನಮಃ" ಎಂಬ ಮಂತ್ರದಿಂ ಮೇರು ವೆಂದು ಕಲ್ಪಿಸಿ ಪೋಣಿಸುತ್ತದರ ಮೇಲೆರಡು ಸುತ್ತಿನ ಗಂಟನಿಕ್ಕಿ ಬಂಧಿಸಿ ಜಪ ಮಾಲಿಕೆಯನಿಂತನುಗೊಳಿಸಿ.

ಬಳಿಕ ಶ್ರೀ ಗುರುವಿನ ಹಸ್ತದಿಂದಾ ಮಾಲಿಕೆಗೆ ಪಂಚಗವ್ಯ ಪಂಚಾಮೃತಂ ಗಳಿಂ "ಓಂ" ಎಂಬ ಮಂತ್ರದಿಂದಭಿಷೇಕಂಗೆಯ್ದು, ಮೇಲೆ "ಓಂ" ಮಂತ್ರದಿಂದವೆ ಜಲಸ್ನಾನಮಾಡಿ,ಮೇಲೆ ಗಂಧಪುಷ್ಪಾದಿಗಳಿಂ ಪ್ರತ್ಯೇಕ ಮಣಿಗಳಂ ಮುಟ್ಟಿ ಮುಟ್ಟಿ "ಓಂ" ಎಂಬ ಮಂತ್ರದಿಂದರ್ಚಿಸಿ ನೈವೇದ್ಯ ತಾಂಬೂಲಾದಿಗಳಂ ಸಮರ್ಪಿಸಿ, ಮೇಲೆ ದಂಡನಮಸ್ಕಾರ ಪ್ರದಕ್ಷಿಣೆ ಮೊದಲಾದ ವಿಧಿಗಳಿಂ ಗುರೂಪದೇಶದಿಂ ಜಪ ಮಾಲಿಕೆಯಂ ಪಡೆದು.

ಬಳಿಕ ತಾನು ಜಪಂಗೆಯ್ವಲ್ಲಿ ಮೊದಲು ಜಪಮಾಲಿಕೆಗೆ ಜಲಪುಷ್ಪಂಗಳಿಂ ದರ್ಘ್ಯಮಂ, ಶುಕ್ತಿಮುದ್ರೆಯಿಂ ಮಂತ್ರ ಸಹಿತಮಾಗಿಕೊಟ್ಟು, ಮೇಲಾ ಜಪ ಮಾಲಿಕೆಯಂ ಸ್ಥೂಲಾದಿ ಸೂಕ್ಷ್ಮಾಂತಮಾಗಿ ಜಪಂಗೆಯ್ವುದೇ ಉತ್ಪತ್ತಿ ಸ್ಥಿತಿ ಸೂಕ್ಷ್ಮಾದಿ ಸ್ಥೂಲಾಂತಮಾಗಿ ಜಪಿಸೂದೇ ಸಂಹಾರವೆಂದರಿವುದು. ಪರದೃಷ್ಟಿ ಗೋಚರಮಾಗದಂತೆ ಶೀಘ್ರವಲ್ಲದೆ, ಮಂದವಲ್ಲದೆ, ಪ್ರತ್ಯೇಕಮಣಿಗೊಮ್ಮೊಮ್ಮೆ, ಮಂತ್ರೋಚ್ಚಾರದಿಂ ಜಪಿಸುವಲ್ಲಿ ಪ್ರಮಾದವಶದಿಂ ಮಾಲಿಕೆ ಪತನಮಾಗೆ ಮಂತ್ರ ಹಾನಿಯಹುದಾಗಿ, ಮತ್ತೆ ಮೊದಲಿಂ ಪ್ರಾರಂಭಮಾಡಿ, ಮೇರುವನುಲ್ಲಂಘಿಸದೆ ಪ್ರದಕ್ಷಿಣಮಾಗಿ ತಿರುಹಿಕೊಂಡು ನಮಸ್ಕರಿಸಿ, ಮೇಲೆ ಮೊದಲಂತೆ ಪ್ರಾರಂಭಿಸು ತ್ತಿಂತು, ತನ್ನ ನೇಮದ ಜಪ ಸಮಾಪ್ತಿಯಾದ ಮೇಲೆಯು ಜಪಮಾಲಿಕೆಗರ್ಘ್ಯಮಂ ಕೊಟ್ಟು, ವಾಮಹಸ್ತದಿಂದಾ ಜಪಮಾಲಿಕೆಯಂ ಮುಟ್ಟದೆ, ಕಂಠಾದಿಗಳಲ್ಲಿ ಧರಿಸದೆ, ಜಪಕಾಲದಲ್ಲಿಯೇ ಜಪಂಗೆಯ್ದು ಸದಾ ಶುದ್ಧಸ್ಥಳದಲ್ಲಿರಿಸಬೇಕೆಂಬುದ ನಂಗೀಕರಿಸಿ. ೨೩೯

## ಜಪಾದಿಗಳಿಗೆ ಸ್ಥಾನಾದಿಗಳು :

ಬಳಿಕಗೃಹ, ಗೋಷ್ಠ, ನದೀತೀರ, ಸಮುದ್ರತಟ, ಗಿರಿ, ಪುಣ್ಯಾಶ್ರಮ, ದೇವಾಲಯಾದಿ ಗಳೇ ಜಪಕ್ರಿಯೆಗುತ್ತರೋತ್ತರ ವಿಶೇಷಸ್ಥಾನಂಗಳವರಲ್ಲಿ : ಜಲಸನ್ನಿಧಿ, ದೀಪ ಸನ್ನಿಧಿ, ಸೂರ್ಯಸನ್ನಿಧಿ, ಶಿವಸನ್ನಿಧಿಗಳೇಜಪವಿಧಿಗುತ್ತರೋತ್ತರ ವಿಶಿಷ್ಟ ಸನ್ನಿಧಿಗಳೆಂ ಬುದಂಅಂಗಂಗೊಂಡು. ಬಳಿಕಲ್ಲಿ ಪೂರ್ವಾಭಿಮುಖದಿಂ ವಶ್ಯ, ಅಗ್ನಿಯಿಂ, ವ್ಯಾಧಿ

ದಕ್ಷಿಣದಿಂದಭಿಚಾರ, ನೈರುತ್ಯದಿಂ ದ್ವೇಷ, ಪಶ್ಚಿಮದಿಂ ಧನಲಾಭ, ವಾಯುವ್ಯದಿಂ ದಾಕರ್ಶಣ, ಉತ್ತರದಿಂ ಶಾಂತಿ, ಈಶಾನ್ಯದಿಂ ಮೋಕ್ಷಸಿದ್ಧಿಗಳಪ್ಪವೆಂದು ದಿಗ್ವಿಚಾರವಂ ಮಾಡಿ. ೨೪೦

ಜಪಾಸನ ಫಲ :

ಬಳಿಕ ವಂಶಾಸನದಿಂ ದಾರಿದ್ರ್ಯ,ಪಾಷಾಣಾಸನದಿಂವ್ಯಾಧಿ, ಭೂಮ್ಯಾಸನದಿಂ ದುಃಖ, ಮಂತ್ರಹಾನಿಗಳು. ದಾರುಕಾಸನದಿಂ ದುರ್ಭಾಗ್ಯವ್ಯಾಧಿಗಳು. ತೃಣಾಸನದಿಂ ಯಶೋಹಾನಿ, ಪಲ್ಲವಾಸನದಿಂ ಚಿತ್ತಭ್ರಾಂತಿ, ಕೃಷ್ಣಾಜಿನಾಸನದಿಂ ಜ್ಞಾನವೃದ್ಧಿ, ವ್ಯಾಘ್ರಚರ್ಮಾಸನದಿಂ ಮೋಕ್ಷಲಕ್ಷ್ಮೀ, ವಸ್ತ್ರಾಸನದಿಂ ವ್ಯಾಧಿನಿವೃತ್ತಿ, ಕಂಬಲಾಸನದಿಂ ಸೌಖ್ಯತೆ, ಕೃಷ್ಣವಸ್ತ್ರಾಸನವೆ ಅಭಿಚಾರ ಕ್ರಿಯೆಗೆ, ರಕ್ತವಸ್ತ್ರಾಸನವೆ ವೇಶ್ಯಾದಿಕ್ರಿಯೆಗೆ, ಶುಭ್ರವಸ್ತ್ರಾಸನವೇ ಶಾಂತ್ಯಾದಿ ವಿಧಿಗೆ, ಚಿತ್ರಕಂಬಲಾಸನವೆ ಸರ್ವಾರ್ಥಸಿದ್ಧಿಗಳಿಗಹುದೆಂದು ಪೀಠಂಗಳಂ ಕುರುಹಿಟ್ಟು. ೨೪೧

ಆಸನಬಂಧ ಭೇದಂಗಳು :

ಬಳಿಕ ಎಂಭತ್ತನಾಲ್ಕು ಆಸನಂಗಳೊಳಗೆ, ಸಿದ್ಧಾಸನ, ಪದ್ಮಾಸನ ಸ್ವಸ್ತಿಕಾಸನ, ವೀರಾಸನ, ಗೋಮುಖಾಸನ, ಸುಖಾಸನಂಗಳೆ ಜಪಕರ್ಮಕ್ಕೆ ಯೋಗ್ಯವಾದಾಸನಂಗಳೆಂದು ಸುಸ್ಥಿರಾಸನನಾಗಿ. ೨೪೨

ಜಪಕಾಲದಲ್ಲಿ ಇರತಕ್ಕಬಗೆ :

ವಾಹನ, ಮಂಚ, ತಲೆಸುತ್ತು, ಕುಪ್ಪಸ, ದಿಗಂಬರ,ಮುಕ್ತಕೇಶ, ಅಶುಚಿತ್ವ, ಬಹುಭಾಷೆ, ಆಗುಳಿಕೆ, ಶೀನು, ತೂಗಡಿಕೆ, ನಿಷ್ಠೀವನ, ನೀಚಪ್ರಾಣಿದರ್ಶನ ಕ್ರೋಧ, ವ್ಯಾಕುಲತೆಗಳುಳ್ಳಾತನಾಗಿ ಜಪಿಸಲಾಗದೆಂದು, ನಿರ್ವಿಕಾರತ್ವದಿಂ ಕಾಷ್ಠಮೌನಿಯಾಗಿ, ಸಮಗ್ರೀವಶಿರ ಶರೀರಿಯಾಗಿ, ಮನೋದೃಷ್ಟಿಗಳೇಕಾಗ್ರತೆಯಿಂ ಧ್ಯಾನಮುದ್ರಾಸಮನ್ವಿತನಾಗಿ ಕುಳ್ಳಿರ್ದು. ೨೪೩

ಪ್ರಾಣಾಯಾಮ ಯೋಗ :

ಬಳಿಕ ಭಸ್ಮರುದ್ರಾಕ್ಷಾಭರಣ,ಗುರುಪಾದಸ್ಮರಣ ಪೂರ್ವಕಮಾಗಿ, ಮರಳಿ ಕನಿಷ್ಠ ಅನಾಮಿಕೆ ಅಂಗುಷ್ಠವೆಂಬಂಗುಲಿತ್ರಯದಿಂ ವಾಮದಕ್ಷಿಣನಾಸಾಪುಟವಂ ಪಿಡಿದು, ಮೇಲೆ ಬ್ರಹ್ಮಾದಿ ದೇವತೆಯುಪ್ಪ ಪ್ರಣವದಾದಿಯಾದ ಅಕಾರವಂ ಚಿಂತಿಸುತ್ತೆ, ಈ ಕಡೆಯೊಳ್ ಪವನನಂ ತನ್ನಶಕ್ತ್ಯಾನುಸಾರದಿಂದುದರದಲ್ಲಿ ಪೂರಿಸಿ ಬಳಿಕ ವಿಷ್ಣುವಧಿದೇವತೆಯಾದ ಪ್ರಣವ ಮಧ್ಯಮಪ್ಪ ಉಕಾರವಂ ಧ್ಯಾನಿಸುತ್ತಾ, ಪೂರಿಸಿದ ಪ್ರಾಣವನಲ್ಲಿಯೇ ಕುಂಭಿಸಿ, ಬಳಿಕ ರುದ್ರಾದಿದೇವತಾದಿಕಮಾದ ಪ್ರಣವದತ್ಯಂತಮಪ್ಪ ಮಕಾರವಂ ಸ್ಮರಿಸುತ್ತಂ, ಆ ಕುಂಭಿಸಿದ ವಾಯುವಂ ಮೆಲ್ಲನೆ ಪಿಂಗಲೆಯಿಂ ಪೂರಿಸುತ್ತುದರದಲ್ಲಿ ಕುಂಭಿಸುತ್ತೀಡೆಯಿಂ ರೇಚಿಸಿ ಮೇಲಾಯಾಯು ಮಂತ್ರ ಕ್ರಮ

ಬಿಡಿದು ಮತ್ತೆ ಪಿಂಗಲೆಯಿಂ ಪೂರಿಸುತ್ತದರದಲ್ಲಿ ಕುಂಭಿಸುತ್ತೀಡೆಯಿಂ ರೇಚಿಸು ತ್ತಿಂತು ಪ್ರಾಣಾಯಾಮ ತ್ರಯಮಂ ಮಾಡಿ. ೨೪೪

## ಮಂತ್ರಾಂಗಗಳು :

ಮೇಲೆ ಸಕಲ ಮಂತ್ರಂಗಳಿಗೆ ಸಾಧಾರಣಮಾದ ಋಷಿ, ಛಂದಸ್ಸು, ದೇವತೆ, ಬೀಜ, ಶಕ್ತಿ, ಕೀಲಕ, ಸ್ವರ, ವರ್ಣ, ಸ್ಥಾನ, ಅಕ್ಷರ, ಕಲೆ, ತತ್ವ, ಅರ್ಥ, ಚಿಂತ ನಾದಿಗಳೆಂಬ ಅಂಗಂಗಳಲ್ಲಿ ಮುಖ್ಯಮಾದ ಮಂತ್ರ, ಪ್ರಥಮದೃಷ್ಟವಾದ ಋಷಿಯನೆ ಮಸ್ತಕದಲ್ಲಿ, ಮಂತ್ರಾಕ್ಷರ ಸಂಖ್ಯಾರೂಪಮಪ್ಪ ಛಂದವನೆ ಮುಖದಲ್ಲಿ, ಮಂತ್ರವಾಚ್ಯವಾದಧಿದೇವತೆಯನೆ ಹೃದಯದಲ್ಲಿ, ಮಂತ್ರದೇವತಾನಾಮ ವರ್ಣ ವಿಶೇಷಮಾದ ಬೀಜವನೆ ನಾಭಿಯಲ್ಲಿ, ಮಂತ್ರಸಿದ್ಧಿಪ್ರದಮಾದ ಕುಂಡಲಿನ್ಯಾದಿ ಶಕ್ತಿಯನೆ ಗುಹ್ಯದಲ್ಲಿ, ಮಂತ್ರವಿಘ್ನನಿವರ್ತಕಮಾದ ಕೀಲಕವನೆ ಪಾದದಲ್ಲಿ, ಬೇರೆ ಮಂತ್ರರಕ್ಷಕರಾದ ಉಮೆ, ವಿಘ್ನೇಶ್ವರರನೆ ಕ್ರಮದಿಂ ವಾಮ ದಕ್ಷಿಣ ಭುಜದ್ವಯು ದಲ್ಲಿ, "ಋಷಯೇ ನಮಃ" ಎಂಬ ಮಂತ್ರಕ್ರಮದಿಂ ಚತುರ್ಥ್ಯಂತ ನಮಸ್ಕಾರ ಪೂರ್ವಕಮಾಗಿ ಆಯಾಯ ಸ್ಥಾನಂಗಳಂ ಮುಟ್ಟಿ ಮುಟ್ಟಿ ಸ್ಮರಣಂಗೆಯ್ದು, ಮತ್ತಮಾ ಮಂತ್ರಂಗಳಿಂ, ಕರನ್ಯಾಸ, ದೇಹನ್ಯಾಸ, ಅಂಗನ್ಯಾಸವೆಂಬ ನ್ಯಾಸತ್ರಯಂ ಗಳುತ್ಪತ್ತಿ, ಸ್ಥಿತಿ, ಸಂಹಾರಬೇದಂಗಳಂ ಪೂರ್ವೋಕ್ತ ಕ್ರಮದಿಂದರಿದು, ವಿಸ್ತರಿಸು ವದವರದಲ್ಲಿ ಗೃಹಸ್ಥಂಗೆ, ಮುತ್ತೈದೆಯರಿಗೆ, ವಿಧವೆಯರಿಗೆ ಸ್ಥಿತಿನ್ಯಾಸವಹುದು ಬ್ರಹ್ಮಚಾರಿಗುತ್ಪತ್ತಿ ನ್ಯಾಸವಹುದು. ವಾನಪ್ರಸ್ಥಯತಿಗಳ್ಗೆ ಸಂಹಾರ ನ್ಯಾಸವಹುದೆಂದನುವದಿಸಿ. ೨೪೫

## ಜಪಾಂಗುಳಿ ವಿನಿಯೋಗಾದಿ :

ಬಳಿಕ ಅಂಗುಷ್ಠದಿಂ ಮೋಕ್ಷ, ತರ್ಜನಿಯಿಂ ಶತ್ರುಹಾನಿ, ಮಧ್ಯಾಂಗುಲಿ ಯಿಂದರ್ಥಸಿದ್ಧಿ, ಅನಾಮಿಕೆಯಿಂ ಶಾಂತಿ, ಕನಿಷ್ಠದಿಂ ರಕ್ಷಣೆಗಳಪ್ಪವಲ್ಲಿ, ಮಧ್ಯಾಂ ಗುಷ್ಠಯೋಗದಿಂ ಮಾಲಿಕೆಯಂ ಪಿಡಿದು ಜಪಂಗೆಯ್ವುದೇ ಕನಿಷ್ಠವೆನಿಸೂದು. ತರ್ಜನ್ಯಾಂಗುಷ್ಠಯೋಗದಿಂ ಜಪಿಸೂದೇ ಮಧ್ಯಮವೆನಿಸೂದು. ಅನಾಮ್ಯಂಗುಷ್ಠ ಯೋಗದಿಂ ಜಪಂಗೆಯ್ವುದೇ ಉತ್ತಮವೆನಿಸೂದು. ಬಳಿಕಲ್ಲಿ ಮಧ್ಯಾಂಗುಷ್ಠಂಗಳಿಂ ಭಾಷ್ಯಜಪಂಗೆಯ್ವುದು. ತರ್ಜನ್ಯಂಗುಷ್ಠಂಗಳಿಂದುಪಾಂಶು ಜಪಂ ಮಾಳ್ಪುದು. ಅನಾಮಿಕೆ ಮಧ್ಯಮಾಂಗುಷ್ಠಂಗಳಿಂ ಮಾನಸ ಜಪಂಗೆಯ್ವುದವರಲ್ಲಿ ಪರಶ್ರುತಿ ಗೋಚರವಪ್ಪಂತೆ ಉಚ್ಚರಿಪುದೇ ವಾಚಕವಹುದು. ಸ್ವಶ್ರುತಿ ಗೋಚರಮಾಗಿ ಓಷ್ಠ ಸ್ಪಂದನಮಾತ್ರಮಾಗುಚ್ಚರಿಪುದೆ ಉಪಾಂಶುವಹುದು. ಮಂತ್ರ ವಾಕ್ಯಾರ್ಥ ಚಿಂತನಂಗೆಯ್ವುದೇ ಮಾನಸವಹುದು. ಅವರೊಳಗೆ ವಾಚಕಜಪವೇ ಕ್ಷುದ್ರ ಕಾರ್ಯಂಗಳಿಗೆ, ಉಪಾಂಶುಜಪವೇ ಸಕಲಸಿದ್ಧಿಗಳಿಗೆ, ಮಾನಸಜಪವೇ ಮುಕ್ತಿ ಗಹುದೆಂದು ನಿಯಾಮಿಸಿ. ೨೪೬

ನವಾವರಣಂಗಳು :

ಬಳಿಕಾ ಮಂತ್ರಂಗಳ ವಾಚ್ಯ ವಾಚಕ ಸಂಬಂಧವರಿದು ಮೇಲೆ ಪಂಚಬ್ರಹ್ಮ ಷಡಂಗಗಳೆ ಪ್ರಥಮಾವರಣ ; ಅನಂತಾದ್ಯಷ್ಟ ವಿದ್ಯೇಶ್ವರರೆರಡನೆಯಾವರಣ ; ಉಮೆ ಚಂಡೇಶ್ವರ ನಂದಿಕೇಶ್ವರ ಮಹಾಕಾಳ ಭೃಂಗಿರಿಟಿ ಗಣಪತಿ ವೃಷಭ ಷಣ್ಮುಖರೆಂಬ ಅಷ್ಟಗಣೇಶ್ವರರೆ ಮೂರನೆಯಾವರಣ ; ಇಂದ್ರಾದಿ ಲೋಕ ಪಾಲಾಷ್ಟಕರ್ ಬ್ರಹ್ಮವಿಷ್ಣುಗಳು ನಾಲ್ಕನೆಯಾವರಣ ; ವಜ್ರಾದಿ ಪದ್ಮ ಚಕ್ರಂಗಳೆಂಬ ದಶಾಯುಧಂಗಳೈದನೆಯಾವರಣ ; ಬ್ರಾಹ್ಮಿಯಾದಿ ಸಪ್ತಮಾತೃಕೆಯರಾರನೆಯಾವರಣ ; ಅಷ್ಟವಸುಗಳೇಳನೆಯಾವರಣ ; ಏಕಾದಶರುದ್ರರೆಂಟನೆಯಾವರಣ ; ಆದಿತ್ಯಾದಿ ನವಗ್ರಹಗಳೊಂಭತ್ತನೆಯಾವರಣವಹುದಾಗಿ ಪಂಚಾಕ್ಷರಾದಿ ಮಂತ್ರದೇವತೆಯಾವರಣ ಸಹಿತಮಾಗಾದರು, ನಿರಾವರಣಮಾಗಾದರೂ, ಧ್ಯಾನಿಸುತ್ತೆ ಜಪಿಸೂದಾಧ್ಯಾನದಲ್ಲಿ ಅಭಿಚಾರ ಗ್ರಹೋಚ್ಚಾಟನಾದಿಗಳಿಗೆ ಕೃಷ್ಣವರ್ಣರೂಪದಿಂ, ವಶ್ಯಾದಿಗಳಿಗೆ ರಕ್ತವರ್ಣರೂಪದಿಂ, ಮುಕ್ತ್ಯಾದಿಗಳಿಗೆ ಶುಕ್ಲವರ್ಣರೂಪದಿಂ ಧ್ಯಾನಿಸೂದು. ೨೪೭

ಧ್ಯಾನಕ್ರಮ ಫಲಾದಿಗಳು :

ಬಳಿಕಾ ಧ್ಯಾನಕ್ರಮದಲ್ಲಿ ಮಂತ್ರಾಧಿದೇವತೆಗೆ ಅಘೋರಾದಿ ಘೋರಮೂರ್ತಿಯೆಂದು, ಸದಾಶಿವಾದಿ ಮಿಶ್ರಮೂರ್ತಿಯೆಂದು, ಸಾಂಬಶಿವಾದಿ ಶಾಂತಮೂರ್ತಿಯೆಂದು ತ್ರಿವಿಧ ಮೂರ್ತಿಗಳುಂಟವರಲ್ಲಿ, ಘೋರಮೂರ್ತಿಧ್ಯಾನದಿಂ ಪಾಪ ರೋಗ ರಿಪುಕ್ಷಯಾದಿಗಹವು. ಮಿಶ್ರಮೂರ್ತಿಧ್ಯಾನದಿಂ ಚಿರಕಾಲಕ್ಕೆ ಸಕಲ ಸಿದ್ಧ್ಯಾದಿಗಳಹವು. ಶಾಂತಮೂರ್ತಿಧ್ಯಾನದಿಂ ಶೀಘ್ರ ಚಿರಕಾಲವಲ್ಲದೆ ಶಾಂತಿಪ್ರಜ್ಞಾದಿಗಳಹವೆಂದರಿದು ಧ್ಯಾನಿಸೂದು. ೨೪೮

ದ್ವಿವಿಧ ಜಪಂಗಳು :

ಆ ಧ್ಯಾನ ರಹಿತಮಾಗಿಮಾಳ್ಪುದೇ ಅಗರ್ಭಜಪವು, ಆ ಧ್ಯಾನಯುಕ್ತಮಾಗಿ ಮಾಳ್ಪುದೇ ಸಗರ್ಭಜಪವು, ಅವರೊಳಗೆ ಅಗರ್ಭಜಪಕ್ಕೆ ಸಗರ್ಭಜಪವೇ ಕೋಟಿ ಮಡಿ ಮಿಗಿಲೆಂದನುಸಂಧಾನಿಸಿ. ೨೪೯

ಮಂತ್ರಗರ್ಭಗಳು :

ಬಳಿಕಾ ಮಂತ್ರಂಗಳಿಗೆ ಆತ್ಮಗರ್ಭ, ಶಿವಗರ್ಭ, ಶಕ್ತಿಗರ್ಭವೆಂಬ ಗರ್ಭತ್ರಯಂಗಳವರಲ್ಲಿ, ಆತ್ಮಗರ್ಭಮಾಗೆ ಫಲಿಸಲಸಮರ್ಥವಹುದು. ಶಿವಗರ್ಭಮಾಗೆ ನಪುಂಸಕವಹುದು, ಶಕ್ತಿಗರ್ಭಮಾಗೆ ಭುಕ್ತಿ, ಮುಕ್ತಿ ಪ್ರದವಹುದೆಂದೀಕ್ರಮವರಿದು, ೨೫೦

ಜಪೋಪ ಸಂಹಾರ :

ಇಂತು ವಿಧ್ಯುಕ್ತಮಾಗಿ ಜಪಂಗೈದು, ಜಪ ಸಮಾಪ್ತಿಯಾದಮೇಲೆಯು ಪೂರ್ವೋಕ್ತಮಾದ ವಿಧಿಗೆ ವಿಪರೀತಮಾದ ಪ್ರಾಣಯಾಮತ್ರಯದಿಂ, ಮೊದಲಂತೆ ಛಂದ, ಋಷಿ, ದೇವತಾದಿಗಳಂ ಸ್ಮರಿಸಬೇಕೆಂದು ವಿಧಿಸಿ, ಬಳಿಕೀ ಮಂತ್ರಾದಿ ಸಕಲ ಕ್ರಿಯೆಗಳಂ ಶ್ರೀ ಗುರೂಪದೇಶದಿಂದಭ್ಯಾಸಂಗೆಯ್ಯೆ, ಸರ್ವಾರ್ಥಸಿದ್ಧಿಯಹುದಲ್ಲದೆ ಯುಕ್ತಿಶಾಸ್ತ್ರ ಬಲದಿಂದನುಷ್ಠಿಸಲಾಗದೆಂದು ದೃಢವಿಡಿದು. ೨೫೧

ಶಿವಪೂಜಾವಿಷಯ :

ಅನಂತರಗದೊಳಿಂತು ಭಸಿತ ರುದ್ರಾಕ್ಷ ಪಂಚಾಕ್ಷರಮಂತ್ರವಿಧಾನ ಸಿದ್ಧನಾದ ಶುದ್ಧಶೈವಂಗೆ ಶಿವಾರ್ಚನವೇ ಕರ್ತವ್ಯವಹುದಲ್ಲಿ ಮೂಲಾಭಿಷೇಚನದಿಂ ತರು ಶಾಖೋಪಶಾಖಾದಿಕವೆಲ್ಲ ಪಲ್ಲವಿಸುವಂತೆ, ಪ್ರಾಣೋಪಹಾರದಿಂ ಸಕಲೇಂದ್ರಿಯ ಸಮೂಹವೆಲ್ಲಂ ಪರಿಪೋಷಿಸುವಂತೆ, ಶಿವಾರ್ಚನವೊಂದರಿಂದಖಿಳ ದೇವತಾ ಸಂತುಷ್ಟಿ ಯಹುದಾಗಿ, ಚಂದ್ರಸೂರ್ಯಮಂಡಲ, ವಹ್ನಿ, ಗಂಗಾ, ಸ್ಥಂಡಿಲ, ಕಲಶ, ಪುಸ್ತಕ, ಸಾಲಗ್ರಾಮಾದಿ ಪೂಜಾಸ್ಥಾನಂಗಳೊಳಗೆ ಲಿಂಗಾದಿಷ್ಠಾನವೇ ಮಹಾ ವಿಶೇಷವೆಂದು. ೨೫೨

ಶಿವಲಿಂಗಭೇದ.

ಶಿಲಾಮಯ ಲಿಂಗವನೆ ಬ್ರಹ್ಮನು, ಇಂದ್ರನೀಲಮಯ ಲಿಂಗವನೆ ವಿಷ್ಣು, ರತ್ನಮಯ ಲಿಂಗವನೆ ಇಂದ್ರನು, ಸುವರ್ಣಮಯ ಲಿಂಗವನೆ ಕುಬೇರನು, ರಜತ ಮಯ ಲಿಂಗವನೆ ವಿಶ್ವದೇವರ್ಕಳು. ಪಿತ್ತಳಮಯ ಲಿಂಗವನೆ ವಾಯು, ಕಾಂಸ ಮಯ ಲಿಂಗವನೆ ವಸುಗಳು. ಮೃಣ್ಮಯಲಿಂಗವನೆ ಅಶ್ವಿನಿದೇವರ್ಕಳು. ಸ್ಫಟಿಕಮಯ ಲಿಂಗವನೆ ವರುಣನು. ಅನ್ನಮಯ ಲಿಂಗವನೆ ಅಗ್ನಿ. ತಾಮ್ರಮಯಲಿಂಗವನೆ ಸೂರ್ಯನು. ಮುಕ್ತಾಫಳಲಿಂಗವನೆ ಚಂದ್ರನು. ಬಹುವರ್ಣದ ಲಿಂಗವನೆ ನಕ್ಷತ್ರಂ ಗಳು, ಮಣಿಮಯಲಿಂಗವನೆ ಬುಧನು, ಕಬ್ಬುನಲಿಂಗವನೆ ಶುಕ್ರನು, ವಿದ್ರುಮ ಲಿಂಗವನೆ ಮಂಗಳನು, ಮಾಣಿಕ್ಯಲಿಂಗವನೆ ಬೃಹಸ್ಪತಿ, ತಾಮ್ರದಲಿಂಗವನೆ ಶನಿ, ಕುಸುಮದಲಿಂಗವನೆ ಸಪ್ತಋಷಿಗಳು, ನೀಲದಲಿಂಗವನೆ ಧ್ರುವನು. ಸ್ಥಾಣುನಾಮ ಲಿಂಗವನೆ ಮಾರ್ಕಂಡೇಯನು. ದರ್ಭಮಯಲಿಂಗವನೆ ವಶಿಷ್ಠನು. ಸದಾಶಿವನಾಮ ಲಿಂಗವನೆ ಸನತ್ಕುಮಾರಾದಿ ಯೋಗಿಗಳು, ಪ್ರವಾಳಮಯಲಿಂಗವನೆ ನಾಗರ್ಕಳು, ಆಯೋಮಯಲಿಂಗವನೆ ರಾಕ್ಷಸರು ತ್ರಪುಮಯಲಿಂಗವನೆ ಪಿಶಾಚರು. ತ್ರಿಲೋಹ ಮಯ ಲಿಂಗವನೆ ಗುಹ್ಯಕರು, ವಜ್ರಮಯ ಲಿಂಗವನೆ ಮಾತೃಗಳು. ಪ್ರಸೂನಮಯ ಲಿಂಗವನೆ ಮನ್ಮಥನು, ನಾನಾಕಾರದ ಲಿಂಗವನೆ ಲಕ್ಷ್ಮಿ ಸರಸ್ವತಿ ಶಚಿ ಮಾತೃಕಾದಿ ಮಹಾಶಕ್ತಿ ದೇವತೆಗಳಿಂತು ಬೇರೆ ಬೇರೆ ಶಿವಲಿಂಗವನೆ ಪೂಜಿಸಿ ತಮ್ಮ ತಮ್ಮ

ಸಂಪದಗಳಲ್ಲಿ ಸುಖಮಿರ್ಪರೆಂತೆಂದೊಡೆ ; ಕರ್ಮಟ ಮನುಷ್ಯರೊಳವರಿವರೆನ್ನದೆಲ್ಲರು ಸ್ವಯಂಭು ಲಿಂಗ, ಬಾಣಲಿಂಗ, ಚಲಲಿಂಗ, ಸಂಕೀರ್ಣಲಿಂಗ ಪ್ರಾಣಲಿಂಗವೆಂಬ ಪಂಚವಿಧ ಲಿಂಗಂಗಳಲ್ಲಿ ತಮ್ಮ ತಮ್ಮ ಶಕ್ತ್ಯಾನುಸಾರಮಾದರ್ಚನಾ ತತ್ಪರರಾಗವೇಳ್ಕುವೆಂಬುದನಂಗೀಕರಿಸಿ. ೨೫೩

## ಪಂಚಶುದ್ಧಿಗಳು :

ಮತ್ತಮಾ ಶಿವಪೂಜಾವಿಧಿಗೆ ದೇಶ ಕಾಲ ಸ್ಥಾನ ದ್ರವ್ಯಾದ್ರವ್ಯಪ್ರಯೋಜನಾದಿಗಳಂ ; ತಾಂತ್ರಿಕ ವೈದಿಕ ವೆಂಬೆರಡು ಪೂಜಾಭೇದಂಗಳಂ : ಅಂತಃಶೌಚ, ಬಾಹ್ಯ ಶೌಚವೆಂಬೆರಡು ಶೌಚಭೇದಂಗಳಂ ; ಶೋಷಣ, ದಹನ, ಪ್ಲಾವನ ಕ್ರಿಯೆಗಳಂ; ಆತ್ಮಶುದ್ಧಿ, ಸ್ಥಾನಶುದ್ಧಿ, ದ್ರವ್ಯಶುದ್ಧಿ, ಲಿಂಗ ಶುದ್ಧಿ, ಮಂತ್ರಶುದ್ಧಿಯೆಂಬ ಪಂಚಶುದ್ಧಿಗಳಂ ವಿಸ್ತರಿಸೂದು. ಅವರಲ್ಲಿ, ಶೌಚಾಚಮನ, ಸ್ನಾನ, ಭಸ್ಮರುದ್ರಾಕ್ಷಧಾರಣ, ಕವಚಮಂತ್ರ, ಕಲಾನ್ಯಾಸ ಧ್ಯಾನಾದಿ ರಚನಂಗೆಯ್ವುದೇ ಆತ್ಮಶುದ್ಧಿಯೆನಿಸೂದು. ೨೫೪

ಸಮ್ಮಾರ್ಜನಾನುಲೇಪನ, ವರ್ಣಕ, ಗಂಧ, ಪುಷ್ಪ, ಧೂಪ, ದೀಪಾದಿ ನಿರ್ಮಲೋಪಕರಣಂಗಳಿಂ ಚೌಕಮನಲಂಕರಿಪುದೇ ಸ್ಥಾನ ಶುದ್ಧಿಯೆನಿಸೂದು. ಜಲಗಂಧಾಕ್ಷತಾ ಪುಷ್ಪಾದಿಗಳಂ ನಿರೀಕ್ಷಿಸಿ, ಭಸ್ಮ ಮಂತ್ರವಾರಿಗಳಿಂ ಸಂಪ್ರೋಕ್ಷಣಂಗೆಯ್ವುದೇ ದ್ರವ್ಯಶುದ್ಧಿ ಎನಿಸೂದು. ಅನಾಮಿಕೆ ಮಧ್ಯಮೆಗಳ ಮಧ್ಯದಲ್ಲಿ ನವೀನ ಕುಸುಮವಿಡಿದು ಅಂಗುಷ್ಠ ತರ್ಜನಿಗಳಿಂ ಮೊದಲು ಆ ನಿರ್ಮಾಲ್ಯಮಂ ತ್ಯಜಿಸಿ ಲಿಂಗಪೀಠಮಂ ವಾರಿಯಿಂ ಪ್ರಕ್ಷಾಳನಂಗೆಯ್ವುದೇ ಲಿಂಗಶುದ್ಧಿಯೆನಿಸೂದು. ಸಕಲ ಪೂಜಾರ್ಥಮಾಗಿ "ಓಂ ನಮಃ ಶಿವಾಯ ಸ್ವಾಹಾ" ಎಂದು ಉಚ್ಚರಿಪುದೇ ಮಂತ್ರಶುದ್ಧಿಯೆನಿಸೂದಿಂತೆಂದೊಡಂಬಟ್ಟು. ೨೫೫

## ಮುದ್ರಾ ವಿವೇಕ :

ಬಳಿಕ ಅಸ್ತ್ರಮುದ್ರೆ ಚಕ್ರಮುದ್ರೆ, ಮಹಾಮುದ್ರೆ, ಶೋಧನೀಮುದ್ರೆ, ಪಂಚಮುಖಿಮುದ್ರೆ, ಸುರಭಿಮುದ್ರೆ, ದ್ರವ್ಯಮುದ್ರೆ, ಮುಕುಳಿತಮುದ್ರೆ, ಪದ್ಮಮುದ್ರೆ, ಶತಕರ್ಣಮುದ್ರೆ, ಶಕ್ತಿಮುದ್ರೆ, ಬೀಜಮುದ್ರೆ, ಶಾಂತಿಮುದ್ರೆ, ಆಹ್ವಾನಮುದ್ರೆ, ಮನೋರಮಮುದ್ರೆ, ಧ್ವಜಮುದ್ರೆ, ಲಿಂಗಮುದ್ರೆ, ಗಾಯತ್ರಿಮುದ್ರೆ, ಕಾಲಕಂಠಮುದ್ರೆ, ಶೂಲಮುದ್ರೆ, ನಮಸ್ಕಾರಮುದ್ರೆ, ಯೋನಿಮುದ್ರೆ, ಉಚ್ಚಾಟನಮುದ್ರೆ, ಆಚ್ಛಾದನಮುದ್ರೆ, ಸಂಹಾರಮುದ್ರೆಯೆಂಬ ಸಕಲ ಮುದ್ರಾಲಕ್ಷಣವನರಿದಾಯಾ ಕ್ರಿಯೆಗಳಲ್ಲಿ ಪ್ರಯೋಗಿಸಿ. ೨೫೬

## ಶಿವಪೂಜಾ ಯೋಗಪೀಠ

ಬಳಿಕ ಕೂರ್ಮ, ಅನಂತ, ಸಿಂಹ, ಪದ್ಮ, ವಿಮಲ, ಯೋಗಾದಿ ಪೀಠಂಗಳಲ್ಲಿ ಮುಖ್ಯಮಾದ ಸಿಂಹಾಸನಕ್ಕೆ ಶ್ವೇತ, ರಕ್ತ, ಪೀತ, ಶ್ಯಾಮಲವರ್ಣದ ಸಿಂಹಾಕಾರ

ಮಾದ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯವೆಂಬ ನಾಲ್ಕೇ ಕ್ರಮದಿಂದಾಗ್ನೇಯಾದಿ ವಿದಿಕ್ಕಿನ ಪಾದಚತುಷ್ಟಯಂಗಳುಂ, ರಾಜಾವರ್ತ ಪ್ರಭೆಯ ರೂಪಮಾದ ಅಧರ್ಮ ಅಜ್ಞಾನ, ಅವೈರಾಗ್ಯ, ಅನೈಶ್ವರ್ಯವೆಂಬ ನಾಲ್ಕೆ ಕ್ರಮದಿಂ ಪೂರ್ವಾದಿ ದಿಕ್ಕಿನ ಪಾದ ಚತುರ್ವಿಧಂಗಳುಂ. ಮೇಲಣಿನಾದಿಗಳೇ ಪೂರ್ವಾದ್ಯಷ್ಟದಿಕ್ಕಿನ ದಳಂಗಳು, ವಾಮಾದಿ ಸರ್ವಭೂತ ದಮನಾಂತಮಾದ ರುದ್ರರೆ ಪೂರ್ವಾದ್ಯಷ್ಟ ದಿಕ್ಕಿನ ಕೇಸರಂಗಳು. ವೈರಾಗ್ಯವೇ ಮಧ್ಯಕರ್ನಿಕೆ, ವಾಮೆ ಮೊದಲು ಮನೋನ್ಮನಿ ಕಡೆಯಾದ ನವಶಕ್ತಿಗಳೇ ಪೂರ್ವಾದಿ ಮಧ್ಯಾಂತಮಾದ ಕರ್ನಿಕಾ ಬೀಜಂಗಳು. ಬಳಿಕದರ ಮೇಲಗ್ನಿ ರವಿಶಶಿಮಂಡಲತ್ರಯಂಗಳು, ಬಳಿಕ್ಕವರ ಮೇಲೆ ತಮೋ ರಜ ಸತ್ವಗುಣಂಗಳವರ ಮೇಲೆ, ಜೀವಾತ್ಮ ಅಂತರಾತ್ಮ ಪರಮಾತ್ಮರುಗಳವರ ಮೇಲೆ ಆತ್ಮತತ್ವ, ವಿದ್ಯಾತತ್ವ, ಶಿವತತ್ವಂಗಳಿಂತು ಪರಿವಿಡಿದಾಯತಮಾದ ಸಿಂಹಾಸನಮಂ ಪರಿಕಲ್ಪಿಸಿ. ೨೫೭

## ಶಿವಾರ್ಚನ ಸಂಗ್ರಹ :

ಮತ್ತಮಾ ಸಿಂಹಾಸನಾಗ್ರಹದಲ್ಲಿ ಶಿವಲಿಂಗಕ್ಕಾಹ್ವಾನ, ಸ್ಥಾಪನ, ಸನ್ನಿಧಾನ, ಸನ್ನಿರೋಧನ, ಸಮ್ಮುಖೀಕರಣಮೆಂಬ ಕ್ರಿಯೆಗಳಂ ಮಾಡಿ, ಬಳಿಕ ಪೂಜಾ ಪ್ರಾರಂಭದಿಂ ತೊಡಗಿ ಪೂಜಾ ಸಮಾಪ್ತಿ ಪರ್ಯಂತರಂ ಕ್ಷಾಲದ ಪಾತ್ರಜಲಮಂ ಮರಳಿ ಮರಳಿ ಮುಟ್ಟಿ ಮುಟ್ಟಿ ಸಕಲಕ್ರಿಗಳನೀಶ್ವರಾರ್ಪಣಂಗೆಯ್ಯಬೇಕೆಂದರಿದು. ೨೫೮

## ಶಿವ ಪೂಜಾಸಾಮಗ್ರಿ :

ಬಳಿಕ ನದಿ ತಟಾಕ ಕೂಪಂಗಳಲ್ಲಿ ಸ್ವಾದು, ಮಿಶ್ರ, ಲವಣಂಗಳಾದ ಕ್ರಮದಿಂದುತ್ತಮ ಮಧ್ಯಮ ಕನಿಷ್ಠಮೆಂಬ ಪೂಜಾಯೋಗ್ಯಮಾದ ಉದಕ ಭೇದಂಗಳಂ, ಬಳಿಕ ಬಿಳಿಸಾಸುವೆ ಕುಸುಮ ದೂರ್ವೆ ಕೋಷ್ಟ ಲಾಮಂಚ ಕರ್ಪೂರಮೆಂಬಾರು ಪಾದ್ಯ ದ್ರವ್ಯಂಗಳಂ, ಕುಶಾಗ್ರ ತಿಲ ಬಿಳಿಸಾಸುವೆ ಜವೆ ನೆಲ್ಲು ಕ್ಷೀರಮೆಂಬಾರು ಅರ್ಘ್ಯದ್ರವ್ಯಂಗಳಂ, ಮುಖಾಂಬುಕ್ಕೆ ಘೃತ ದಧಿ ಮಧು ಮಿಶ್ರಮಾದ ಮಧುಪರ್ಕದ್ರವ್ಯಂಗಳಂ, ಫಲ ಕಚೋರ ಕರ್ಪೂರ ಕೋಷ್ಟ ಕುಂಕುಮ ಏಲಕ್ಕಿ ಎಂಬಾರು ಆಚಮನೀಯದ್ರವ್ಯಂಗಳಂ, ಪಂಚಗವ್ಯ ಪಂಚಾಮೃತಂಗಳಂ, ಗೋಧೂಮಚೂರ್ಣ ಮುದ್ಗಚೂರ್ಣ ಗಂಧಾದ್ಯುದ್ವರ್ತನ ದ್ರವ್ಯಂಗಳಂ, ಮಂದೋಷ್ಣಾದಿ ಸ್ನಾನವಾರಿಗಳಂ, ಗಂಧೋದಕ ಪುಷ್ಪೋದಕ ಸ್ವರ್ಣೋದಕ ರತ್ನೋದಕ ಮಂತ್ರೋದಕಂಗಳಂ; ಮಹಾಸ್ನಾನೋದಕಂಗಳಂ, ವಿಧಿ ನಯಶುಭ್ರಾದಿ ಗುಣಯುಕ್ತ ಭಸಿತಂಗಳಂ, ಪಟ್ಟು ದೇವಾಂಗ ಶುಭ್ರಚಿತ್ರಾದಿ ಸುವಸ್ತ್ರಂಗಳಂ, ಸುವರ್ಣ ರಜತ ಪಟ್ಟು ಸೂತ್ರಾದಿ ಯಜ್ಞೋಪವೀತಂಗಳಂ, ಕಿರೀಟಾದ್ಯಾಭರಣಂಗಳಂ, ಚಂದನ ಅಗರು ಕಸ್ತೂರಿ ಕರ್ಪೂರ ತಮಾಲದಳ ಕುಂಕುಮ

ಲಾಮಂಚ ಕೋಷ್ಟಂಗಳೆಂಬ ಅಷ್ಟಗಂಧಂಗಳಂ, ಜವೆ ಸಾಸುವೆ ಬಿಳಿ ಸಾಸುವೆ ತಿಲ ತಂಡುಲ ಮುಕ್ತಾಫಲಾದ್ಯಕ್ಷತೆಗಳಂ, ಶುಭ್ರ ರಕ್ತ ಕೃಷ್ಣ ವರ್ಣಕ್ರಮದಿಂ ನಂದ್ಯಾವರ್ತಾದಿ ಕಮಲಾದಿ ನಿಲೋತ್ಪಲಾದಿ ಸಾತ್ವಿಕ ರಾಜಸ ತಾಮಸಪುಷ್ಪಂಗಳಂ, ದೂರ್ವೆ ತುಲಸಿ ಬಿಲ್ವಾದಿ ಪತ್ರಜಾಲಂಗಳಂ, ಕರಿಯಗರು ಬಿಳಿಯಗರು ಗುಗ್ಗುಳ ಶ್ರೀಗಂಧ ಅರಗು ಬಿಲ್ವಫಲ ತುಪ್ಪ ಜೇನುತುಪ್ಪ ಸಜ್ಜರಸ ಕರ್ಪೂರವೆಂಬ ದಶಾಂಗ ಧೂಪಂಗಳಂ, ತೈಲವರ್ತಿಘೃತ ಕರ್ಪೂರವೆಂಬ ದೀಪಸಾಧನಂಗಳಂ, ಹರಿದ್ರಾನ್ನ ಪರಮಾನ್ನ ಮುದ್ಗಾನ್ನ ಕೃಸರಾನ್ನ ದಧ್ಯಾನ್ನ ಗುಡಾನ್ನವೆಂಬ ಷಡ್ವಿಧಾನ್ನಾದಿ ನೈವೇದ್ಯಂಗಳಂ, ಪೂಗ ಪರ್ಣ ಚೂರ್ಣ ಕರ್ಪೂರಾದಿ ತಾಂಬೂಲ ದ್ರವ್ಯಂಗಳಂ ಬೇರೆ ಬೇರೆ ಸಂಪಾದಿಸಿ. ೨೫೯

ಉಪಚಾರ ಸಂಗ್ರಹ :

ಬಳಿಕ ಪರಮ ಪವಿತ್ರ ದ್ರವ್ಯಂಗಳಿಂ ಮಾಳ್ಪ ಉಪಚಾರಂಗಳೊಳಗೆ ತ್ರಿವಿಧೋಪಚಾರ ಪಂಚೋಪಚಾರ ಅಷ್ಟೋಪಚಾರ ದಶೋಪಚಾರ ಷೋಡಶೋಪಚಾರ ಚತುರ್ವಿಂಶತ್ಯುಪಚಾರ ದ್ವಾತ್ರಿಂಶದುಪಚಾರಂಗಳುಂಟವರಲ್ಲಿ, ಆವಾಹನ ಆಸನ ಪಾದ್ಯ ಅರ್ಘ್ಯ ಆಚಮನೀಯ ಸ್ನಾನ, ವಸ್ತ್ರ ಯಜ್ಞಸೂತ್ರ, ಭೂಷಣ, ಗಂಧ, ಅಕ್ಷತೆ, ಪುಷ್ಪ ಧೂಪ ದೀಪ ನೈವೇದ್ಯ ಮುಖವಾಸನ ನೀರಾಜನ ದರ್ಪಣ ಫಲಾರ್ಪಣ ತಾಂಬೂಲ ಪ್ರದಕ್ಷಿಣ ನಮಸ್ಕಾರ ಸ್ತೋತ್ರ ಪುರಾಣಪಠಣ ಛತ್ರ ಚಾಮರ ವ್ಯಜನ ಶಯ್ಯೆ ಸಂಗೀತ ನೃತ್ಯ ವಾದ್ಯ ಆತ್ಮಾರೋಪಣವೆಂಬ ದ್ವಾತ್ರಿಂಶದುಪಚಾರಂಗಳಂ ಸಮಂತ್ರಕಮಾಗಿ ಮಾಡಿ, ಬಳಿಕೀ ಸಮಸ್ತ ಪೂಜಾ ದ್ರವ್ಯಂಗಳಿಲ್ಲದಿರೆ ಜಲಮಾತ್ರ ಪುಷ್ಪಮಾತ್ರದಿಂದರ್ಚಿಸಲಾ ಸಕಲ ಸಾಂಗಿಕ ಮಾದರ್ಚನೆಗೆ ಸಮಾನವಹುದಾಗಿ ಪೂಜಕಂಗೆ ಶ್ರದ್ಧಾ ಭಕ್ತಿಯೆ ಮುಖ್ಯವಾಗಿಹುದು. ಆ ಭಕ್ತಿಯೆ ಈಶ್ವರ ವಿಷಯಮಾದ ಶ್ರವಣ ಕೀರ್ತನ ಸ್ಮರಣ ಪಾದಸೇವೆ ಪೂಜೆ ವಂದನೆ ದಾಸ್ಯ ಸಖ್ಯ ಆತ್ಮಾರ್ಪಣವೆಂಬ ನವವಿಧಮಾಗಿರ್ಪುದೆಂದರಿದಿಂತು ಪೀಠಸ್ಥ ಶಿವಲಿಂಗದ ಬಹಿರಂಗದ ಪೂಜೆಯಂ ವಿಸ್ತರಿಸಿ. ೨೬೦

ಅಂತರಂಗ ಶಿವಾರ್ಚನೆ :

ಬಳಿಕಿಹಲೋಕ ಫಲವ ನಿಶ್ಚೈಸುವಾತನಾದೊಡಂ, ಪರಲೋಕಫಲಮಂ ಕಾಮಿಸುವಾತನಾದೊಡಂ, ಸಕಲ ಜನಕ್ಕೆ ಹಿತಮಂ ಬಯಸುವಾತನಾದೊಡಂ, ಬಾಹ್ಯದ್ರವ್ಯಂಗಳಿಂದಿಂತು ಶಿವಲಿಂಗ ಪೂಜೆಯಂ ಮಾಡಲ್ವೇಳ್ಕುಮೆಂದು ನಿಶ್ಚೈಸಿ, ಬಳಿಕ ನಿಷ್ಕಾಮನಾದ ಮೋಕ್ಷಾಧಿಕಾರಿಗಭ್ಯಂತರದಲ್ಲಿ ಮುಖ್ಯಮಾಗಿ ಜ್ಞಾನಮಯಮಾದ ಪೂಜೆಯೇ ಕರ್ತವ್ಯಂ. ಪೂಜೋಪಚಾರಂಗಳಲ್ಲಿ ಉಪಚಾರಮಂ ಉಪಚರ್ಯಮಾದ ದೇವತೆಯ ಗುಣಂಗಳನಾರೋಪಿಸಿ ಮಾಡಲ್ತಕ್ಕುದೆಂತೆಂದೊಡೆ. ೨೬೧

## ಅಂತರಂಗ ಶಿವಯೋಗ ಸಂಗ್ರಹ :

ಮೊದಲಂತರಂಗದಲ್ಲಿ ಶಿವಧರ್ಮವೇ ಕಂದ, ಸುಜ್ಞಾನವೇ ನಾಳ, ಅಷ್ಟ ಮಹದೈಶ್ವರ್ಯವೇ ದಳ, ರುದ್ರೇಶ್ವರಾಧಿಕವೇ ಕೇಸರ, ವೈರಾಗ್ಯವೇ ಕರ್ಣಿಕೆಗಳಾಗಿ, ಚಂದ್ರಪ್ರಭಾಮಯವೆನಿಸಿ ಮೆರೆವ ಹೃದಯಕಮಲದ ಸೋಮಸೂರ್ಯಾಗ್ನಿ ಮಂಡಲತ್ರಯ ಮಧ್ಯದಲ್ಲಿ, ಸತ್ತೆಂಬ ದಿವ್ಯಮೂರ್ತಿಯಿಂ ಚಿತ್ತೆಂಬ ಕಾಂತಿಯಿಂ ಆನಂದವೆಂಬ ಲಾವಣ್ಯದಿಂ ತತ್ವಪರಿಕಲ್ಪಿತಮಾದಾಭರಣಾಯುಧಾದಿಗಳಿಂದಲಂ ಕೃತಮಾಗಿ ಸ್ಫಟಿಕ ಘಟದೊಳಗಣ ದೀಪದಂತೆ, ಹೊರಗೆ ಬೆಳಗುತ್ತಿರ್ದ ಈಶ್ವರನಂ ಪರಿಭಾವಿಸಿ. ೨೬೨

ಬಳಿಕ ಸರ್ವಾಧಾರನೀಶ್ವರನೆಂಬ ಬುದ್ಧಿಯೆ ಆಸನ, ಪರಮಾತ್ಮನು ಪರಿಪೂರ್ಣನೆಂಬ ಮತಿಯೆ ಆಹ್ವಾನ. ಜಗತ್ತೆಲ್ಲಂ ಶಿವನ ಶ್ರೀಪಾದವೆಂಬ ತಿಳಿವೆ ಪಾದ್ಯ, ಸುಖಾಂಬುಧಿ ಶಂಭುಲಿಂಗವೆಂಬಭಿಸಂಧಾನವೆ ಅರ್ಘ್ಯ. ಪರನು ಪವಿತ್ರ ಸ್ವರೂಪನಭವನೆಂಬರಿವೆ ಆಚಮನೀಯ. ನಿತ್ಯನಿರ್ಮಲನೀಶ್ವರನೆಂಬುಪಲಬ್ಧಿಯೆ ಸ್ನಾನ. ಜಗವೆಲ್ಲವನತಿಕ್ರಮಿಸಿರ್ದ ಶುದ್ಧವಿದ್ಯೆಯೆ ವಸ್ತ್ರ. ತ್ರಿಗುಣಾಗಮಾತೀತ ಮಾದ ಜ್ಞಾನ ಭಾವನೆಯೆ ಯಜ್ಞಸೂತ್ರ. ಚೈತನ್ಯವೇ ಜಗದಲಂಕಾರವೆಂಬ ಪ್ರಭೆಯೇ ಆಭರಣ, ಶುದ್ಧ ಚಿಚ್ಛಕ್ತಿಯೇ ಅನುಲೇಪನ, ಕಾರುಣ್ಯವೇ ಅಕ್ಷತೆ, ಪ್ರಣವಾತ್ಮಕ ಸತ್ಯವಚನವೇ ಪುಷ್ಪ, ವಿಷಯ ವಾಸನಾವಿಲಯವೇ ಧೂಪ, ಜಗದ್ವರ್ತಿವಿಡಿದುಜ್ವಲಿಪ ಪರಂಜ್ಯೋತಿಯೇ ದೀಪ, ಜಗವೆಲ್ಲವಂ ಕಬಳೀಕರಿಸಿ ಕೊಂಡಿರ್ಪಾತ್ಮನೇ ನಿತ್ಯತೃಪ್ತನೆಂಬ ಸಂವಿತ್ತೇ ನೈವೇದ್ಯ. ತ್ರಿಗುಣಂಗಳನೊಳ ಕೊಂಡು ನಿಂದ ಜ್ಞಪ್ತಿಯೇ ತಾಂಬೂಲ, ಸೋಹಂ ಭಾವದ ವೃತ್ತಿಯೇ ಪ್ರದಕ್ಷಿಣ, ಸಮಸ್ತ ತತ್ವಂಗಳನತಿಕ್ರಮಿಸಿ ನಿಂದ ನಿಜವೇ ನಮಸ್ಕಾರ, ಶಿವೈಕ್ಯ ಸ್ಥಿತಿಯೇ ವಿಸರ್ಜನವೆಂಬೀ ಉಪಚಾರಂಗಳಿಂದಂತಃಪೂಜೆಯಂ ರಚಿಸಿ. ೨೬೩

ಬಳಿಕೀತು ಹೃತ್ಕಮಲಕರ್ಣಿಕಾ ಮಧ್ಯದಲ್ಲಿ ಗುರುವಿತ್ತಿಷ್ಟ ಲಿಂಗದಲ್ಲಿ ಸಿಂಹಾಸನದಲ್ಲಿ ಮಾಡುವಾತ್ಮಾರ್ಥಕವಾದ ಪೂಜಾಭೇದಂಗಳಂ. ಗ್ರಾಮ ನದೀ ತೀರಾದಿ ಕ್ಷೇತ್ರಂಗಳಲ್ಲಿ, ದೇವದಾನವಾದಿಗಳಿಂ ಪ್ರತಿಷ್ಠಿತಮಾದ ಲಿಂಗಂಗಳಲ್ಲಿ ಮಾಳ್ಪ ಪರಾರ್ಥ ಪೂಜೆಗಳಂ ಬಿಡದಾಚರಿಸುತ್ತಂ. ೨೬೪

## ಪರಾರ್ಥಪೂಜಾದಿ ಪ್ರಾಯಶ್ಚಿತ್ತಾದಿಗಳು :

ಪರಮಾರ್ಥ ಪೂಜೆಯೊಳೀಶ್ವರಾವರಣಮಾಗ ವೃಷಭ, ಭಾಸ್ಕರ, ವೀರಭದ್ರ, ಮಾತೃಕೆ, ಸ್ಕಂದ, ಕ್ಷೇತ್ರಪಾಲ, ಬ್ರಹ್ಮ, ವಿಷ್ಣು, ರುದ್ರರೆಂಬ ದೇವತೆಗಳನವರವರ ಸ್ಥಾನ ಕ್ರಮವರಿದಾರಾಧಿಸುತ್ತೆ, ಬೇರೆ ಬೇರೆ ಸ್ಥಾಪಿತಂಗಳಾದ ವಿಷ್ಣ್ವಾದಿ ದೇವತಾ ಭಜನೆಗಳಂ ತ್ಯಜಿಸಿ, ತನ್ನಿಷ್ಟಲಿಂಗವು ಚೋರಾದಿಗಳಿಂ ಪೋಗಿ ಬಾರದಿರ್ದೊಡೆ ಒಂದುಲಕ್ಷ ಅಘೋರಮಂತ್ರ ಜಪದಿಂ ಶುದ್ಧಾತ್ಮನಾಗಿ, ಮೇಲಾಚಾರ್ಯನಿಂ

ವಿಧ್ಯುಕ್ತಮಾಗಿ ಮತ್ತೆ ಪಡೆದು ವ್ರತ ನಿಯಮಾದಿ ಲೋಪಮಾಗಲಷ್ಟೋತ್ತರಶತ ಗಾಯತ್ರಿ ಜಪದಿಂ ಪರಿಶುದ್ಧಿವಡೆದು, ಬಳಿಕ ಪರಮ ಪವಿತ್ರಮಾದ ಶಿವಪಾದೋದಕ ಸ್ವೀಕಾರ, ಶಿವಪ್ರಸಾದಾನ್ನ ಸೇವನೆ, ಶಿವಪ್ರಸಾದಾಂಬುಪಾನ, ಶಿವನಿರ್ಮಾಲ್ಯದಳ ಕುಸುಮ ಧಾರಣಂಗಳು ಸದ್ಬ್ರಾಹ್ಮಣರು ಮೊದಲಾದ ವಿಶಿಷ್ಟರ್ಗೆ ಕರ್ತವ್ಯ ವಹುದು. ಮಿಕ್ಕ ಪಾಪಾತ್ಮರ್ಗೆ ಪಾಷಾಂಡಿಗಳಿಗೆ ಪಾಪದಗ್ಧರಿಗೆ ಶಿವಸಂಸ್ಕಾರ ಹೀನರ್ಗೆ ನಾಸ್ತಿಕರ್ಗೆ ವೇದಬಾಹ್ಯರ್ಗೆ ಯೋಗ್ಯವಲ್ಲೆಂದು ಪರಿಭಾವಿಸುತ್ತಿಂತು ಸಕಲ ಸತ್ಕ್ರಿಯೆಗಳಿಂ ನಿರ್ಮಲಾಂತಃಕರಣನಾಗಿರ್ಪಾತನೇ ಶುದ್ಧಶೈವನಪ್ಪಂ. ೨೬೫

—0—

# ವೀರಶೈವಲಕ್ಷಣ

ಮತ್ತಮಾ ಪರಮೇಶ್ವರ ನಿರ್ಮಿತಮಾದ ಜಗತ್ತಿನಲ್ಲಿ ಚರಮ ಶರೀರಿಯೆನಿಸಿ ಕೊಂಡು ಸಮಸ್ತ ಶೈವರೊಳತಿ ವಿಶಿಷ್ಟನಾಗಿ; ಇತರ ಶೈವರಂತೆ ಕ್ರಿಯಾಬಾಹುಳ್ಯ ದಿಂದಲ್ಪ ಫಲಮಂ ಪಡೆಯದೆ, ಅಲ್ಪಕ್ರಿಯೆಯಿಂದನಂತ ಫಲಮಂ ಪಡೆವಾತನಾಗಿ; ಶಿವದೀಕ್ಷೆಯಿಂ ಮೇಲೆ ಸ್ನಾನ, ಭೋಜನ, ನಿದ್ರೆ, ಜಾಗರಣ, ಮಲ, ಮೂತ್ರ. ವಿಸರ್ಜನಾದಿ ಕಾಲಂಗಳಲ್ಲಿ ಅಶುಚಿ ಭಾವನೆ ದೋರದೆ, ಸದಾ ಲಿಂಗಾಂಗ ಸಂಬಂಧಿ ಯಾಗಿ, ಲಿಂಗಭೋಗೋಪಭೋಗಿಯಾಗಿ; ತನ್ನಿಷ್ಟಲಿಂಗದಲ್ಲಿ ಆಹ್ವಾನ, ವಿಸರ್ಜನ ಕ್ರಿಯೆಗಳಂ ಮಾಡದಾತನಾಗಿ, ತ್ರಿಕಾಲ ಲಿಂಗಾರ್ಚನಾಸಕ್ತನಾಗಿ; ಲಿಂಗಲೋಪ, ವ್ರತಲೋಪಂಗಳಲ್ಲಿ ಪ್ರಾಣತ್ಯಾಗವಲ್ಲದೆ ಬೇರೊಂದು ಪ್ರಾಯಶ್ಚಿತ್ತವಿಲ್ಲದಾತನಾಗಿ; ಗುರುನಿಂದೆ, ಶಿವನಿಂದೆ, ಜಂಗಮನಿಂದೆ, ಪ್ರಸಾದ ಪಾದೋದಕ ಭಸ್ಮಧಾರಣನಿಂದೆ ಶಿವಾಗಮ ಶಿವಕ್ಷೇತ್ರ ಶಿವಾಚಾರನಿಂದೆಗಳಂ ಸೈರಿಸದಾತನಾಗಿ ; ವಿಷ್ಣ್ವಾದಿ ದೇವತೆ ಗಳಂ ಲೆಕ್ಕಿಸದಾತನಾಗಿ; ಬಾಹ್ಯದಲ್ಲಿ ಲಿಂಗಲಾಂಛನವಿಲ್ಲದ ಭವಿಗಳೊಡನೆ ಏಕಾಸನ, ಶಯನ, ಯಾನ,ಸಂಪರ್ಕ,ಸಹಭೋಜನಾದಿಗಳಿಲ್ಲದಾತನಾಗಿ; ಅನೃತ,ಅಸ್ಥಿರವಾಕ್ಯ, ವಂಚನೆ, ಪಙ್ಕ್ತಿಭೇದ, ಉದಾಸೀನ, ನಿರ್ದಯವೆಂಬ ಅಂತರಂಗಭವಿಗಳಿಲ್ಲ ದಾತನಾಗಿ; ಶಿವಮಾಹೇಶ್ವರರಂ ಕಾಣುತಲೇಳುವುದು. ಇದಿರಾಗಿ ನಡೆವುದು, ಅವರ್ಗೊಡಿತಿರುಗುವುದು, ಪ್ರಿಯ ವಚನಮಂ ನುಡಿವುದು, ಗದ್ದುಗೆಯನಿಕ್ಕುವುದು ಅನ್ನಪಾನಾದಿಗಳಂ ಸಮರ್ಪಿಸೂದೆಂಬ ಮುಕ್ತಿ ಸೋಪಾನ ಸಪ್ತಕ್ರಮಯುಕ್ತನಾಗಿ, ಜಾತಿಸೂತಕ, ಜನನಸೂತಕ, ಪ್ರೇತಸೂತಕ, ಉಚ್ಛಿಷ್ಟಸೂತಕ, ರಜಃಸೂತಕವೆಂಬ ಪಂಚಸೂತಕವನಳಿದಾತನಾಗಿ; ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾ

ಚಾರ, ಗಣಾಚಾರವೆಂಬ ಪಂಚಾಚಾರನಿಷ್ಠನಾಗಿ; ದಾಸತ್ವ, ವೀರದಾಸತ್ವ, ಭೃತ್ಯತ್ವ ವೀರಭೃತ್ಯತ್ವ, ಸಮಯಾಚಾರತ್ವ, ಸಕಲಾವಸ್ಥಾನತ್ವಂಗಳೆಂಬ ಷಡ್ವಿಧಸಜ್ಜನಯುಕ್ತ ನಾಗಿ; ದೇಶ, ಕಾಲ, ಕಲ್ಪಿತಾದಿ ಲೌಕಿಕಾಚಾರಂಗಳಂ ಮೀರಿ ಸ್ವತಂತ್ರ ಶೀಲನಾಗಿ; ಶಿವಾತ್ಮರ್ಗೆ ಭೇದ, ಭ್ರಾಂತಿದೋರದಾತನಾಗಿ; ಉಪನಿಷದ್ವಾಕ್ಯಜನಿತ ವಿದ್ಯೆಯಲ್ಲಿ ರಮಿಸುವಾ ಶೈವನಪ್ಪುದರಿಂ ತತ್ಸಾಂಜ್ಞೆಯುಳ್ಳಾತನಾಗಿ; ಜಗತ್ಪೂಜ್ಯನಾಗಿರ್ಪಾ ತನೇ ವೀರಶೈವನಪ್ಪಂ. ೨೬೬

## ವೀರಶೈವ ಭೇದಗಳು :

ಬಳಿಕಾ ವೀರಶೈವನೆ ಕ್ರಿಯಾಭೇದದಿಂ ಸಾಮಾನ್ಯವೀರಶೈವನೆಂದು, ವಿಶೇಷ ವೀರಶೈವನೆಂದು, ನಿರಾಭಾರಿ ವೀರಶೈವನೆಂದು ತ್ರಿವಿಧನಾಗಿರ್ಪನವರಲ್ಲಿ, ಶ್ರೀಗುರು ವಿನ ಹಸ್ತಮಸ್ತಕ ಸಂಯೋಗದಿಂ ವಿಭೂತಿಯ ಪಟ್ಟದಿಂ, ಶಿವಮಂತ್ರೋಪದೇಶದಿಂ ಲಿಂಗಾಂಗಸಂಗಿಯಾಗಿ, ಹಸ್ತ ಮಸ್ತಕ ಕಂಠ ಕಕ್ಷೆ ವಕ್ಷಸ್ಥಲಾದಿಗಳಲ್ಲಿ ಶಿವಲಿಂಗ ಧಾರಕನಾಗಿ, ಏಕಕಾಲಮಾದೊಡಂ ತ್ರಿಕಾಲಮಾದೊಡಂ ಲಿಂಗಾರ್ಚನಾಸಕ್ತನಾಗಿ, ಗುರು ಲಿಂಗ ಭಸಿತಂಗಳಲ್ಲಿ ಭಕ್ತಿಯುಕ್ತನಾಗಿರ್ಪಾತನೇ ಸಾಮಾನ್ಯವೀರಶೈವ ನಪ್ಪಂ. ೨೬೭

## ಕ್ರಿಯಾಪಾದ—ದೀಕ್ಷಾಕ್ರಮ :

ಅನಂತರದಲ್ಲಿ ಶಾಂತಿದಾಂತ್ಯಾದಿ ಸಾಧನ ಸಂಪನ್ನನಾಗಿ, ಶ್ರೀ ಗುರುವಿನಿಂ ಶಾಸನೀಯನಪ್ಪುದರಿಂ ಶಿಷ್ಯನಾದಾತನು ಶುಭ ಕಾಲ ದೇಶಾದಿಗಳಂ ಪರೀಕ್ಷಿಸಿ, ಬಳಿಕಾಚಾರ್ಯರ್ ಸಂಪ್ರದಾಯಸಿದ್ಧನಾದ, ಸಕಲ ಸದ್ಗುಣ ಸಹಿತನಾದ ಶ್ರೀ ಗುರುವನೆಯ್ದಿ, ಮತ್ತಂ ಆ ಗುರುವಿನನುಮತದಿಂ ಶಿವಪೂಜಾ ಪರಾಯಣರಾದ ಕೀರ್ತಿಮಯರಾದ ನಾಲ್ವರು ಋತ್ವಿಕ್ಕುಗಳಂ ಸ್ನಾನ ಧವಲಾಂಬರಾಭರಣ ಗಂಧ ಪುಷ್ಪಾದಿಗಳಿಂದಲಂಕರಿಸಿ, ಬಳಿಕಾ ಶ್ರೀ ಗುರುವಿನಾಜ್ಞೆಯಿಂ, ತಾನಾ ರಾತ್ರಿಯಲ್ಲಿ ಕ್ಷೀರಾಹಾರಿಯಾಗಿರ್ದು, ಮೇಲೆ ಪ್ರಭಾತ ಸಮಯದಲ್ಲಿ ದಂತಧಾವಲ್ಯಂಗೆಯ್ದು, ಮಂಗಲ ಸ್ನಾನವಂ ಮಾಡಿ,ಧವಲಾಂಬರವನುಟ್ಟು ಪೊದೆದು,ಭಸಿತೋದ್ಧೂಳನಮಂ ರಚಿಸಿ, ತ್ರಿಪುಂಡ್ರಧಾರಣಮಂ ವಿಸ್ತರಿಸಿ, ರುದ್ರಾಕ್ಷಮಾಲೆಗಳಂ ಧರಿಸಿ, ಸುವರ್ಣಾಭರಣಾದಿಗಳಿಂ ಸಿಂಗರಂ ಬಡೆದು, ಬಳಿಕಾಚಾರ್ಯನ ಸಮೀಪಕ್ಕೆ ಬಂದು ಭಯಭಕ್ತಿಯಿಂದಷ್ಟಮಂತ್ರ ಪೂರ್ವಕದಿಂ ವಿನಯವಿನಮಿತನಾಗಿ, ಸುವರ್ಣಪುಷ್ಪಾ ದಿಗಳಿಂ ವಿತ್ತಾನುಸಾರವಾಗಿ ಗುರುಪೂಜನಂ ಗೆಯ್ದು, ಮರಳಿ ಗಂಧ ಪುಷ್ಪಾದಿಗಳಿಂ ಋತ್ವಿಕ್ಕುಗಳಂ ಭಜಿಸಿ, ಮೇಲೆ ಶ್ರೀಗುರುಮುಖ ಸಕಲಮಾಹೇಶ್ವರರಂ ಬಲ ವಂದು, ವಿಭೂತಿ ವೀಳಯಂಗಳಂ ಸಮರ್ಪಿಸೂದು. ೨೬೮

ಬಳಿಕ ಖನನ ದಹನ ಶೋಧನ ಸಂಪ್ರೋಕ್ಷಣ ಮರ್ದನ ಲೇಪನವೆಂಬ ಷಟ್ಕರ್ಮಂಗಳಿಂ, ಸಾರಣೆ ಕಾರಣೆ ತಳಿರತೋರಣ, ಕುಸುಮಸರವಿಸರ ಪಳವಳಿಗೆ

ಧೂಪಧೂಮಾದಿಗಳಿಂ ಪರಿಶೋಭೆ ವಡೆದು ಮನೋಹರಮಾದ ದೀಕ್ಷಾಮಂಟಪದಲ್ಲಿ ಗೋಚರ್ಮ ಮಾತ್ರದ ಭೂಮಿಯಂ ಚೌಕಮಾಗಿ, ಗೋರೋಜನ, ಗೋಮಯ, ಗೋಮೂತ್ರ, ಗೋಘೃತ, ಗೋದಧಿ ಗೋಕ್ಷೀರವೆಂಬ ಷಟ್ಸಮ್ಮಾರ್ಜನಂಗೆಯ್ದು, ಬಳಿಕ ಚೌಕಮಧ್ಯದಲ್ಲಿ ಪ್ರವಾಳ ಮೌಕ್ತಿಕ, ಶುಭ್ರಪಾಷಾಣ, ಸುವರ್ಣ, ಶ್ವೇತಾಭ್ರಕ, ತಂಡುಲಾದಿಗಳ ಚೂರ್ಣಂಗಳಿಂದಷ್ಟ ಕಮಲಮಂ ರಚಿಸಿ, ಮತ್ತದನಾವರಿಸಿ ಶಂಖ ಚಕ್ರ ಶೂಲ ಡಮರುಗ ಪರಶು ಗಂಟೆ ಛತ್ರ ಚಾಮರ ವೃಷಭಚರಣಾದಿ ವಿಚಿತ್ರ ವರ್ಣಕಮಂ ತುಂಬುತ್ತ, ಅದರ ಮೇಲೆ ಎಳ್ಳು ಜೀರಿಗೆ ಗೋದುವೆ ಅಕ್ಕಿ ಉದ್ದುಗಳೆಂಬ ಪಂಚಧಾನ್ಯವನಾದರೂ, ಕೇವಲ ತಂಡುಲವನಾದರೂ, ಮೂವತ್ತೆರಡಂಗುಲ ಪ್ರಮಾಣಿನ ಚತುರಸ್ರಮಾಗಿ ಹರಹುತ್ತದರ ಮೇಲೆ ತೀರ್ಥಾಂಬು ಪೂರ್ಣಮಾದ ಸುವರ್ಣಾದಿ ನವೀನ ಪಂಚಕಳಸಂಗಳಂ, ಪೂರ್ವ ದಕ್ಷಿಣ ಪಶ್ಚಿಮ ಉತ್ತರ ಮಧ್ಯಕ್ರಮದಿಂದಾಚಾರ್ಯನೇ ಸ್ಥಾಪಿಸುತ್ತಾ ಕಲಶಂಗಳಂ ಬೇರೆ ಬೇರೆ ನೂತನ ವಸ್ತ್ರಂಗಳಿಂ ಸುತ್ತಿ ನವ ಪಂಚತಂತುಗಳಿಂ ಪರಿವೇಷ್ಟಿಸಿ ಸುವರ್ಣಾದಿಗಳನವರೊಳಿರಿಸಿ. ೨೬೯

ಬಳಿಕ್ಕಾಮ್ರಪಲ್ಲವ ದೂರ್ವಾಂಕುರ ಪೂಗಕುಸುಮ ನಾಗವಲ್ಲಿದಳಾದಿಗಳಿಂದ ಆ ಕಳಸಂಗಳಂ ಕ್ರಮದಿಂ ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ ಈಶಾನವೆಂಬ ಪಂಚಬ್ರಹ್ಮಾತ್ಮಕವೆಂದು ಪರಿಭಾವಿಸಿ, ಮತ್ತಮಾ ಕಳಸಂಗಳ ಮಧ್ಯದಲ್ಲಿ ಪರಶಿವನಂ ಭಜಿಸಿ, ಮೇಲಗ್ರಾಸನದಲ್ಲಿ ಪೂರ್ವಾಭಿಮುಖನಾಗಿ ಪರಶಿವ ಸಂಜ್ಞಕನಾಗಿ ಕುಳ್ಳಿರ್ದ ಆಚಾರ್ಯನೇ ಮಧ್ಯದ ಕಳಸವನುಳಿದು ಪೂರ್ವಾದಿ ನಾಲ್ಕು ಕಳಸಂಗಳನೆ ಕ್ರಮದಿಂ ರೇವಣಸಿದ್ಧ, ಮರುಳಸಿದ್ಧ, ರಾಮದೇವ, ಪಂಡಿತಾರಾಧ್ಯರೆಂಬಾಚಾರ್ಯ ಸಂಪ್ರದಾಯಕರಾದ ಬೇರೆ ಬೇರೆ ಮಠ ಪೀಠಾಸನಾದಿ ಲಕ್ಷಣ ಲಕ್ಷಿತರಾದ ಆಯಾಯ ಋತ್ವಿಕ್ಕುಗಳಂ ಅರ್ಘ್ಯ ಗಂಧ ಪುಷ್ಪಾಕ್ಷತಾದಿಗಳಿಂ ಶ್ರೀ ಮತ್ಪಂಚಾಕ್ಷರ ಮಂತ್ರ ಪೂರ್ವಕಮಾಗಿ ಭಜಿಸುತ್ತ, ಅನಂತಗದಲ್ಲಿ ತನ್ನ ಶರೀರ ಅರ್ಥ ಪ್ರಾಣಾದಿಗಳಂ ಸದ್ಗುರುವಿಂಗೋಸುಗ ನಿವೇದಿಸಿ, ಸಾಷ್ಟಾಂಗ ಪ್ರಣತನಾಗಿ ಶಿಷ್ಯನು ಶ್ರೀಗುರುವಿನಾಣತಿಯಿಂದುತ್ತರಾಭಿಮುಖನಾಗಿ ಶ್ರೀ ಗುರುವಿನ ದಕ್ಷಿಣ ಭಾಗದಲ್ಲಿ ಚೌಕಸನ್ನಿಧಿಯಲ್ಲಿ ಸ್ವಸ್ತಿಕ ಮಂಡಲದ ಮೇಲೆ ಪದ್ಮಾಸನಾಸೀನನಾಗಿ ಋಜುಕಾಯನಾಗಿ ನಾಸಾಗ್ರ ನಿರೀಕ್ಷಣ ಲೋಚನಂಗಳನುಳ್ಳಾತನಾಗಿ, ಮುಕುಳಿತಕರ ಕಮಲನಾಗಿ, ಶಿವಮಂತ್ರೋಚ್ಚಾರಣೆ ಶಿವಧ್ಯಾನಾದಿಗಳಿಂ ಸಲ್ಲಕ್ಷಣಮಾಗಿ ಕುಳ್ಳಿರ್ದ ಶಿಷ್ಯನಂ ಶ್ರೀ ಗುರು ತನ್ನ ಕೃಪಾವಲೋಕನದಿಂ ದೀಕ್ಷಿಸಿ ಮೇಲೆ ಸಕಲ ಮಾಹೇಶ್ವರರಾಶೀರ್ವಾದನಾದಂ ಪೊಣ್ಮೆ, ಮಂಗಲವಾದ್ಯ ಧ್ವನಿಯುಣ್ಮಲೊಡನಾಚಾರ್ಯಾದಿ ಋತ್ವಿಕ್ಕುಗಳು ತಮ್ಮ ತಮ್ಮ ಕಳಸಂಗಳಂ ಕ್ರಮದಿಂದೆತ್ತಿ, ಬಳಿಕಾ ಕಳಸೋದಕಂಗಳಂ ದೂರ್ವಾಂಕುರದಿಂ ಗುರುವರ್ಯನಾ

ಶಿಷ್ಯನ ಶಿರಸ್ಸಿನಲ್ಲಿ ಸಂಪ್ರೋಕ್ಷಿಸಿ, ಮತ್ತಮಾ ಕಳಸಂಗಳನಲ್ಲಲ್ಲಿಯೇ ಸ್ಥಾಪಿಸಿ, ಬಳಿಕಾ ಕ್ರಮದಿಂ ಮತ್ತೆ ನೆಗಹುತ್ತಾ ಕಳಸೋದಕಂಗಳಂ ಮೊದಲಂತೆ ದೂರ್ವಾಂಕುರ ದಿಂದವೆ ಶಿಷ್ಯನ ಮಸ್ತಕದ ಮೇಲೆ ತಳಿದಿಂತು ಮೂರುವೇಳೆ ಅಘಮರ್ಷಣ ಸ್ನಾನಂಗೈದ ನಂತರದೊಳಾಚಾರ್ಯನಾ ಶಿಷ್ಯನ ಲಲಾಟಾದಿ ಸ್ಥಾನಂಗಳಲ್ಲಿ ಶಿವ ಮಂತ್ರದಿಂದಭಿಮಂತ್ರಿತಮಾದ ಶ್ರೀಮದ್ವಿಭೂತಿಯಂ ಧರಿಸಿ, ವಿಧಿ ದುರ್ಲಿಪಿಗಳಂ ತೊಡೆದು ಕಾಯಶುದ್ಧ್ಯಾತ್ಮಶುದ್ಧ್ಯಾದಿಗಳಂ ಮಾಡಿ ಕಲಾನ್ಯಾಸ ಮಂತ್ರನ್ಯಾಸಾ ದಿಗಳಂ ವಿಸ್ತರಿಸಿ, ಅಣವಾದಿ ಮಲತ್ರಯಮಂ ಕಳೆದು, ಶುದ್ಧಾತ್ಮನಂ ಮಾಡಿ, ಮೇಲೆ ಶ್ರೀ ಗುರು ತನ್ನ ದಕ್ಷಿಣ ಹಸ್ತಮಂ ಗಂಧಾಕ್ಷತೆ ಪುಷ್ಪಾದಿಗಳಿಂ ಶಿವಮಂತ್ರ ದಿಂದರ್ಚಿಸಿ, ಬಳಿಕಾ ತೇಜೋಮಯಮಾದ ಶಿವಹಸ್ತಮಂ ಶಿಷ್ಯನ ಮಸ್ತಕದಲ್ಲಿ ಮೂಲ ಮಂತ್ರೋಚ್ಚಾರಣದಿಂದಿರಿಸುತ್ತ ಶಿಷ್ಯನ ಮಸ್ತಕದಲ್ಲಿಯೆ ಅದಿಷ್ಟೇಯ ಮಾದ, ಕ್ರಿಯಾ ಶಕ್ತ್ಯಾತ್ಮಕ ಬಿಂದುವೆಂಬ ಪೀಠದೊಡನೆ ಲಿಂಗಲಕ್ಷಣಚಿಚ್ಛಕ್ತಿ ಯೆಂಬ ಕರಣಯುಕ್ತನಾದ ಅಧಿಷ್ಠಾತೃವಾದ ಪರಶಿವನಂ ಆಹ್ವಾನಿಸಿ ಸಂಯೋಗಿಸಿ ಲಿಂಗಪ್ರತಿಷ್ಠೆಯಂ ಮಾಡಿ, ಮಾನಸಪೂಜೆಯಂ ವಿಸ್ತರಿಸಿ, ಮೇಲೆ ಆಚಾರ್ಯಂ ತನ್ನ ಕರಕಂಜಮಂ ಮುಗಿದಲ್ಲಿ ಸದಾಸನ್ನಿಹಿತಮಾಗಿರೆಂದೀಶ್ವರಂಗೆ ಬಿನ್ನಪಂಗೆಯ್ದಿರಿ ಸೂದೇ ವೇಧಾದೀಕ್ಷೆಯೆನಿಸೂದು.

ಬಳಿಕಾ ಪ್ರಣವ ಪಂಚಾಕ್ಷರ ಮಂತ್ರವನಾ ಶಿಷ್ಯನ ದಕ್ಷಿಣಕರದಲ್ಲಿ ಮೆಲ್ಲ ನುಚ್ಚರಿಸುತ್ತಾ ಮಂತ್ರ ಋಷಿ ಛಂದಾದಿ ದೇವತಾದ್ಯಂಗಳಂ ತಿಳುಹೂದೇ ಮಂತ್ರದೀಕ್ಷೆಯೆನಿಸೂದು.

ಬಳಿಕಾ ಮಂತ್ರಾನುಸಂಧಾತೃವಾಗಿರ್ದ ಶಿಷ್ಯನ ಮಸ್ತಕಸ್ಥಿತಮಾದ ಜ್ಞಾನ ಕ್ರಿಯಾತ್ಮಕ ಲಿಂಗವನೆ ಶ್ರೀಗುರು ತನ್ನ ಭಾವ ಮನೋ ದೃಷ್ಟಿಗಳಿಗೆ ಯಥಾಕ್ರಮ ದಿಂದಾಕರಷಿಸಿ ತಂದು, ಆ ದೃಷ್ಟಿಯಿಂ ಮೇಲೆ ಸ್ಫಟಿಕ, ಸುವರ್ಣ, ಶಿಲೆ, ರತ್ನಾದಿ ಲಿಂಗಂಗಳಲ್ಲಿ ಲಿಂಗಾಧಿಕ್ಯಮಾಗೆ ವ್ಯಾಧ್ಯ, ಶಕ್ತ್ಯಾಧಿಕ್ಯಮಾಗೆ ದರಿದ್ರತೆ, ಲಿಂಗ ಶಕ್ತಿ ಸಮಾನದಿಂ ಭೋಗ ಮೋಕ್ಷಂಗಳಪ್ಪುದರಿಂದಾ ಲಿಂಗದ ವೃತ್ತಮಂ ಬಳಸಿ, ಸೂತ್ರದಿಂದೆಳೆದಾ ಸೂತ್ರಮಂ, ಗೋಮುಖದ ತುದಿಗೆ ಲಿಂಗದ ಮಸ್ತಕಕ್ಕೆ ಪಿಡಿದು ಸರಿಗಂಡು, ಮೇಲಾ ಸೂತ್ರದಿಂ ಶಕ್ತಿಯ ಅದಃಪೀಠಮಂ ಪ್ರಮಾಣಿಸಿ, ಮೇಣದಃ ಪೀಠದಿಂ ಲಿಂಗದ ಮಸ್ತಕಕ್ಕೆ ಹವಣಿಸಿ, ಮೇಲೆ ಆ ಸೂತ್ರದಿಂದಳೆದಾ ಸೂತ್ರಾ ರ್ಧದಿಂ ಗೋಮುಖವನಳೆದು, ಸಮಾನವರಿದಿಂತು, ಪಂಚಸೂತ್ರಮುಳ್ಳ ಪೀಠ ಲಿಂಗಂಗಳೊಂದೇಜಾತಿ ಶಿಲಾದಿಗಳಾದ ಕಾಂತಿಮಯಮಪ್ಪ ಲಿಂಗಸ್ಥಲಮಂ ತೀರ್ಥಾಂಬು ಪಂಚಗವ್ಯ ಭಸಿತ ಮಿಶ್ರೋದಕಂಗಳಿಂ ಪರಿಪೂರಿತಮಾದ ತ್ರಿವಿಧ ಕುಂಭದೊಳೊಂದೊಂದು ರಾತ್ರಿಯಲ್ಲಿ ಪ್ರತ್ಯೇಕಮಾಗೆಷ್ಟೋತ್ತರಶತ ಪಂಚಾಕ್ಷರ ವನನುಮಿಂದಭಿಮಂತ್ರಿಸುತ್ತವಗಾಹಮಿರಿಸಿ. ಬಳಿಕ ನಾಲ್ಕನೆಯ ರಾತ್ರಿಯೊಳಾ

ಪಂಚಕಳಶ ಸ್ಥಾಪನಕ್ಕೆ ಉತ್ತರ ದಿಕ್ಕಿನಲ್ಲಿ ಭೂಮಿಯಂ ಪರಿಶುದ್ಧಿಗೆಯ್ದು, ಅಷ್ಟ ದಳ ಪದ್ಮಮಂ ತುಂಬಿ, ಬಳಿಕೇಳು ಮೊಳದುದ್ದದೊಂದು ನವೀನ ವಸ್ತ್ರಮಂ ತಂದು ಆ ಪದ್ಮದ ಮೇಲೊಂದು ಮೊಳದುದ್ದಮಂ ಮುಚ್ಚುತ್ತದರ ಮೇಲೊಂದಂಗುಲ ದಟ್ಟದಲ್ಲಿಶ್ಯಾಮಾಕವಂ ಪಸರಿಸುತ್ತಷ್ಟದಳ ನಳಿನಮಂ ಬರೆದಾವಸ್ತ್ರಮಂ ಬಾಸಣಿಸಿ ಮತ್ತದರ ಮೇಲೆ ತಿಲಮಂ ಹರಹುತ್ತಷ್ಟದಳ ಕಮಲಮಂ ಲಿಖಿಸುತ್ತಾ ವಸ್ತ್ರಮಂ ಪೊದಿಸಿ, ಮತ್ತದರ ಮೇಲೆ ಗೋದುವೆಯಂ ಹರಹುತ್ತಷ್ಟದಳವಾರಿಜಮಂ ನಿರ್ಮಿ ಸುತ್ತ ವಸ್ತ್ರಮಂ ಕವಿಚಿ, ಮತ್ತದರ ಮೇಲೆ ವ್ರೀಹಿಯಂ ಪಸರಿಸುತ್ತಷ್ಟದಳ ಕಂಜಮಂ ರಚಿಸುತ್ತಾ ವಸ್ತ್ರಮಂ ಮುಸುಂಕಿ, ಮತ್ತದರ ಮೇಲೆ ತಂಡುಲಮಂ ಹರಹುತ್ತಷ್ಟದಳ ಕಂಜಮನಂಕಿಸುತ್ತಾ ವಸ್ತ್ರಮನಾವರಿಸಿ, ಮತ್ತದರ ಮೇಲೆ ಚೂತ ಬಿಲ್ವ ಆಮಲಕ ಕುಶ ಅಪಾಮಾರ್ಗವೆಂಬ ಪಂಚಪತ್ರಗಳಂ ವಿಸ್ತರಿಸುತ್ತಾ ವಸ್ತ್ರ ಮನಾಚ್ಛಾದಿಸಿ, ಹೀಂಗೇಳುನೆಲೆಯಾದಾಧಾರಮಂ ಕಲ್ಪಿಸುತ್ತದರ ಮೇಲೆ ಆ ಲಿಂಗ ಸ್ಥಲಮಂ ಗೋಮುಖಮುತ್ತರ ಭಾಗಮಪ್ಪಂತಿರಿಸಿ. ಮೇಲೆ ಸೀತ್ಕಾರ ಪ್ರಾಣಾ ಯಾಮದಿಂ ಸಹಸ್ರ ಮೂಲಮಂತ್ರಮಂ ಜಪಿಸುತ್ತಾ ಲಿಂಗಸ್ಥಲಕ್ಕೆ ಮಾತೃಕಾನ್ಯಾಸ ಕಲಾನ್ಯಾಸ ಮಂತ್ರನ್ಯಾಸಾದಿಗಳಿಂ ಪ್ರಾಣಪ್ರತಿಷ್ಠೆಯಂ ಮಾಡಿ, ಮರಳಿ ಕಳಶೋದ ಕದಿಂ ಸ್ನಾನಂಗೆಯ್ದು ಅಷ್ಟವಿಧಾರ್ಚನೆಯಂ ಮಾಡೂದಿಂತು, ಮುನ್ನಮೆ ಪರಿಶುದ್ಧ ಮಡೆದಿರ್ದ ಲಿಂಗಸ್ಥಲಮನಾಚಾರ್ಯಂ ತನ್ನ ವಾಮಕರಸ್ಥಲಕ್ಕೆ ಬಿಜಯಂಗೆಯ್ಸಿ ಕೊಂಡು, ಬಳಿಕದರೊಳಾ ಪೂರ್ವೋಕ್ತಕ್ರಮದಿಂ ದೃಷ್ಟಿಸ್ಥಿತ ಶಿವಕಲಾ ಪ್ರತಿಷ್ಠೆಯಂ ಮಾಡಿ, ಮತ್ತಮಾ ಶಿಷ್ಯನ "ಅಯಂ ಮೇ ಹಸ್ತೋ ಭಗವಾನ್" ಎಂಬ ಶ್ರುತಿ ಸಿದ್ಧಮಾದ ಮಂತ್ರದಿಂ ವಾಮಹಸ್ತ ಪೀಠದೊಳಾ ಶಿವಲಿಂಗಮಂ ಗೋಮುಖ ವಾಮಭಾಗಮಪ್ಪಂತೆ ಸಂಸ್ಥಾಪಿಸೂದೇ ಕ್ರಿಯಾದೀಕ್ಷೆಯೆನಿಸೂದು. ೨೭೦

## ಸಪ್ತವಿಧ ದೀಕ್ಷೆಗಳು :

ಬಳಿಕ ಶ್ರೀಗುರು ತನ್ನ ಶಿಷ್ಯನಂ ಕರೆದೆಲೆ ಮಗನೆ ನಿನ್ನ ಪ್ರಾಣಲಿಂಗವಿದುತಾನೆ ತತ್ತ್ವಾತೀತಮಾದ ಪರವಸ್ತುವಿದು ತಾನೆ, ಹರಿಬ್ರಹ್ಮರರಸಿ ಕಾಣದ ನಿಜತತ್ವವಿದ ನಿಂತು ನಿಮಿಷಾರ್ಧಮಾದರೂ ನಿನ್ನ ಶರೀರದಿಂವಿಯೋಗಮಾಗದಂತೆ ಸಾವಧಾನದಿಂ ಧರಿಸು, ತ್ರಿಕಾಲಂ ತಪ್ಪದಂತರ್ಚಿಸುತ್ತಿರು, ಲಿಂಗಾರ್ಪಿತವಲ್ಲದೇನೊಂದನು ಸ್ವೀಕರಿಸದಿರು, ಸಕಲ ಭೋಗ ಮೋಕ್ಷಂಗಳೆಲ್ಲಂ ನಿನ್ನ ಕೈಸಾರಿದವೆಂದುನಂಬು, ಸರ್ವಕ್ಲೇಶಮಂ ಬಿಡು,ನಿತ್ಯಸುಖಿಯಾಗು, ಸತ್ಯಮಿದೆಂಬಿವು ಮೊದಲಾದ ಶಿವಕ್ರಿಯೆ ಗಳನು ಉಪದೇಶಂಗೈದಿಂತು ಪೇಳ್ದ ವೀರಶೈವದೀಕ್ಷೆಯೆಂತೆಂದೊಡೆ ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾರೋಹಣ, ಕಳಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತಮೆಂದು ಸಪ್ತವಿಧಮಾಗಿಹುದವರಲ್ಲಿ.

ಶ್ರೀ ಗುರು ತನ್ನಾಜ್ಞೆಯನೆ ಶಿಷ್ಯನಲ್ಲಿ ಪ್ರತಿಪಾದಿಸೂದೇ
ಆಜ್ಞಾದೀಕ್ಷೆಯೆನಿಸೂದು.
ಪುರಾತನರ ಸಮಯಾಚಾರಕ್ಕೆ ಸದೃಶಮಾಗಿ ಮಾಡೂದೇ
ಉಪಮಾದೀಕ್ಷೆಯೆನಿಸೂದು.
ಸ್ವಸ್ತಿಕವೆಂಬ ಮಂಡಲದ ಮೇಲೆ ಶಿಷ್ಯನಂ ಕುಳ್ಳಿರಿಸಿ ಮಂತ್ರನ್ಯಾಸಾದಿಗಳಂ
ಮಾಡಿ ಮಂತ್ರಶರೀರಿಯೆನಿಸೂದೇ ಸ್ವಸ್ತಿಕಾರೋಹಣವೆನಿಸೂದು.
ಪಂಚಕಳಸೋದಕಂಗಳಂ ಶಿಷ್ಯಂಗೆ ಸ್ನಪನಂಗಯ್ವುದೇ
ಕಳಸಾಭಿಷೇಕವೆನಿಸೂದು.
ಆಗಮೋಕ್ತ ಸ್ಥಾನಂಗಳಲ್ಲಿ ತತ್ತನ್ಮಂತ್ರಂಗಳಿಂ ಶ್ರೀ ವಿಭೂತಿ ಧಾರಣಂಗೆಯ್ವುದೇ
ವಿಭೂತಿ ಪಟ್ಟವೆನಿಸೂದು.
ಆಚಾರ್ಯಂ ತಾನು ಶಿಷ್ಯಂಗೆ ಕೊಡಲುತಕ್ಕ ಲಿಂಗವನರ್ಚಿಸಿ ಶಿಷ್ಯನಂ
ನೋಡಿಸೂದೇ ಲಿಂಗಾಯತವೆನಿಸೂದು,
ಶ್ರೀಗುರುವಿತ್ತ ಲಿಂಗವನೆ ಶಿಷ್ಯನು ಸಾವಧಾನದಿಂದುತ್ತಮಾಂಗಾದಿ ಸ್ಥಾನಂಗಳಲ್ಲಿ
ಧರಿಸೂದೇ ಲಿಂಗಸ್ವಾಯತವೆನಿಸೂದು

ಇಂತು ಶಾಸ್ತ್ರೋಕ್ತ ಕ್ರಮದಿಂ ಸಾಂಗಿಕಮಾದ ಶಿವದೀಕ್ಷೆಯಿಂ. ಲಿಂಗಾಂಗ ಸಂಬಂಧಿಯಾದ ವಿಶೇಷ ವೀರಶೈವನು ಮಾಳ್ಪ ಶಿವಲಿಂಗಪೂಜಾಕ್ರಮವೆಂತೆಂದೊಡೆ

೨೭೧

## ವೀರಶೈವ ಶಿವಪೂಜಾ ಕರ್ಮಾನುಷ್ಠಾನ :

ಶ್ರೀಸ್ಥರುಗಳಾವಾವುದನಾಚರಿಸುವರದನೆ ಲೋಕದವರನುವರ್ತಿಪುದರಿಂ, ಜಗಕ್ಕುಪದೇಶಮಪ್ಪಂತೆ, ತಾನು ನಿತ್ಯನಿರ್ಮಲನಾದರೂ ಮಂತ್ರನ್ಯಾಸಾದಿ ಸಕಲ ಸಾಂಗಿಕಮಾಗಿ ಶಿವಲಿಂಗಾರ್ಚನೆಯಂ ಮಾಡುವಲ್ಲಿ ಮೊದಲು "ಓಂ ಹಃ ಅನಂತ ಶಕ್ತಿಧಾಮ್ನೇ ಜ್ಯೋತಿರೂಪಾಯ ಶಿವಾಸ್ತ್ರಾಯಫಟ್" ಎಂಬ ಮಂತ್ರದಿಂ ಮನಶ್ಶುದ್ಧಿಯನಾಚರಿಸಿ, ಬಳಿಕ "ಓಂ ಆಪೋವಾ ಇದಂ ಸರ್ವಂ ವಿಶ್ವಭೂತಾನ್ಯಾಪಃ ಪ್ರಾಣಾನಾವಾಪಃ ಪಶವ ಆಪೋನ್ನಮಾಪಃ ಸಂಮ್ರಾಡಾಪೋ ವಿರಾಡಾಪೋ ಸ್ವರಾಡಾಪಃ ಛಂದಾಂಸ್ಯಾಪೋ ಜ್ಯೋತೀಂಷ್ಯಾಪೋ ಅಸ್ಯಾಪೋ ಯಜೂಂಷ್ಯಾಪಃ ಸತ್ಯಮಾಪಃ ಸರ್ವದೇವತಾ ಆಪಃ ಓಂ ಭೂರ್ಭುವಂ ಸುವಡಾಪಃ ಅಮೃತಮಾಪಃ" ಎಂಬ ಮಂತ್ರಾಭಿಮಂತ್ರಿತಮಾದುದಕದಿಂ ಕರಚರಣ ಮುಖ ಪ್ರಕ್ಷಾಲನಂಗೆಯ್ದು, ಬಳಿಕ, "ಸರ್ವಜ್ಞಾಯನಮಃ" ಎಂಬ ಮಂತ್ರವನುಚ್ಚರಿಸುತ್ತಂ ಆ ಪೂಜಾ ಗೃಹಮಂ ಪೊಕ್ಕು ಮರಳಿ "ಓಂ ಹಾಂ ಪೃಥುವ್ಯಾತ್ಮನೇ ನಮಃ ನಿವೃತ್ತಿಕಲಾಯೈ ನಮಃ" ಎಂಬ ಮಂತ್ರದಿಂ ಸ್ಥಾನಶುದ್ಧಿಯನಾಚರಿಸಿ ಮೇಲೆ "ಶ್ರೀ ಯೈ ನಮಃ" ಎಂಬ ಮಂತ್ರೋಚ್ಚಾರಣದಿಂ ಪೂರ್ವೋತ್ತರ ಮುಖನಾಗಾದರೂ ಸಂಖಾಸನ

ದಲ್ಲಿ ಕುಳ್ಳಿರ್ದು, ಬಳಿಕ "ಓಂ ಹ್ರೀಂ ಈಶಾನಾಯನಮಃ" ಎಂಬ ಮಂತ್ರದಿಂ ದಕ್ಷಿಣಕರದ ಮಧ್ಯಮೆ ಅನಾಮಿಕಾಂಗುಷ್ಠಗಳಿಂ ಶ್ರೀ ಮದ್ವಿಭೂತಿಯನಾಧಾರದಿಂ ತೆಗೆದುಕೊಂಡು, ಮೇಲೆ ವಾಮಹಸ್ತದ ಅಂಗುಷ್ಠಾದ್ಯಂಗುಲಿಗಳಲ್ಲಿ ಯಕಾರಾದಿ ನಕಾರಾಂತಮಾದಪಂಚಾಕ್ಷರಂಗಳನುಚ್ಚರಿಸುತ್ತಮಾ ವಿಭೂತಿಯುನಿರಿಸಿ, ಬಳಿಕ "ಪುನಾತಿ ಯಜ್ಜಗತ್ಸರ್ವಂ ತ್ರಿಪುಂಡ್ರಾತ್ಮಾ ಸದಾಶಿವಃ ಐಶ್ವರ್ಯಪ್ರಾಪ್ತಿ ಬೀಜಾಯ ತಸ್ಮೈಶ್ರೀ ಭಸ್ಮನೇನಮಃ"ಎಂಬ ಮಂತ್ರದಿಂದಾ ಭಸಿತಕ್ಕೆ ನಮಸ್ಕರಿಸಿ, ಮೇಲೆ ದಕ್ಷಿಣಕರದಿಂ ಮುಚ್ಚಿ ಬಲತೊಡೆಯುಮೇಲಿಟ್ಟು "ಓಂ ನಮಃ ಶಿವಾಯ" ಎಂಬ ಮೂಲಮಂತ್ರದಿಂದೇಕಾದಶವಾರವಭಿಮಂತ್ರಿಸಿ, ಅಲ್ಲಾಮತ್ತೆ "ಅಗ್ನಿರಿತಿ ಭಸ್ಮ, ವಾಯುರಿತಿಭಸ್ಮ, ಜಲಮಿತಿಭಸ್ಮ, ಸ್ಥಲಮಿತಿಭಸ್ಮ, ವ್ಯೋಮೇತಿಭಸ್ಮ, ಸರ್ವಗಂಹವಾ ಇದಂ ಭಸ್ಮ ಮನಏತಾನಿ ಚಕ್ಷೂಂಗ್‌ಷಿ ಭಸ್ಮಾನಿ" ಎಂಬ ಮಂತ್ರ ದಿಂದಾದರೂ ಮಂತ್ರಿಸಿ, ಬಳಿಕ "ಮಾನಸ್ತೋಕೇ ತನಯೇ ಮಾನ ಆಯುಷಿ ಮಾನೋ ಗೋಷು ಮಾನೋ ಅಶ್ವೇಷುರೀರಿಷಃ ವಿರಾನ್ಮಾನೋ ರುದ್ರ ಭಾಮಿತೋ ವಧೀರ್ಹವಿಷ್ಮಂತೋ ನಮಃ ಸಾ ವಿಧೇಮತೇ" ಎಂಬ ಮಂತ್ರದಿಂದೆತ್ತಿ ಬಳಿಕಾ ವಿಭೂತಿಯಂ, "ಓಂ ಹ್ರೋಂ ಯಂ ಈಶಾನಾಯನಮಃ" ಎಂದು ಶಿರಸ್ಸಿ ನಲ್ಲಿ, "ಓಂ ಹ್ರೇಂ ವಾಂ ತತ್ಪುರುಷಾಯನಮಃ" ಎಂದು ಮುಖದಲ್ಲಿ, "ಓಂ ಹ್ರೂಂ ಶಿಂ ಅಘೋರಾಯನಮಃ" ಎಂದು ಹೃದಯದಲ್ಲಿ, "ಓಂ ಹ್ರೀಂ ಮಂ ವಾಮದೇವಾಯನಮಃ ಎಂದು ಗುಹ್ಯದಲ್ಲಿ, "ಓಂ ಹ್ರಾಂ ನಂ ಸದ್ಯೋಜಾ ತಾಯನಮಃ" ಎಂದು ಪಾದದಲ್ಲಿಯೂ, ಸರ್ವಾಂಗದಲ್ಲಿಯೂ ಸಂಪ್ರೋಕ್ಷಿಸಿ, ಬಳಿಕಾಚಮನಂಮಾಡಿ, ಮತ್ತೆ ವಿಭೂತಿಯಂ ತೆಗೆದುಕೊಂಡು ಮೂಲಮಂತ್ರದಿಂ ಪನ್ನೊಂದು ವೇಳೆ ಮಂತ್ರಿಸುತ್ತಾಭಸಿತದಿಂ.

"ಓಂ ಹ್ರೋಂ ಈಶಾನಾಯ ನಮಃ" ಎಂದೈದುವೇಳೆ ಶಿರೋದೇಶವನು,

"ಓಂ ಹ್ರೇಂ ತತ್ಪುರುಷಾಯನಮಃ" ಎಂದು ನಾಲ್ಕು ವೇಳೆ ಮುಖವನು,

"ಓಂ ಹ್ರೂಂ ಅಘೋರಾಯ ನಮಃ" ಎಂದು ಎಂಟು ವೇಳೆ ಹೃದಯವನು,

"ಓಂ ಹ್ರೀಂ ವಾಮದೇವಾಯ ನಮಃ" ಎಂದು ಹದಿಮೂರು ವೇಳೆ ಗುಹ್ಯಪ್ರದೇಶವನು,

"ಓಂ ಹ್ರಾಂ ಸದ್ಯೋಜಾತಾಯ ನಮಃ" ಎಂದು ಎಂಟು ವೇಳೆ ಪಾದಾದಿ ಸರ್ವಾಂಗವನು,

ಉದ್ಧೂಳಿಸಿ, ಮತ್ತಮಾಭಸಿತವಂ ಜಲಮಿಶ್ರಂ ಮಾಡಿ, ಪೂರ್ವೋಕ್ತ ಮೂರ್ಧ್ನಿ, ಲಲಾಟಾದಿ ಸ್ಥಾನಂಗಳಲ್ಲಿ "ತ್ರಿಯಾಯುಷಂ ಜಮದಗ್ನೇಃ ಕಶ್ಯಪಸ್ಯ ತ್ರಿಯಾ ಯುಷಂ, ಅಗಸ್ತ್ಯಸ್ಯ ತ್ರಿಯಾಯುಷಂ, ಯದ್ದೇವಾನಾಂ ತ್ರಿಯಾಯುಷಂ ತನ್ನೋ

ಅಸ್ತು ತ್ರಿಯಾಯುಷಂ'' ಎಂಬ ತ್ರಿಯಾಯುಷ ಮಂತ್ರವನು, "ತ್ರಿಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ, ಉರ್ವಾರುಕಮಿವ ಬಂಧನಾನ್ಮೃತ್ಯೋ ರ್ಮುಕ್ಷೀಯಮಾಮೃತಾತ್'' ಎಂಬ ತ್ರಿಯಂಬಕ ಮಂತ್ರವನು ಜಪಿಸುತ್ತೆ ತ್ರಿಪುಂಡ್ರ ಧಾರಣಂ ಗೆಯ್ದು, ೨೭೨

ವೀರಶೈವಕಲಾನ್ಯಾಸ :

ಬಳಿಕ,

ಓಂ ಈಶಾನಃ ಸರ್ವವಿದ್ಯಾನಾಂ ಶಶಿನ್ಯೈ ನಮಃ ಮೂರ್ಧ್ನಿ,
ಓಂ ಈಶ್ವರಃ ಸರ್ವಭೂತಾನಾಂ ಲಿಂಗಧಾರ್ಯೈ ನಮಃ ಪೂರ್ವಮೂರ್ಧ್ನಿ,
ಓಂ ಬ್ರಹ್ಮಾಧಿಪತಿ ಬ್ರಾಹ್ಮಣೋಧಿಪತಿ ಬ್ರಹ್ಮಾ ಜೇಷ್ಠಾಯೈನಮಃ ದಕ್ಷಿಣಮೂರ್ಧ್ನಿ,
ಓಂ ಶಿವೋಮೇ ಅಸ್ತು ಮರೀಚ್ಯೈನಮಃ ವಾಮಮೂರ್ಧ್ನಿ,
ಓಂ ಸದಾಶಿವೋಂ ಜ್ವಲಿನ್ಯೈನಮಃ ಪಶ್ಚಿಮ ಮೂರ್ಧ್ನಿ,
ಓಂ ತತ್ಪುರುಷಾಯ ವಿದ್ಮಹೇ ಶಾಂತಾಯನಮಃ ಪೂರ್ವವಕ್ತ್ರೇ,
ಓಂ ಮಹಾದೇವಾಯ ಧೀಮಹಿ ವಿದ್ಯಾಯೈನಮಃ ದಕ್ಷಿಣವಕ್ತ್ರೇ,
ಓಂ ತನ್ನೋರುದ್ರಃ ಪ್ರತಿಷ್ಠಾಯೈನಮಃ ವಾಮವಕ್ತ್ರೇ,
ಓಂ ಪ್ರಚೋದಯಾತ್ ನಿವೃತ್ತ್ಯೈನಮಃ ಪಶ್ಚಿಮವಕ್ತ್ರೇ,
ಓಂ ಈಶಾನ ವಕ್ತ್ರಾಯನಮಃ ಊರ್ಧ್ವವಕ್ತ್ರೇ,
ಓಂ ಅಘೋರೇಭ್ಯಃ ತಮಸ್ಯೈನಮಃ ಹೃದಯೇ
ಓಂ ಘೋರೇಭ್ಯಃ ಮೋಹಾಯೈನಮಃ ಕಂಠೇ
ಓಂ ಘೋರ ಅಕ್ಷಯಾಯೈನಮಃ ದಕ್ಷಿಣಾಂಸೆ
ಓಂ ಘೋರತರೇಭ್ಯಃ ಕನಿಷ್ಠಾಯೈನಮಃ ವಾಮಾಂಸೆ.
ಓಂ ಸರ್ವತಃ ಸರ್ವಮೃತ್ಯವೇನಮಃ ನಾಭೀ
ಓಂ ಸರ್ವೇಭ್ಯಃ ಮಾಯಾಯೈನಮಃ ಜಠರೇ
ಓಂ ನಮಸ್ತೇ ಅಸ್ತುರುದ್ರ ಅಭಯಾಯೈನಮಃ ಪೃಷ್ಠೇ
ಓಂ ರೂಪೇಭ್ಯಃ ಶಿವೇಭ್ಯಃ ಜ್ವರಾಯೈನಮಃ ವಕ್ಷಸಿ
ಓಂ ವಾಮದೇವಾಯ ನಮೋ ರಜಾಯೈನಮಃ ಗುಹ್ಯೇ
ಓಂ ಜೇಷ್ಠಾಯ ನಮೋ ರಕ್ಷಾಯನಮಃ ಲಿಂಗೇ
ಓಂ ರುದ್ರಾಯ ನಮೋ ರತ್ಯೈನಮಃ ದಕ್ಷಿಣೋರೂ
ಓಂ ಕಾಲಾಯನಮೋ ಪಾಲ್ಯಾಯೈನಮಃ ವಾಮೋರೂ
ಓಂ ಕಾಲಕಾಮಾಯೈನಮಃ ದಕ್ಷಿಣ ಜಾನುನಿ
ಓಂ ವಿಕರಣಾಯನಮಃ ಸಂಯಮಿನಿಯೇನಮಃ ವಾಮಜಾನುನಿ

ಓಂ ಬಲಕ್ರಿಯಾಯೈನಮಃ ದಕ್ಷಿಣ ಜಂಘಾಯಾಂ
ಓಂ ವಿಕರಣಾಯ ರುದ್ರಾಯನಮೋ ಬುದ್ಧ್ಯೈನಮಃ ವಾಮಜಂಘಾಯಾಂ
ಓಂ ಬಲಕಾಯ್ಯಾಯೈನಮಃ ದಕ್ಷಿಣ ಸ್ಫಿಜಿ
ಓಂ ಪ್ರಮಥಾಯನಮಃ ಧಾತ್ರ್ಯೈನಮಃ ವಾಮಸ್ಫಿಜಿ
ಓಂ ಸರ್ವಭೂತ ದಮನಾಯನಮೋ ಗ್ರಾಮಿಣೀನಮಃ ಕಟಿಂ
ಓಂ ನಮೋ ಮನನಮೋಹಿನ್ಯೈನಮಃ ದಕ್ಷಿಣಪಾರ್ಶ್ವೇ,
ಓಂ ಉನ್ಮನಾಯನಮಃ ಮೋಹಾಯೈನಮಃ ವಾಮಪಾರ್ಶ್ವೇ,
ಓಂ ಸದ್ಯೋಜಾತಂ ಪ್ರಪದ್ಯಾಮಿ ಸಿದ್ಧ್ಯೈನಮಃ ದಕ್ಷಿಣಪಾದೇ
ಓಂ ಸದ್ಯೋಜಾತಾಯ ವೈನಮಃ ಬುದ್ಧ್ಯೈನಮಃ ವಾಮಪಾದೇ
ಓಂ ಭವೇದ್ಯುತ್ಯೈನಮಃ ದಕ್ಷಿಣಕರೇ
ಓಂ ಅಭವೇ ಲಕ್ಷ್ಮ್ಯೈನಮಃ ವಾಮಕರೇ
ಓಂ ಅನಾದಿಭವೇ ಮೇಧಾಯೈನಮಃ ಘ್ರಾಣೇ
ಓಂ ಭವಸ್ವಮಾಂ ಕಾಂತ್ಯೈ ನಮಃ ಶಿರಸಿ
ಓಂ ಭವಸ್ವಧಾಯೈನಮಃ ದಕ್ಷಿಣ ಬಾಹೌ
ಓಂ ಉದ್ಭವಾಯ ನಮೋ ಧೃತ್ಯೈನಮಃ ವಾಮಬಾಹೌ

ಎಂದಿಂತು ಕಲಾನ್ಯಾಸಮಂ ವಿಸ್ತರಿಸಿ. ೨೭೩

## ವೀರಶೈವ ಷಡಂಗನ್ಯಾಸ :

ಬಳಿಕ

ಓಂ ಹ್ರಾಂ ಸರ್ವಜ್ಞಶಕ್ತಿಧಾಮ್ನೇ ಹೃದಯಾಯನಮಃ
ಓಂ ಹ್ರೀಂ ತೃಪ್ತಿಶಕ್ತಿಧಾಮ್ನೇ ಶಿರಸೇ ಸ್ವಾಹಾ,
ಓಂ ಹ್ರೂಂ ಅನಾದಿಬೋಧ ಶಕ್ತಿಧಾಮ್ನೇ ಶಿಖಾಯೈ ವಷಟ್
ಓಂ ಹ್ರೈಂ ಸ್ವತಂತ್ರ ಶಕ್ತಿಧಾಮ್ನೇ ಕವಚಾಯಹುಂ.
ಓಂ ಹ್ರೌಂ ಅಲುಪ್ತ ಶಕ್ತಿಧಾಮ್ನೇ ನೇತ್ರತ್ರಯಾಯ ವೌಷಟ್
ಓಂ ಹ್ರಃ ಅನಂತ ಶಕ್ತಿಧಾಮ್ನೇ ಅಸ್ತ್ರಾಯಫಟ್.

ಎಂದು ಷಡಂಗ ನ್ಯಾಸಂಗೈದು. ೨೭೪

## ಪಂಚ ಬ್ರಹ್ಮನ್ಯಾಸ, ರುದ್ರಾಕ್ಷಧಾರಣಾದಿ :

ಬಳಿಕ ಓಂ ಹ್ರೋಂ ಈಶಾನಯನಮಃ ಎಂದು ಶಿರಸ್ಸಿನಲ್ಲಿ
ಓಂ ಹ್ರೇಂ ತತ್ಪುರುಷಾಯನಮಃ ಎಂದು ಮುಖದಲ್ಲಿ
ಓಂ ಹ್ರೂಂ ಅಘೋರಾಯನಮಃ ಎಂದು ಹೃದಯದಲ್ಲಿ
ಓಂ ಹ್ರೀಂ ವಾಮದೇವಾಯನಮಃ ಎಂದು ಗುಹ್ಯದಲ್ಲಿ

ಓಂ ಹ್ರಾಂ ಸದ್ಯೋಜಾತಾಯನಮಃ ಎಂದು ಪಾದಂಗಳಲ್ಲಿ
ಪಂಚಬ್ರಹ್ಮ ನ್ಯಾಸವಂ ಮಾಡಿ,

ಮರಳಿ ಮೂರ್ಧ್ನಿ, ಲಲಾಟ, ಕಂಠ, ಹೃದಯ, ನಾಭಿಗಳಲ್ಲಿ ಕ್ರಮದಿಂ ಮಕಾರಾದಿ ನಕಾರಾಂತಮಾಗಿ ಪಂಚಾಕ್ಷರ ನ್ಯಾಸಂಗೆಯ್ದು.

ಅನಂತರದಲ್ಲಿ ರುದ್ರಾಕ್ಷಪುಂಜಮಂ ವಸ್ತ್ರದಲ್ಲಿರಿಸಿ, ಓಂ ಹ್ರೂಂ ಸ್ರೂಂ ರಾಂ ಪ್ರಾಂ ಖುಖೂಮಪಿ, ಶ್ರೀ ಮಾಂ ಕ್ಷಾಂ ಕ್ಷಮಸಿ, ಕ್ಷೌಂ ಕ್ಷಾಂ ಹ್ರೂಂ ನಮಃ ಎಂಬ ಮಂತ್ರದಿಂದಭಿಮಂತ್ರಿಸಿ.

ಮರಳಿ "ರುದ್ರಾಕ್ಷ ವೃಕ್ಷಬೀಜಾಯ ಭೂತಿಸಂಭೂತಿ ಹೇತವೇ ।
ನೇತ್ರತ್ರಯಾಯ ರುದ್ರಾಯ ನಮೋ ಲೋಕಹಿತಾರ್ಥಿನೇ" ಎಂಬ ಮಂತ್ರದಿಂ ನಮಸ್ಕರಿಸಿ.

ಬಳಿಕ ಶಿಖಿ ಶಿರಸ್ಸು ಮೂರ್ಧ್ನಿ ಕರ್ಣದ್ವಯ ಕಂಠ ಉರ ಬಾಹುದ್ವಯ ಮಣಿಬಂಧದ್ವಯ ಯಜ್ಞ ಸೂತ್ರ ಸ್ಥಾನ ಉದರಂಗಳಲ್ಲಿ ಕ್ರಮದಿಂ

ಓಂ ಶ್ರೀಸದಾಶಿವಾಯನಮಃ
ಓಂ ವಹ್ನಿ ಸೂರ್ಯ ಸೋಮಾಧಿಪಾಯ ಶ್ರೀ ಶಿವಾಯನಮಃ
ಓಂ ಷಟ್ತ್ರಿಂಶ ತತ್ವಾತ್ಮಕಾಯ ಪರಶಿವಾಯನಮಃ
ಓಂ ಶ್ರೀ ಸೋಮಾಯ ನಮಃ
ಓಂ ತ್ರಿಯಂಬಕ ಕಲಾತ್ಮನೇ ಶ್ರೀ ಕಂಠಾಯನಮಃ
ಓಂ ಶ್ರೀಕಂಠಾದಿ ಮೂರ್ತ್ಯಾತ್ಮಕಾಯ ಶ್ರೀಸರ್ವಜ್ಞಾಯನಮಃ
ಓಂ ಸುಖಾಸನಾದಿ ಷೋಡಶ ಮೂರ್ತ್ಯಾತ್ಮಕಾಯ ಶ್ರೀ ಕಂಠಾಯನಮಃ
ಓಂ ಶ್ರೀ ಸೋಮಕಲಾತ್ಮಕಾಯ ಶ್ರೀ ಸೋಮನಾಥಾಯ ನಮಃ
ಓಂ ದ್ವಾದಶಾಧಿತ್ಯಾಭಿಷ್ಟಾಯ ಶ್ರೀ ಮಹಾದೇವಾಯ ನಮಃ
ಓಂ ಕೇಶವಾದಿಪತ್ಯಾಧಿಪಾಯ ಶ್ರೀ ಉಮಾಪತಯೇನಮಃ
ಓಂ ಶತರುದ್ರ ವಿದ್ಯೇಶ್ವರಾತ್ಮಕಾಯ ಶ್ರೀ ವಿಶ್ವೇಶ್ವರಾಯ ನಮಃ
ಓಂ ಚತುಷಷ್ಠಿ ಕಲೋಪೇತಾಯ ನಮಃ

ಓಂ ಹ್ರೀಂ ಜನನ ಸ್ಥಾನ ವಿಭೂತಯೇ ಸರ್ವಾತ್ಮನೇ ಸರ್ವಕಾಲ ರೂಪಾಯ ಶ್ರೀ ಉಮಾಪತಯೇ ನಮಃ ಎಂಬ ಮಂತ್ರಂಗಳಿಂ ಪೂರ್ವೋಕ್ತ ಸಂಖ್ಯಾ ಕ್ರಮದಿಂ ರುದ್ರಾಕ್ಷ ಮಾಲೆಗಳಂ ಧರಿಸಿ.

ಬಳಿಕ ಶಿವಾಯನಮಃ ರುದ್ರಾಯನಮಃ ಪಶುಪತಯೇನಮಃ
ನೀಲಕಂಠಾಯನಮಃ ಮಹೇಶ್ವರಾಯನಮಃ ಹರಿಕೇಶಾಯನಮಃ
ವಿರೂಪಾಕ್ಷಾಯನಮಃ ಪಿನಾಕಿನೇನಮಃ ತ್ರಿಪುರಾಂತಕಾಯನಮಃ
ಶಂಭವೇನಮಃ ಶೂಲಿನೇನಮಃ ಮಹಾದೇವಾಯನಮಃ

ಎಂಬ ದ್ವಾದಶ ಮಂತ್ರೋಚ್ಚಾರಣದಿಂ ಪುಷ್ಪಾಂಜಲಿಯುಂ ಕೊಟ್ಟು, ೨೭೫

ವೀರಶೈವ ಶಿವಸಮಾರ್ಚನ :

ಬಳಿಕ ಪರಶಿವನು ನಿತ್ಯ ನಿಷ್ಕಲನಾದೊಡಂ, ಭಕ್ತಹಿತಾರ್ಥವಾಗಿ ಧೃತ ಕಾಠಿಣ್ಯದಂತೆ ಮೂರ್ತಿತ್ವದಿಂದುಪಚರಿಸಿಕೊಳಲು ಯೋಗ್ಯನಪ್ಪುದರಿಂದಾ ಲಿಂಗದ ಮೂಲದಲ್ಲಿ ಪಾದಂಗಳನು, ಲಿಂಗಾಗ್ರದಲ್ಲಿ ಮುಖವನು, ಲಿಂಗಪಾರ್ಶ್ವದಲ್ಲಿ ಭುಜಂಗಳನು, ಲಿಂಗದ ಹಿಂದೆ ಪೃಷ್ಠಾದಿಗಳಂ ಪರಿಭಾವಿಸಿ, ಬಳಿಕ ''ಓಂ ಹ್ರೇಂ ತತ್ಪುರುಷಾಯ ನಮಃ'' ಎಂಬ ಮಂತ್ರದಿಂ ಸ್ವಾಭಿಮುಖಂ ಮಾಡಿ ಮತ್ತಾಲಿಂಗಕ್ಕೆ "ಓಂ ಹ್ರಾಂ ಸದ್ಯೋಜಾತಾಯನಮಃ ಪಾದ್ಯಂ ಸ್ವಾಹಾ, ಓಂ ಹ್ರೀಂ ವಾಮದೇವಾಯನಮಃ ಆಚಮನೀಯಂ ಸ್ವಾಹಾ, ಓಂ ಹ್ರೂಂ ಅಘೋರಾಯನಮಃ ಅರ್ಘ್ಯಂ ಸ್ವಾಹಾ'' ಎಂಬ ಆಯಾಯ ಮಂತ್ರಂಗಳಿಂ ಪಾದ್ಯಾದಿಗಳಂ ಕೊಟ್ಟು, ೨೭೬

ಪಂಚಗವ್ಯಾಭಿಷೇಕ :

ಮರಳಿ ಓಂ ಹ್ರಾಂ ಸದ್ಯೋಜಾತಾಯನಮಃ ಗೋಮೂತ್ರಂ ಸ್ವಾಹಾ,
ಓಂ ಹ್ರೀಂ ವಾಮದೇವಾಯನಮಃ ಗೋಮಯಂ ಸ್ವಾಹಾ,
ಓಂ ಹ್ರೂಂ ಅಘೋರಾಯನಮಃ ಗೋಕ್ಷೀರಂ ಸ್ವಾಹಾ,
ಓಂ ಹ್ರೈಂ ತತ್ಪುರುಷಾಯನಮಃ ಗೋದಧಿ ಸ್ವಾಹಾ,

ಓಂ ಹ್ರೌಂ ಈಶಾನಾಯನಮಃ ಗೋಘೃತಂ ಸ್ವಾಹ, ಎಂದಾಯಾಯ ಮಂತ್ರಂಗಳಿಂ, ಲಿಂಗಕ್ಕೆ ಪಂಚಗವ್ಯಾಭಿಷೇಕವಮಂ ಮಾಡಿ, ೨೭೭

ಪಂಚಾಮೃತಾಭಿಷೇಕ :

ಬಳಿಕ "ಆ ಪ್ಯಾಯಸ್ವಸಮೇತುತೇ ವಿಶ್ವತಃ ಸೋಮ ವೃಷ್ಣಿಯಂ ಭವಾವಾಜಸ್ಯ ಸಂತುಷೇ ಓಂ ಕ್ಷೀರೇಣ ಸ್ನಾಪಯಾಮಿ'' ಎಂದು ಕ್ಷೀರಸ್ನಾನವಂ ಮಾಡಿ, ಮೇಲೆ ಸದ್ಯೋಜಾತ ಮಂತ್ರದಿಂ ಜಲಸ್ನಾನಂ ಗೆಯ್ದು; ಮತ್ತೆ, "ದಧಿಕ್ರಾವಣ್ಣೋ ಅಕಾರ್ಷಂಜಿಷ್ಣೋಃ ರಶ್ವಸ್ಯ ವಾಜಿನಃ ಸುರಭಿನೋ ಮುಖಾ ತರತ್ ಪ್ರಾಣಯೋಗಂ ಸಿತಾರಿಷತ್ ಓಂ ದಧ್ನಾ ಸ್ನಾಪಯಾಮಿ" ಎಂದು ದಧಿಸ್ನಾನಂ ಮಾಡಿ ಮೇಲೆ ವಾಮದೇವ ಮಂತ್ರದಿಂ ಜಲಸ್ನಾನಂ ಗೆಯ್ದು; ಬಳಿಕ ''ಶುಕ್ಲಮಸಿ ಜ್ಯೋತಿರಸಿ ತೇಜೋಸಿ ದೇವಃ ಸವಿತಾ ವಾ ಪುನಾತುಚ್ಛಿದ್ರೇಣ ಪವಿತ್ರೇಣ ವಸೋಃ ಸೋಮಸೂರ್ಯಸ್ಯ ರಶ್ಮಿಭಿಃ ಓಂ ಘೃತೇನಸ್ನಾಪಯಾಮಿ" ಎಂದು ಘೃತಸ್ನಾನಂ ಮಾಡಿ; ಮೇಲೆ ಅಘೋರಮಂತ್ರದಿಂ ಜಲಸ್ನಾನಂಗೆಯ್ದು, ಬಳಿಕ ''ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ, ಮಾಧ್ವೀರ್ನ ಸಂತೋಷಧೀಃ ಮಧುನಕ್ತಮೋಷದಿಃ ಮಧುಮಃ ಪಾರ್ಥಿವ ಮಗ್ರಜಃ ಮಧುಜ್ಯೋತಿ ರಿಪುನಾತಿ ಪಿತಾ ಮಧುಮಾನೋಃ ವನಸ್ಪತಿಃ ಮಧುಮಾನಸ್ತು ಸೂರ್ಯಃ ಮಾಧ್ವಿರ್ಗಾವೋ ಭವಂತುನಃ ಓಂ ಮಧುನಾ ಸ್ನಾಪಯಾಮಿ'' ಎಂದು ಮಧುಸ್ನಾನಂ ಮಾಡಿ, ೨೭೮

ಮೇಲೆ ತತ್ಪುರುಷಮಂತ್ರದಿಂ ಜಲಸ್ನಾನಂ ಗೆಯ್ದು, ಬಳಿಕ "ಓಂ ಭೂರ್ಭುವಃ ಸ್ವಾಹಾ, ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀ ಮಹೀ ಧೀಯೋಯೋನಃ ಪ್ರಚೋದಯಾತ್, ಓಂ ಶರ್ಕರಯಾ ಸ್ನಾಪಯಾಮಿ'' ಎಂದು ಶರ್ಕರಾ ಸ್ನಾನಂ ಮಾಡಿ, ಮೇಲೆ ಈಶಾನ ಮಂತ್ರದಿಂ ಜಲಸ್ನಾನಂ ಗೈದು, ಬಳಿಕೀ ಪಂಚಾಮೃತಾಭಿಷೇಕಾನಂತರದಲ್ಲಿ ಗೋಧೂಮ ಚೂರ್ಣಾದಿಕದಿಂ ಲಿಂಗಕ್ಕುದ್ವರ್ತನಂ ಮಾಡಿ ಮಂದೋಷ್ಣವಾರಿಯಿಂ ಸ್ನಾನಂಗೆಯ್ದು, ಬಳಿಕ, ೨೭೯

ಓಂ ಹ್ರಾಂ ಈಶಾನಾಯನಮಃ ಎಂದು ಗಂಧೋದಕಮಂ ಕೊಟ್ಟು,
ಓಂ ಹ್ರೈಂ ತತ್ಪುರುಷಾಯನಮಃ ಎಂದು ಪುಷ್ಪೋದಕವನೆರೆದು,
ಓಂ ಹ್ರೂಂ ಅಘೋರಾಯನಮಃ ಎಂದು ಸ್ವರ್ಣೋದಕಮಂ ಸಮರ್ಪಿಸಿ'
ಓಂ ಹ್ರೀಂ ವಾಮದೇವಾಯ ನಮಃ ಎಂದು ರತ್ನೋದಕವನಿತ್ತು,
ಓಂ ಹ್ರಾಂ ಸದ್ಯೋಜಾತಾಯನಮಃ ಎಂದು ಮೂಲಮಂತ್ರೋದಕಮಂ ನಿವೇದಿಸಿ,

ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ ಎಂಬ ಶಿವಾಂಗಮಂತ್ರದಿಂ ಶಿಲೋದಕಾಭಿಷೇಕಂ ಗೈದು, ಮೇಲೆ ತೀರ್ಥೋದಕವನೆರೆಮ, ಮತ್ತಮಾ ತೀರ್ಥೋದಕದಿಂದವೆ ಶ್ರೀರುದ್ರ, ಪಂಚಬ್ರಹ್ಮ, ಪುರುಷಸೂಕ್ತ, ಮೂಲಮಂತ್ರಾದಿಗಳಿಂ ಮಹಾಸ್ನಾನಂ ಮಾಡಿ, ಬಳಿಕ ಓಂ ಹ್ರಾಂ ಹ್ರೀಂ ಹೃದಯಾಯನಮಃ ಎಂಬ ಮಂತ್ರದಿಂ ಪಾದ್ಯ, ಆಚಮನ ಅರ್ಘ್ಯಂಗಳಂ ಕೊಟ್ಟು, ಬಳಿಕ ಅಂಗುಷ್ಠಾನಾಮಿಕೆಗಳಿಂ ವಿಭೂತಿಯಂ ತೆಗೆದು ಮಂತ್ರೋದಕದಿಂ ಕಲಸಿ, ಓಂ ಹ್ರೀಂ ತತ್ಪುರುಷಾಯನಮಃ ಎಂಬ ಮಂತ್ರದಿಂದಾ ವಿಭೂತಿಯಂ ಲಿಂಗಕ್ಕೆ ಧರಿಸಿ ೨೮೦

ಮೇಲೆ, ಓಂ ಹ್ರಾಂ ಹೃದಯಾಯನಮಃ ವಸ್ತ್ರಂ ಸ್ವಾಹಾ,
ಓಂ ಹ್ರೈಂ ಕವಚಾಯಹುಂ ಉಪವೀತಂ ಸ್ವಾಹಾ,
ಓಂ ಹ್ರೀಂ ವಾಮದೇವಾಯನಮಃ ಗಂಧಂ ಸ್ವಾಹಾ,
ಓಂ ಹುಃ ಅಸ್ತ್ರಾಯಫಟ್ ಅಕ್ಷತಾನ್ ಸ್ವಾಹಾ,
ಓಂ ನಮಃ ಶಿವಾಯ ಪುಷ್ಪಂ ಸ್ವಾಹಾ ಎಂದಾಯಾಯ ಮಂತ್ರಂಗಳಿಂ ತತ್ತದ್ದ್ರವ್ಯಂಗಳಂ ಸಮರ್ಪಿಸಿ, ಮತ್ತಮಾ ಪುಷ್ಪಂಗಳಿಂದವೆ ಅಂಗುಷ್ಠ ಮಧ್ಯಮ ಅನಾಮಿಕೆಗಳಿಂ ೨೮೧

ಓಂ ಹರಾಯನಮಃ ಪಾದೌ ಪೂಜಯಾಮಿ
ಓಂ ಶಂಭವೇನಮಃ ಗುಲ್ಫೌ ಪೂಜಯಾಮಿ
ಓಂ ಶುಭಾಯನಮಃ ಜಾನುನೀಂ ಪೂಜಯಾಮಿ
ಓಂ ಸರ್ವನಿವಾಸಾಯನಮಃ ಊರುಂ ಪೂಜಯಾಮಿ,
ಓಂ ಸರ್ವಾಶ್ರಯಾಯನಮಃ ಕಟಿಂ ಪೂಜಯಾಮಿ,

ಓಂ ಸರ್ವ ರಕ್ಷಾಯ ನಮಃ ಜಘನಂ ಪೂಜಯಾಮಿ
ಓಂ ದಿಗ್ವಾಸಸೇ ನಮಃ ಮಧ್ಯಂ ಪೂಜಯಾಮಿ
ಓಂ ನಕ್ಷತ್ರ ಮಾಲಿನೇ ನಮಃ ನಾಭಿಂ ಪೂಜಯಾಮಿ
ಓಂ ಸರ್ವೇಶ್ವರಾಯ ನಮಃ ಕುಕ್ಷಿಂ ಪೂಜಯಾಮಿ
ಓಂ ಉಮಾಕಾಂತಾಯ ನಮಃ ವಕ್ಷಸ್ಥಲಂ ಪೂಜಯಾಮಿ
ಓಂ ನೀಲಕಂಠಾಯ ನಮಃ ಕಂಠಂ ಪೂಜಯಾಮಿ
ಓಂ ತ್ರಿಪುರ ಸಂಹರ್ತ್ರೇ ನಮಃ ಬಾಹೂನ್ಪೂಜಯಾಮಿ
ಓಂ ಶಂಕರಾಯ ನಮಃ ಕರಾನ್ಪೂಜಯಾಮಿ
ಓಂ ವೃಷಭಾಯ ನಮಃ ಬಹಿಃಕಂಠಂ ಪೂಜಯಾಮಿ
ಓಂ ಕ್ರತು ಫಲದಾಯಿನೇ ನಮಃ ಮುಖಂ ಪೂಜಯಾಮಿ
ಓಂ ನಾಗಹಾರಾಯ ನಮಃ ನಾಸಿಕಂ ಪೂಜಯಾಮಿ
ಓಂ ಇಂದ್ವರ್ಕವಹ್ನಿ ನೇತ್ರಾಯ ನಮಃ ನೇತ್ರಾಣಿ ಪೂಜಯಾಮಿ
ಓಂ ಕಪಾಲಿನೇ ನಮಃ ಲಲಾಟಂ ಪೂಜಯಾಮಿ
ಓಂ ಫಣಿ ಕುಂಡಲಾಯ ನಮಃ ಕರ್ಣೌ ಪೂಜಯಾಮಿ
ಓಂ ಗಂಗಾಧರಾಯ ನಮಃ ಜಟಾಂ ಪೂಜಯಾಮಿ
ಓಂ ಸೋಮ ಭೂಷಣಾಯ ನಮಃ ಕಪರ್ದಂ ಪೂಜಯಾಮಿ
ಓಂ ಶುಭದಾಯಿನೇ ನಮಃ ಸರ್ವಾಂಗಾನಿ ಪೂಜಯಾಮಿ

ಎಂದು ಲಿಂಗದವಯವ ಪೂಜೆಗಳಂ ವಿಸ್ತರಿಸಿ, ಅನಂತರದಲ್ಲಿ

ಮಾತೃಕಾಕ್ಷರಾದಿ ನ್ಯಾಸ :

ಓಂ ಹ್ರಾಂ ಹೃದಯಾಯ ನಮಃ, ಓಂ ಹ್ರೀಂ ಶಿರಸೇಸ್ವಾಹಾ
ಓಂ ಹ್ರೂಂ ಶಿಖಾಯೈವಷಟ್, ಓಂ ಹ್ರೈಂ ಕವಚಾಯ ಹುಂ
ಓಂ ಹ್ರೌಂ ನೇತ್ರತ್ರಯಾ ವೌಷಟ್ ಓಂ ಹ್ರಃ ಅಸ್ತ್ರಾಯ ಫಟ್
ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಂ ಎಂಬ ಶಿವಾಂಗ ಮಂತ್ರಮಂ
ಓಂ ಹಂ ಹ್ರೌಂ ಹಂ ಹೌಂ ಹಂಸ ಎಂಬ ಪಂಚ ಪ್ರಸಾದ ಮಂತ್ರಮಂ
ನಮಃ ಶಿವಾಯ ಎಂಬ ಪಂಚಾಕ್ಷರ ಮಂತ್ರಮಂ
ಓಂ ನಮಃ ಶಿವಾಯ ಎಂಬ ಮೂಲ ಪಂಚಾಕ್ಷರ ಮಂತ್ರಮಂ
ಓಂ ಹ್ರಾಂ ಹ್ರೀಂ ಹ್ರೂಂ ನಮಃ ಶಿವಾಯ ಎಂಬ ಸ್ಥೂಲ ಪಂಚಾಕ್ಷರ ಮಂತ್ರಮಂ
ಓಂ ಹ್ರೀಂ ಶಿವಾಯನಮಃ ಎಂಬ ಸೂಕ್ಷ್ಮ ಪಂಚಾಕ್ಷರ ಮಂತ್ರಮಂ
ಓಂ ಹ್ರೀಂ ಹ್ರೂಂ ನಮಃ ಶಿವಾಯ ಎಂಬ ಮಾಯಾಖ್ಯ ಪಂಚಾಕ್ಷರ ಮಂತ್ರಮಂ

ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ನಮಃ ಶಿವಾಯ ಎಂಬ ಪ್ರಸಾದ ಪಂಚಾಕ್ಷರ ಮಂತ್ರಮಂ

ಓಂ ಹಃ ಅನಂತಶಕ್ತಿಧಾಮ್ನೇ ಜ್ಯೋತಿರೂಪಾಯ ಶಿವಾಸ್ತ್ರಾಯ ಫಟ್ ಎಂಬ ಶಿವಾಸ್ತ್ರ ಮಂತ್ರಮಂ

ಓಂ ಅಂ ಈಂ ಊಂ ವ್ಯೋಮವ್ಯಾಪಿನೇ ವ್ಯೋಮಾಸ್ತ್ರಾಯ ಫಟ್ ಎಂಬ ವ್ಯೋಮಾಸ್ತ್ರ ಮಂತ್ರಮಂ

ಓಂ ಶಿಂ ಪಶುಹುಂ ಫಟ್ ಎಂಬ ಪಾಶುಪತಾಸ್ತ್ರ ಮಂತ್ರಮಂ,

ಓಂ ಚಿಚ್ಛಿಖಿ ಚಿಚ್ಛಿದಿಕ್ಷು ಕೃತಕ್ಷುರಿಕಾಸ್ತ್ರಾಯ ಫಟ್ ಎಂಬ ಕ್ಷುರಿಕಾಸ್ತ್ರ ಮಂತ್ರಮಂ,

ಓಂ ಪ್ರಸ್ಫುರ ಪ್ರಸ್ಫುರ, ಘೋರ ಘೋರ, ತಮ ತಮ, ತನುರೂಪ ತನುರೂಪ, ಚಟಚಟ, ಕಹ ಕಹ, ವಮವಮ, ಬಂಧ ಬಂಧ, ಘಾತಯ ಘಾತಯ, ಹುಂ ಫಟ್ ಎಂಬ ಅಘೋರಾಸ್ತ್ರ ಮಂತ್ರಮಂ ಲಿಂಗಮಧ್ಯ ದೊಳನುಸಂಧಾನಿಸಿ, ೨೮೩

ಬಳಿಕ ಅಕಾರ ಆಕಾರಂಗಳೇ ಕ್ರಮದಿಂ ಮೂರ್ಧ್ನಿ ಲಲಾಟಂಗಳು
ಇಕಾರ ಈಕಾರಂಗಳೇ ದಕ್ಷಿಣವಾಮ ನೇತ್ರಂಗಳು
ಉಕಾರ ಊಕಾರಂಗಳೇ ದಕ್ಷಿಣ ವಾಮ ಶ್ರೋತ್ರಂಗಳು
ಋಕಾರ ೠಕಾರಂಗಳೇ ದಕ್ಷಿಣ ವಾಮ ಕಪೋಲಂಗಳು,
ಲೃಕಾರ ಲೄಕಾರಂಗಳೇ ದಕ್ಷಿಣ ವಾಮ ನಾಸಾಪುಟಂಗಳು,
ಏಕಾರ ಐಕಾರಂಗಳೇ ಊರ್ಧ್ವಾಧೋಷ್ಠಂಗಳು,
ಓಕಾರ ಔಕಾರಂಗಳೇ ಊರ್ಧ್ವಾಧೋ ದಂತ ಪಜ್ತಿಗಳು
ಅಂ ಕಾರ ಅಃಕಾರಂಗಳೇ ಮೇಲು ಕೆಳಗಣ ವಸಡುಗಳು.
ಕಾದಿ ಪಂಚಾಕ್ಷರಂಗಳೇ ದಕ್ಷಿಣ ಪಂಚ ಹಸ್ತಂಗಳು
ಚಾದಿ ಪಂಚಾಕ್ಷರಂಗಳೇ ವಾಮ ಪಂಚಕರಂಗಳು
ಟಾದಿ ತಾದಿ ಪಂಚಾಕ್ಷರಂಗಳೇ ದಕ್ಷಿಣ ವಾಮ ಪಾದಂಗಳು,
ಪಕಾರವೇ ಉದರ, ಫಕಾರ ಬಕಾರಂಗಳೇ ದಕ್ಷಿಣ ವಾಮ ಪಾರ್ಶ್ವಂಗಳು,
ಭಕಾರವೇ ಸ್ಕಂಧ, ಮಕಾರವೇ ಹೃದಯ,
ಯಕಾರಾದಿ ಸಕಾರಾಂತಮಾದಕ್ಷರಂಗಳೇ ತ್ವಗಾದಿ ಸಪ್ತಧಾತುಗಳು,
ಹಕಾರವೇ ಆತ್ಮನು, ಕ್ಷಕಾರವೇ ಪೂಜಕರ ಜನ್ಮಾದಿರಿಪು ವಿಷಯಮಾದ ಕ್ರೋಧವಹುದೆಂದು ಲಿಂಗಮಧ್ಯದಲ್ಲಿ ಮಾತೃಕಾಕ್ಷರ ನ್ಯಾಸವನಿಂತು ಸ್ಮರಿಸಿ; ೨೮೪

## ಕಲಾನ್ಯಾಸ ಪೂಜಾದಿಗಳು :

ಮತ್ತಮಾ ಲಿಂಗಮಧ್ಯದಲ್ಲಿ ಕಲಾನ್ಯಾಸ ಬ್ರಹ್ಮನ್ಯಾಸಂಗಳಂ ನೆನೆದು. ಮರಳಿ

"ಓಂ ಹ್ರೌಂ ನೇತ್ರತ್ರಯಾಯವೌಷಟ್ ಧೂಪಂ ಸ್ವಾಹಾ" ಎಂಬ ಮಂತ್ರದಿಂ ಧೂಪವಂ ಬೀಸಿ,

"ಓಂ ಹ್ರೈಂ ಕವಚಾಯ ಹುಂ ದೀಪಂ ಸ್ವಾಹಾ'' ಎಂಬ ಮಂತ್ರದಿಂ ನೀರಾಜನಾದಿ ದೀಪವಂಬೆಳಗಿ

"ಓಂ ಶಿವಾಯನಮಃ" ಎಂಬ ಮೂಲ ಮಂತ್ರದಿಂ ಪರಮಾನ್ನಾದಿ ನೈವೇದ್ಯವಂ ಪತಾಕ ಮುದ್ರೆಯಿಂ ಸಮರ್ಪಿಸಿ. ಮೇಲೆ,

"ಓಂ ನಮಃ ಶಿವಾಯ ಪಾನೀಯಂ ಸ್ವಾಹಾ''

"ಓಂ ಹ್ರಾಂ ಹೃದಯಾಯನಮಃ ಆಚಮನಂ ಸ್ವಾಹಾ"

"ಓಂ ನಮಃ ಶಿವಾಯ ಅನುಲೇಪನಂ ಸ್ವಾಹಾ"

"ಓಂ ಹ್ರೀಂ ತತ್ಪುರುಷಾಯನಮಃ ತಾಂಬೂಲಂ ಸ್ವಾಹಾ''

''ಓಂ ಹಂ ಹ್ರೌಂ ಹಂ ಹ್ರೌಂ ಹಂಸಃ ಆಭರಣಂ ಸ್ವಾಹಾ''ಎಂದು ತತ್ತನ್ಮಂತ್ರದಿಂದಾಯಾಯ ವಸ್ತುಗಳಂ ನಿವೇದಿಸಿ, ಬಳಿಕ

''ಓಂ ನಮಃ ಶಿವಾಯ ದರ್ಪಣಂ ಸ್ವಾಹಾ'' ಎಂದು ದರ್ಪಣಾದಿ ಛತ್ರ ಚಾಮರ ವ್ಯಜನಾದಿಗಳಂ ಸಮರ್ಪಿಸಿ, ಬಳಿಕ ಲೌಕಿಕ ವೈದಿಕಾದಿ ಸ್ತೋತ್ರಂಗಳಂ ಮಾಡಿ, ೨೮೫

ಮರಳಿ,

| | |
|---|---|
| ಭವಾಯ ದೇವಾಯ ನಮಃ | ಪಶುಪತಯೇ ದೇವಾಯ ನಮಃ |
| ಶರ್ವಾಯ ದೇವಾಯ ನಮಃ | ಉಗ್ರಾಯ ದೇವಾಯ ನಮಃ |
| ರುದ್ರಾಯ ದೇವಾಯ ನಮಃ | ಭೀಮಾಯ ದೇವಾಯ ನಮಃ |
| ಸಹ ಮಹತೇ ದೇವಾಯ ನಮಃ | ಈಶಾನಾಯ ದೇವಾಯ ನಮಃ |

ಎಂಬ ಅಷ್ಟಮಂತ್ರದಿಂದ ಅಷ್ಟ ಪುಷ್ಪಂಗಳಂ ಸಮರ್ಪಿಸಿ,

ಬಳಿಕ, ಪೂರ್ವೋಕ್ತ ''ಶಿವಾಯನಮಃ" ಎಂಬುದು ಮೊದಲಾದ ದ್ವಾದಶ ಮಂತ್ರದಿಂದಷೆ ಪುಷ್ಪಾಂಜಲಿಯಂ ಕೊಟ್ಟು, ಮೇಲೆ, ತ್ರಿಯಂಬಕ ಮಂತ್ರದಿಂ ಮಂತ್ರ ಪುಷ್ಪಮಂ ಸಮರ್ಪಿಸಿ, ಬಳಿಕ ದಕ್ಷಿಣ ಕರಾಂಜಲಿಯಿಂ ಪುಷ್ಪೋದಕಂಗಳಂ ತಳೆದಾಚತುರಂಗುಲಿಗಳಿಂ ಆಕುಂಚನಂಗೈದು, "ಪೂಜಾಂ ತರ್ಪಯಾಮಿ'' ಎಂದಾ ಪೂಜಾ ಪುಷ್ಪೋದಕಂಗಳಂ ತನ್ನ ಪಾದಮೂಲದೆಡೆಗೆ ಕನಿಷ್ಠಾಂಗುಲಿಯಿಂ ದೆರೆದು ಪೂಜಾಸಮಾಪ್ತಂ ಗೆಯ್ಯಲ್ವೇಳ್ಕುಂ. ೨೮೬

## ವಿಶೇಷ ವೀರಶೈವ ಷಟ್‌ಸ್ಥಲ ವಿಷಯ:

ಮತ್ತಮಾ ವಿಶೇಷ ವೀರಶೈವನು ತನಗೆ ಶ್ರೀಗುರುವಿಂದುಪದೇಶಮಾದ ವೇದ ಪುರಾಣಾಗಮಸಾರಮಪ್ಪ ಪುರಾತನ ಮಾರ್ಗಮಾದ ಸರ್ವೋತ್ಕೃಷ್ಟಮಾದ ಷಟ್‌ಸ್ಥಲದಲ್ಲಿ ಭಕ್ತಿ, ಕರ್ಮಕ್ಷಯ, ನಿರ್ಮಲಮತಿ, ವಿಚಾರ ದರ್ಪಸಂಕ್ಷಯ, ಸಮ್ಯಜ್ಞಾನವೆಂಬಾರು ಫಲಕ್ರಮಂಗಳನುಳ್ಳ ಭಕ್ತ ಮಾಹೇಶ್ವರ,ಪ್ರಸಾದಿ, ಪ್ರಾಣ ಲಿಂಗಿ, ಶರಣ, ಐಕ್ಯರೆಂಬ ಷಟ್‌ಸ್ಥಲಂಗಳಂ; ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮರೆಂಬ ಷಡಂಗಗಳಂ ; ಚಿತ್ತ, ಮನ, ಬುದ್ಧಿ, ಅಹಂಕಾರ, ಜ್ಞಾನ ಭಾವಂಗಳೆಂಬ ಆರು ಹಸ್ತಗಳಂ; ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿ ಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ಮಹಾಸಾದಾಖ್ಯವೆಂಬಾರು ಸಾದಾಖ್ಯಂಗಳಂ; ಕ್ರಿಯಾಶಕ್ತಿ ಇಚ್ಛಾಶಕ್ತಿ, ಜ್ಞಾನಶಕ್ತಿ, ಆದಿಶಕ್ತಿ, ಪರಾಶಕ್ತಿ, ಚಿಚ್ಛಕ್ತಿಯೆಂಬಾರು ಶಕ್ತಿಗಳಂ; ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮ ಲಿಂಗ, ಪ್ರಸಾದಲಿಂಗ, ಮಹಾಲಿಂಗವೆಂಬ ಷಡ್ವಿಧಲಿಂಗಂಗಳಂ ; ನಿವೃತ್ತಿ, ಪ್ರತಿಷ್ಠೆ, ವಿದ್ಯೆ, ಶಾಂತಿ, ಶಾಂತ್ಯಾತೀತೆ, ಶಾಂತ್ಯಾತೀತೋತ್ತರೆ ಎಂಬಾರು ಕಲೆಗಳಂ; ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯವೆಂಬಾರು ಮುಖಂಗಳಂ; ಗಂಧ, ರಸ, ರೂಪು, ಸ್ಪರ್ಶ, ಶಬ್ದ, ಪರಿಣಾಮವೆಂಬಾರು ಪದಾರ್ಥಂಗಳಂ; ಶ್ರದ್ಧಾಭಕ್ತಿ, ನಿಷ್ಠಾ ಭಕ್ತಿ, ಅವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ, ಸಮರಸಭಕ್ತಿ ಎಂಬಷಡ್ವಿಧ ಭಕ್ತಿಗಳಂ ಪರಿವಿಡಿದಪ್ಪದರಿದಾಚರಿಸುವಲ್ಲಿ, ಮೊದಲ 'ಭಕ್ತಸ್ಥಲದೊಳಾಚಾರಾದಿ ಷಡ್ವಿಧಲಿಂಗಂಗಳೊಂದು ಕ್ರಿಯಾಭೇದದಿಂ ಮೂರು ಮೂರಾಗಿ ಹದಿನೆಂಟುತೆರ ನಾಗಿರ್ಪವದೆಂತೆಂದೊಡೆ: ೨೮೭

## ಆಚಾರತ್ರಯ:

ಸದಾಚಾರ, ನಿಯತಾಚಾರ, ಗಣಾಚಾರವೆಂದು ಆಚಾರ ತ್ರಿವಿಧಮವರಲ್ಲಿ: ಆವುದಾನೊಂದು ತನ್ನ ಸನ್ಮಾರ್ಗದಿಂ ಸಕಲ ಶರಣರ್ಗೆ ಸಂತೋಷಮಹುದೇ ಸದಾ ಚಾರವೆನಿಸೂದು ಭಕ್ತಿಯಿಂ ತಾನು ಪಿಡಿದಾಚಾರಮಂಪ್ರಾಣಾಂತಮಾಗಿ ನಡಸೂದೇ ನಿಯಾತಾಚಾರವೆನಿಸೂದು. ಶಿವಮಾಹೇಶ್ವರ ನಿಂದಕರುಗಳಂ ಶಿಕ್ಷಿಸುವೆನೆಂಬುದೇ ಗಣಾಚಾರಮುಕ್ಕುಂ, ೨೮೮

## ತ್ರಿವಿಧ ಗುರುಲಿಂಗ:

ಬಳಿಕ, ದೀಕ್ಷೆ, ಶಿಕ್ಷೆ ಸ್ವಾನುಭಾವಮೆಂದು ಗುರುಲಿಂಗ ತ್ರಿವಿಧಮವರಲ್ಲಿ ಆಗಮೋಕ್ತ ವಿಧಾನದಿಂ ಕುಂಡ ಮಂಡಲಾದಿರಚನೆಗಳಂ ಷಡ್ವಿಧ ಶುದ್ಧಾದಿಗಳಂ ಮಾಳ್ಪುದೇ ದೀಕ್ಷೆಯೆನಿಸೂದು. ಜಂಗಮವೆ ಲಿಂಗವೆಂಬಿದುಮೊದಲಾದ

ಸಮ್ಯಜ್ಞಾನವು ಸತ್ಪುರುಷರುಗಳಿಂದಹುದೆ ಶಿಕ್ಷೆಯೆನಿಸೂದು. ಪೂರ್ವಜನ್ಮ ಸಂಸ್ಕಾರ ಬಲದಿಂ ಭಕ್ತಿಜ್ಞಾನಾದಿಕಂ ತಾನೇತೋರ್ಪುದೇ ಸ್ವಾನುಭಾವವುಕ್ಕುಂ. ೨೮೯

### ತ್ರಿವಿಧ ಶಿವಲಿಂಗ:

ಬಳಿಕ ಇಷ್ಟಲಿಂಗ, ಪ್ರಾಣಲಿಂಗ, ತೃಪ್ತಿಲಿಂಗವೆಂದು ಶಿವಲಿಂಗತ್ರಿವಿಧವವರಲ್ಲಿ ಶ್ರೀಗುರು ಶಿವದೀಕ್ಷೆಯಿಂದಿತ್ತುದೇ ಇಷ್ಟಲಿಂಗವೆನಿಸೂದು.
ದೇಹಗುಣವ್ಯಾಪ್ತಿಯಂ ಬಿಟ್ಟು ಶಿವ ಲಿಂಗಸ್ವರೂಪದಲ್ಲಿ ಮನಂ ಮುಟ್ಟಿದುದೇ ಪ್ರಾಣಲಿಂಗವೆನಿಸೂದು. ಸಕಲಾವಸ್ಥೆಗಳಲ್ಲಿಯೂ ಶಿವಲಿಂಗದೊಡನನನ್ಯ ಭಾವನೆಯೇ ತೃಪ್ತಿಲಿಂಗವುಕ್ಕುಂ. ೨೯೦

### ಜಂಗಮಲಿಂಗ ತ್ರಿವಿಧ:

ಬಳಿಕ ಸ್ವಯಲಿಂಗ, ಚರಲಿಂಗ, ಪರಲಿಂಗವೆಂದು ಜಂಗಮಲಿಂಗತ್ರಿವಿಧ ವವರಲ್ಲಿ ; ಶಿವಲಾಂಛನಮಂ ಧರಿಸಿ ತಾನೇ ಲಿಂಗದೆಂದರಿದು ಬಾಹ್ಯಕರ್ಮ ಪರಿತ್ಯಾ ಗದಿಂದ ಸದಾನಂದಿಯಾಗುಹುದೇ ಸ್ವಯಲಿಂಗವೆನಿಸೂದು.

ಶಿವಲಿಂಗದೊಡನೆ ಸರ್ವೇಂದ್ರಿಯಂಗಳೆರಕವಾಗಿ ಭೇದ ಭ್ರಾಂತಿಮರಳಿ ಪುಟ್ಟದೆ, ನಿಜಾನಂದದಿಂ ಸ್ವೇಚ್ಛೆಯಿಂ ವಿಹರಿಪುದೇ ಚರಲಿಂಗವೆನಿಸೂದು.
ಸ್ಥಾವರ ಜಂಗಮಾದಿ ಸಕಲಕ್ಕಧಿಷ್ಠಾತೃ ತಾನಪ್ಪುದೇ ಪರಲಿಂಗವುಕ್ಕುಂ ೨೯೧

### ತ್ರಿವಿಧ ಪ್ರಸಾದಲಿಂಗ:

ಬಳಿಕ ಶುದ್ಧ, ಸಿದ್ಧ, ಪ್ರಸಿದ್ಧವೆಂದು ಪ್ರಸಾದಲಿಂಗತ್ರಿವಿಧವವರಲ್ಲಿ; ಗುರುಭುಕ್ತ ಶೇಷವೇ ಶುದ್ಧವೆನಿಸೂದು. ಲಿಂಗಭುಕ್ತ ಶೇಷವೇ ಸಿದ್ಧವೆನಿಸೂದು. ಜಂಗಮ ಭುಕ್ತ ಶೇಷವೇ ಪ್ರಸಿದ್ಧವೆನಿಸೂದು. ಅಲ್ಲಮತ್ತೆ, ಪೂರ್ವ ಸಕಲ ಕರ್ಮ ಗುಣಂಗಳಂ ತ್ಯಜಿಸಿ, ಕಾಮಾದಿಗಳಂ ಬಿಟ್ಟು, ಲಿಂಗಾಣತಿವಿಡಿದಿಹುದೇ ಶುದ್ಧ ವೆನಿಸೂದು, ಶಿವಜ್ಞಾನೋದಯು ಮಾದುದೇ ಸಿದ್ಧವೆನಿಸೂದು, ಶಿವೋಹಂ ಭಾವ ನಿಶ್ಚಲೀಕೃತಮಾದುದೇ ಪ್ರಸಿದ್ಧವುಕ್ಕುಂ. ೨೯೨

### ತ್ರಿವಿಧ ಮಹಾಲಿಂಗ:

ಬಳಿಕ ಪಿಂಡಜಲಿಂಗ, ಅಂಡಜಲಿಂಗ, ಬಿಂದ್ವಾಕಾಶಲಿಂಗವೆಂದು ಮಹಾಲಿಂಗತ್ರಿವಿಧವವರಲ್ಲಿ; ದೇಹವೇ ದೇಗುಲ, ಆತ್ಮನೇಶಿವಲಿಂಗವೆಂಬ ನಿಶ್ಚಯವೇ ಪಿಂಡಜಲಿಂಗವೆನಿಸೂದು. ಭೂಮಿಯೇ ಪೀಠ, ಆಕಾಶವೇ ಲಿಂಗವೆಂಬ ವಿಕಲ್ಪರಹಿತಭಾವನೆಯೇ ಅಂಡಜಲಿಂಗ ವೆನಿಸೂದು. ಆಕಾಶವನೇ ತನ್ನೊಡನೆ, ತನ್ನೊಡನಾಕಾಶವನ್ಯೋನ್ಯ ವ್ಯಾಪ್ತಿ ಗೈದನುಸಂಧಾನಿಪುದೇ ಬಿಂದ್ವಾಕಾಶಲಿಂಗವುಕ್ಕುಂ. ೨೯೩

## ಆಚಾರಲಿಂಗ ಷಡ್ಭಕ್ತರು:

ಮತ್ತಮಾ ಭಕ್ತನೆ ಆಚಾರಾದಿ ಷಡ್ವಿಧ ಲಿಂಗಂಗಳಲ್ಲಿ, ವರ್ತನಾಭೇದದಿಂ ದಾರಾರಾಗಿ ಮೂವತ್ತಾರು ತೆರನಾಗಿರ್ಪನದೆಂತೆಂದೊಡೆ.

ಆಚಾರಲಿಂಗಮೋಹಿ, ಆಚಾರಲಿಂಗಭಕ್ತನು, ಆಚಾರಲಿಂಗಪೂಜಕನು

ಆಚಾರಲಿಂಗವೀರನು, ಆಚಾರಲಿಂಗಪ್ರಸಾದಿ, ಆಚಾರಲಿಂಗ ಪ್ರಾಣಿಯೆಂದು ಆಚಾರಲಿಂಗದಲ್ಲಿ ಷಡ್ವಿಧ ಲಿಂಗವವರೊಳಗೆ: ಆಚಾರಹೀನರಾದ ಸ್ತ್ರೀಪುತ್ರಾದಿಗಳಂ ಬಿಟ್ಟು ನಿರ್ಮೋಹಿಯಾಗಿರ್ಪಾತನೇ ಆಚಾರಲಿಂಗಮೋಹಿ, ಶಿವಾಚಾರಕ್ಕೆ ವಿರುದ್ಧಮಾದ ತನ್ನ ಪೂರ್ವಾಚಾರವಂ ಬಿಟ್ಟಾತನೇ ಆಚಾರಲಿಂಗಭಕ್ತನು, ಅನ್ಯ ದೇವತಾಭಜನೆಯನುಳಿದು ಲಿಂಗಾರ್ಚನಾ ತತ್ಪರನೇ ಆಚಾರಲಿಂಗ ಪೂಜಕನು, ತಾನು ಪಿಡಿದಾಚಾರವಂ ಪ್ರಾಣತ್ಯಾಗವಾದರೂ ಬಿಡದಾತನೇ ಆಚಾರಲಿಂಗ ವೀರನು. ಶುಚಿತ್ವ ಅಶುಚಿತ್ವಾದಿ ಸಂಕಲ್ಪರಹಿತನೇ ಆಚಾರಲಿಂಗ ಪ್ರಸಾದಿ, ಶಿವಮಾಹೇಶ್ವರರ ನಿಂದೆಗಳನಾಡದಾಲಿಸದಾತನೇ ಆಚಾರಲಿಂಗಪ್ರಾಣಿಯೆನಿಸಿಕೊಳ್ವಂ. ೨೯೪

## ಗುರುಲಿಂಗ ಷಡ್ಭಕ್ತರು :

ಬಳಿಕ, ಮಾತಾಪಿತೃಗಳಲ್ಲಿ ಮೋಹಂಗಳಂಬಿಟ್ಟು ಗುರುವಿನಲ್ಲಿ ಪ್ರೀತನೆ ಗುರುಲಿಂಗಮೋಹಿ,
ಬಂಧುಗಳುಪಚಾರವನುಳಿದು ಗುರುವಿನೊಳನುರಾಗಿಯೇ ಗುರುಲಿಂಗ ಭಕ್ತನು.
ಬೇರೊಂದು ಪೂಜೆಯನೊಲ್ಲದೆ ಗುರುಭಜನಾನ್ವಿತನೇ ಗುರುಲಿಂಗ ಪೂಜಕನು,
ಅನ್ಯಮಾರ್ಗವಂ ತ್ಯಜಿಸಿ ಗುರೂಕ್ತಿಮಾರ್ಗವರ್ತಿಯೇ ಗುರುಲಿಂಗ ವೀರನು,
ಗುರುವಿನಾಜ್ಞಾವಶಂಗತನೇ ಗುರುಲಿಂಗ ಪ್ರಸಾದಿ.
ಅನ್ಯಸೇವೆಯನುಲ್ಲಂಘಿಸಿ ಗುರುಸೇವಾರತನೆ ಗುರುಲಿಂಗ ಪ್ರಾಣಿಯೆನಿಸಿಕೊಳ್ವಂ
೨೯೫

## ಶಿವಲಿಂಗ ಷಡ್ಭಕ್ತರು :

ಬಳಿಕ, ಅನ್ಯಮೋಹವಿಲ್ಲದಾತನೇ ಶಿವಲಿಂಗಮೋಹಿ.
ಅನ್ಯದೈವ ನಿರಾಸಕನೇ ಶಿವಲಿಂಗಭಕ್ತನು.
ಅನ್ಯದೈವಭಜನೆಯಿಲ್ಲದಾತನೇ ಶಿವಲಿಂಗ ಪೂಜಕನು.

ಬೇರೆ ಪುಣ್ಯಕ್ಷೇತ್ರ ಯಾತ್ರಾದಿಗಳನುಳಿದಾತನೇ ಶಿವಲಿಂಗ ವೀರನು.
ಸುಖದುಃಖಾದಿಗಳಂ ಸ್ವೀಕರಿಸುವಾತನೇ ಶಿವಲಿಂಗಪ್ರಸಾದಿ.
ಸ್ತ್ರೀ ಸಂಭೋಗಾದಿಕವಿಲ್ಲದಾತನೇ ಶಿವಲಿಂಗ ಪ್ರಾಣಿಯೆನಿಸಿಕೊಳ್ವಂ
೨೯೬

## ಜಂಗಮಲಿಂಗ ಷಡ್ಭಕ್ತರು :

ಬಳಿಕ, ತನ್ನ ಪೂರ್ವಾಚಾರಂಗಳಂ ನಿಷೇಧಿಸಿದಾತನೇ ಜಂಗಮಲಿಂಗವೋಹಿ,
ಜಾತಿ ಕುಲಾಭಿಮಾನವಂ ನೀತಿಗಳೆದಾತನೇ ಜಂಗಮಲಿಂಗ ಭಕ್ತನು,
ಅನ್ಯಾರ್ಚನೆಗೆಳಸದಾತನೇ ಜಂಗಮಲಿಂಗ ಪೂಜಕನು
ಅರ್ಥಪ್ರಾಣಾದಿಗಳಂ ಜಂಗಮಕಿತ್ತು ಮರಳಿ ಮೋಹಿಸದಾತನೇ ಜಂಗಮ ಲಿಂಗವೀರನು.
ಜಂಗಮಕ್ಕೆ ಸಕಲ ದ್ರವ್ಯಂಗಳಂ ಕೊಟ್ಟಲ್ಲದೆ ಕೊಳ್ಳದಾತನೇ ಜಂಗಮ ಲಿಂಗಪ್ರಸಾದಿ
ಜಂಗಮವೇ ಸಾಕ್ಷಾಚ್ಛಿವನೆಂಬ ವಿಶ್ವಾಸಿಯೇ ಜಂಗಮಲಿಂಗಪ್ರಾಣಿ ಯೆನಿಸಿಕೊಳ್ವಂ
೨೯೭

## ಪ್ರಸಾದಲಿಂಗ ಷಡ್ಭಕ್ತರು :

ಬಳಿಕ, ಅನ್ಯರುಚಿಯನರಿಯದಾತನೇ ಪ್ರಸಾದಲಿಂಗವೋಹಿ
ಪೂರ್ವಾಹಾರಂಗಳಂ ಬಿಟ್ಟಾತನೇ ಪ್ರಸಾದಲಿಂಗಭಕ್ತನು
ಅನ್ಯಜನರೊಡನೆ ಸ್ನೇಹ ಸಂಭಾಷಣ ದಾನ ಪ್ರತಿಗ್ರಹಗಳಿಲ್ಲದಾತನೇ ಪ್ರಸಾದಲಿಂಗಪೂಜಕನು
ಅನ್ಯದ್ರವ್ಯಾದಿಗಳಂ ಕೈಯಿಂ ಮುಟ್ಟದಾತನೇ ಪ್ರಸಾದಲಿಂಗ ವೀರನು
ಜೀವಹಿಂಸಾದಿಗಳನೆಲ್ಲಿಯೂ ಮಾಡದೆ, ಮಾಡಿಸದಾತನೇ ಪ್ರಸಾದಲಿಂಗ ಪ್ರಸಾದಿ
ಆತ್ಮನಿಗ್ರಹವಂ ಮಾಡದಾತನೇ ಪ್ರಸಾದಲಿಂಗ ಪ್ರಾಣಿಯೆನಿಸಿಕೊಳ್ವಂ.
೨೯೮

## ಮಹಾಲಿಂಗ ಷಡ್ಭಕ್ತರು :

ಬಳಿಕ, ಲೋಕವೃತ್ತಾಂತವಂ ನೆನೆಯದಾತನೇ ಮಹಾಲಿಂಗವೋಹಿ.
ಪೂರ್ವಭಕ್ತ್ಯಾದ್ಯನುಸಂಧಾನವಿಲ್ಲದಾತನೇ ಮಹಾಲಿಂಗಭಕ್ತನು
ಅಜ್ಞಾನಿಗಳೊಡನೆ ಸಂಗ ಸಂಭಾಷಣಾದಿಗಳಂ ಮಾಡದಾತನೇ ಮಹಾಲಿಂಗಪೂಜಕನು

ಉತ್ಪತ್ತಿ ಸ್ಥಿತಿ ಲಯಂಗಳಲ್ಲಿಯೂ ಚಿಂತಿಸದಾತನೇ ಮಹಾಲಿಂಗ ವೀರನು
ಸಂಜ್ಞಾ ಭೋಜನಾದಿಕವನುಳಿದಾತನೇ ಮಹಾಲಿಂಗ ಪ್ರಸಾದಿ.
ಬಾಹ್ಯದರ್ಶನಾರ್ಪಣಾದಿಕವನೊಲ್ಲದಂತರಂಗಕ್ರಿಯಾನಿಷ್ಟನೇ
ಮಹಾಲಿಂಗಪ್ರಾಣಿಯೆನಿಸಿಕೊಳ್ವಂ
೨೯೯

## ನೂರೊಂದು ಸ್ಥಲ :

ಬಳಿಕಿಂತು, ಷಟ್‌ಸ್ಥಲ ಭೇದೋಪಭೇದಂಗಳನಾರೈದು ವರ್ಣಿಸುವಲ್ಲಿ ಪಿಂಡಾದಿ ಜ್ಞಾನಶೂನ್ಯಾಂತಮಾದ ಏಕೋತ್ತರಶತಸ್ಥಲ ಕ್ರಮವಾಗಿಹುದಾ ನೂರೊಂದು ಸ್ಥಲಂಗಳೊಳಗೆ ಮೊದಲಂಗಸ್ಥಲ ನಾಲ್ವತ್ತನಾಲ್ಕೆನಿಸಿ, ಮೇಲೆ ಲಿಂಗಸ್ಥಲವೈವತ್ತೇಳೆನೆಸಿಕೊಂಬವವರೊಳಗೆ ಅಂಗಸ್ಥಲ ನಾಲ್ವತ್ತನಾಲ್ಕುಭಕ್ತಾದ್ಯೈಕ್ಯಾಂತಮಾದಂಗಸ್ಥಲ ವಾರಕ್ಕೆ ಕ್ರಮದಿಂ ಹಸಿಗೆಯಾಗಿಹವು. ಮತ್ತಾ ಲಿಂಗಸ್ಥಲವೈವತ್ತೇಳು ಆಚಾರಾದಿ ಮಹಾಲಿಂಗಾಂತಮಾದಾರುಲಿಂಗಸ್ಥಲಗಳಿಗೆ, ಪರಿವಿಡಿದು ವಿಭಾಗವಡೆದು ಕ್ರಮದಿ ಭಕ್ತಾದ್ಯೈಕ್ಯಾಂತಮಾದಾರಂಗಸ್ಥಲಂಗಳ, ತನುತ್ರಯದ ಮೇಲೆ ಲಿಂಗತ್ರಯಾನುಗುಣ್ಯಮಾಗಿ ವರ್ಣಿಸುತ್ತಿರ್ಪವೆಂದಿಂತು, ಲಿಂಗಾಂಗ ಸ್ಥಳಕುಳ ಸಂಬಂಧ ವಿಚಾರ ಮುಖದಿಂ ಗುರು ಲಿಂಗ ಜಂಗಮಕ್ಕೆ ತನು ಮನ ಧನಂಗಳಂ ವಂಚಿಸದಾತನಾಗಿ ಸಕಲ ಸದಾಚಾರ ಸಂಪನ್ನನಾಗಿ ಭಕ್ತಸ್ಥಲವನಂಗಂಗೊಂಡಿರ್ಪಾತನೇ ವಿಶೇಷ ವೀರಶೈವನಪ್ಪಂ. ೩೦೦

## ನಿರಾಭಾರಿ ವೀರಶೈವ ವಿಷಯ :

ಮರಳಿ ಗೃಹಾದಿ ಸರ್ವಸಂಸಾರ ಸೌಖ್ಯ ಪರಿಗ್ರಹಂಗಳಂ ಬಿಟ್ಟು, ವಿದ್ಯೆಯೇಸತಿ ಸಂತೋಷವೇ ಸುತನು, ವಿರಾಗವೇಬಂಧು, ಕ್ಷಮೆಯೆಯೇ ಪರಿಚಾರಕನು, ಶಾಂತಿಯೇ ಸಖನು, ಭಕ್ತಿಯೇ ಮಾತೇ, ಆಚಾರವೇ ತಂದೆ, ಸತ್ಯವೇಸುತೆ, ಶ್ರದ್ಧೆಯೇ ಸೊಸೆ, ಮೈತ್ರ್ಯಾದಿ ಸದ್ಗುಣವೇ ಪೌತ್ರರು, ಜ್ಞಾನವೇ ದೇಹ, ವಿಚಾರವೇ ಕ್ಷೇತ್ರ, ಅಹಿಂಸೆಯೇ ದಾಸಿ, ಅಸ್ತೇಯವೇ ದಾಸನು, ಧರ್ಮವೇ ವಾಹನ, ದಯೆಯೇ ಆಚಾರ್ಯನು, ಮುಕ್ತಿಯೇ ದೇಶವೆಂಬೀ ಪರಮಾರ್ಥಮಾದ ಕುಟುಂಬಮುಳ್ಳಾತನಾಗಿ, ಕಂಥೆ, ದಂಡ, ಕಮಂಡಲು, ಭಿಕ್ಷಾಪಾತ್ರೆ, ಭಸ್ಮಘುಟಿಕೆಯೆಂಬ ಬಾಹ್ಯದ ಪಂಚಮುದ್ರೆಗಳಂ ಆಯಾ ಮಂತ್ರ ಪೂರ್ವಕಮಾಗಿ ಧರಿಸಿ, ಅಂತರಂಗದಲ್ಲಿ ಸಮತೆಯೇ ಕಂಥೆ, ಜ್ಞಾನವೇ ದಂಡ, ದಯವೇ ಕಮಂಡಲು, ವೈರಾಗ್ಯವೇ ಭಿಕ್ಷಾಪಾತ್ರೆ, ಕ್ಷಮೆಯೇ ಭಸ್ಮಘುಟಿಕೆಗಳನುಳ್ಳಾತನಾಗಿ; ತುರುಬು ಜಡೆ ಬೋಳು ಅಜಿನ ವಲ್ಕಲ ದಿಗಂಬರಾದಿ, ವಿಚಿತ್ರ ಶಿವವೇಷಂಗಳನಾದರು ಸ್ವೀಕರಿಸಿ; ನಿಯುತಮಾದ ಭಿಕ್ಷಾಹಾರವಂ ಕೊಂಡು; ಭಸ್ಮೋದ್ಧೂಳನ, ತ್ರಿಪುಂಡ್ರಧಾರಣ, ಶಿವಲಿಂಗಾರ್ಚನ

ಶಿವಮಂತ್ರಜಪ, ಶಿವಧ್ಯಾನ, ಸ್ಥಳಕುಳ ವಿಚಾರ, ಲಿಂಗಾಂಗ ಸಂಯೋಗಾದಿ ಜ್ಞಾನ ಕ್ರಿಯಾಸಂಪನ್ನನಾಗಿ; ರಸ-ರಸಾಯನ ವಾದ, ವಶ್ಯ, ಜೋತಿಷ, ಕ್ರಯವಿಕ್ರಯಾದಿ ಲೌಕಿಕ ವ್ಯವಹಾರಂಗಳಂ ಬಿಟ್ಟು; ವನಿತಾದಿವಿಷಯ ವಿರಕ್ತನಾಗಿ; ಬಳಿಕೀ ಭವಾರಣ್ಯಮಧ್ಯದ ಲೋಭವೆಂಬ ಪಂಕಮಂ ಪುಗದೆ, ಇಂದ್ರಿಯಂಗಳೆಂಬ ರಿಪುಗಳಂ ಲೆಕ್ಕಿಸದೆ, ಮೋಹವೆಂಬ ಪಿಶಾಚಭಯಂದೋರದೆ, ಕ್ರೋಧವೆಂಬ ವ್ಯಾಘ್ರಂಗೆ ಸಿಕ್ಕದೆ, ಮಮತೆಯೆಂಬ ಸರ್ಪಭೀತಿಯಿಲ್ಲದೆ, ಮನ್ಮಥನೆಂಬ ಚೋರಂಗೊಳಗಾಗದೆ, ಮದವೆಂಬಂಧಕಾರದಲ್ಲಿ ಕಣ್ಗೆಡದೆ, ತಾಪತ್ರಯವೆಂಬ ಕುಳಿಯೊಳು ಬೀಳದೆ, ವಿಷಯಂಗಳೆಂಬ ಕಂಟಕಂಗಳಂ ಮುಟ್ಟದೆ, ಅಸೂಯೆಯೆಂಬ ವಿಷಲತೆಯೊಳ್ತೊಡಂಕದೆ, ಅಹಂಕಾರವೆಂಬ ಮಡುವಿನೊಳಗಾಳದೆ ಸರ್ವಾವಧಾನಿಯಾಗಿ ಜಂಗಮಸ್ಥಲವನಂಗಂಗೊಂಡು ಸಂಚರಿಸುವಾತನೇ ನಿರಾಭಾರಿ ವೀರಶೈವನಪ್ಪಂ. ೩೦೧

## ಪ್ರಾಣಿಗಳ ತಾರತಮ್ಯ :

ಬಳಿಕೀ ಷಟ್‌ಸ್ಥಲ ಜ್ಞಾನಿಯಾದ ವೀರಶೈವನೇ ಸರ್ವೋತ್ಕರ್ಷನೆಂಬಲ್ಲಿ (ಅದಕ್ಕೆ ದೃಷ್ಟಾಂತವೆಂತೆನೆ) ಕ್ರಿಮಿ ಕೀಟ ಪತಂಗಜಾತಿಯಿಂ ಪಶುಗಳಧಿಕ,ಆ ಪಶುಗಳಿಂ ಮನುಷ್ಯರಧಿಕ, ಆ ಮನುಷ್ಯರಿಂ ದ್ವಿಜರಧಿಕ, ಆ ದ್ವಿಜರಿಂ ವಿಪ್ರರಧಿಕ ಆ ವಿಪ್ರರಿಂ ಕೃತುಬುದ್ಧಿಗಳಧಿಕ,ಆ ಕೃತುಬುದ್ಧಿಗಳಿಂ ಕರ್ತಾರರಧಿಕವವರಿಂ ಸನ್ಯಾಸಿಗಳಧಿಕ, ಆ ಸನ್ಯಾಸಿಗಳಿಂ ಜ್ಞಾನಿಗಳಧಿಕ, ಆ ಜ್ಞಾನಿಗಳಿಂ ಶಿವಾರ್ಚಕರಧಿಕ, ಆ ಶಿವಾರ್ಚಕರಿಂ ಲಿಂಗಾಂಗ ಸಂಗಿಗಳಧಿಕ, ಆ ಲಿಂಗಾಂಗ ಸಂಗಿಗಳಿಂ ಷಟ್‌ಸ್ಥಲ ಜ್ಞಾನಿಗಳಧಿಕ, ಆ ಷಟ್‌ಸ್ಥಲ ಜ್ಞಾನಿಗಳಿಗೆಯು ಮೂರುಲೋಕದಲ್ಲಿಯೂ ಸಮಾನವಿಲ್ಲಾಗಿ ಮುಮುಕ್ಷುಗಳಿಂದಾ ಷಟ್‌ಸ್ಥಲಜ್ಞಾನಿಗಳಾದ ವೀರಶೈವರೇ ವಂದಿಸಲು, ಪೂಜಿಸಲು, ಯೋಗ್ಯರಹುದೆಂಬಿವು ಮೊದಲಾದವೆಲ್ಲಂ ಕ್ರಿಯಾಪಾದದಲ್ಲಿ ಪ್ರತಿಪಾದ್ಯಮಕ್ಕುಂ. ೩೦೨

## ಚರ್ಯಾಪಾದ :

ಮತ್ತಮಾ ಚರ್ಯಾಪಾದದಲ್ಲಿ ಪ್ರಾಯಶ್ಚಿತ್ತ, ಪವಿತ್ರಾರೋಹಣ, ಉಮಾಮಹೇಶ್ವರ ಲಕ್ಷಣ, ಸ್ಕಂದ ನಂದ್ಯಾದಿ ಗಣೇಶ್ವರರ ಲಕ್ಷಣ, ಜಪಮಾಲಾ ಲಕ್ಷಣ, ಸಕಲಾಶ್ರಮ ಲಕ್ಷಣಾದಿಗಳೆಲ್ಲಂ ಪ್ರತಿಪಾದ್ಯಂಗಳವರೊಳಗೆ ಆಶ್ರಮಧರ್ಮಂಗಳಂ ಪುರಾಣಾಗಮಾದಿ ರೀತಿಯಿಂ ಪ್ರತಿಪಾದಿಸುವೆನದೆಂತೆಂದೊಡೆ: ೩೦೩

## ಆಶ್ರಮ ಚತುಷ್ಟಯ:

ದಧೀಚಿ, ಗೌತಮ, ಅಗಸ್ತ್ಯ, ದೂರ್ವಾಸರೆಂಬ ಋಷಿಚತುಷ್ಟಯಕ್ಕೆ ಕ್ರಮದಿಂದನುಮತವಾದ ಬ್ರಹ್ಮ, ವಿಷ್ಣು, ಸೂರ್ಯ, ಮಹೇಶ್ವರರೆಂಬವರೆ ಪರಿವಿಡಿ

ದಧಿದೇವತೆಯಾದ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ. ಯತಿಗಳೆಂಬವರೆ ಚತುರಾಶ್ರಮಿಗಳವರಲ್ಲಿ; ೩೦೪

ಬ್ರಹ್ಮಚರ್ಯಾಶ್ರಮ:

ಶಿಖಾ ಯಜ್ಞೋಪವೀತಿಯಾಗಿ, ಕಟಿಸೂತ್ರ, ಕಾಷಾಯಾಂಬರ, ಶುಭ್ರವಸ್ತ್ರ, ಕೃಷ್ಣಾಜಿನ, ಪಾಲಾಶಾದಿ ದಂಡ ಭಸ್ಮಧಾರಣಾದಿಗಳಂ, ಸೂತ್ರೋಕ್ತ ಮಂತ್ರಂಗಳಿಂ ಧರಿಸಿ, ಏಕಕಾಲ ಸ್ನಾನ ಉದಯಾಸ್ತಮ ಸಂಧ್ಯಾವಂದನೆ, ಪಿತೃಮಾತೃಸೇವೆ ಬಂಧುಬಾಂಧವಮೈತ್ರಿ, ಗುರುದೇವತಾಭಕ್ತಿ, ವಿದ್ವಜ್ಜನೋಪಾಸ್ತಿ, ಪುಷ್ಪಪತ್ರಾದಿಕ ದಿಂದಗ್ನಿಕಾರ್ಯ, ನಿತ್ಯನೈಮಿತ್ತಿಕಾದಿಕರ್ಮ ವಿಶ್ವಾಸಂಗಳನುಳ್ಳಾತನಾಗಿ. ತಾಂಬೂಲಚರ್ವಣಮಂ ತ್ಯಜಿಸಿ, ಕಾಮಕ್ರೋಧಾದಿಗಳಂ ಬಿಟ್ಟು, ಬ್ರಾಹ್ಮಣ ಜಾತಿ ಯಲ್ಲೇ ಆಗಲಿ ಅಲ್ಲಾಮತ್ತೆ, ಕ್ಷತ್ರಿಯ ವೈಶ್ಯರಲ್ಲಿಯಾಗಲಿ "ಭವತಿಭಿಕ್ಷಾಂದೇಹಿ" ಎಂದು ಭಿಕ್ಷಾನ್ನಮಂ ಯಾಚಿಸಿ ತಂದು, ಬಳಿಕ ಕರಚರಣಾದಿಗಳಂ ತೊಳೆದು, ದ್ವಿರಾಚಮನಂಗೈದು, ಮೇಲಾ ಭಿಕ್ಷಾನ್ನಮಂ ತನ್ನ ಶ್ರೀಗುರುವಿಂಗೆ ಸಮರ್ಪಿ ಸಲಿತ್ತು, ಮರಳಿ ತದನುಜ್ಞೆಯಿಂ ತಾನು ಪೂರ್ವೋತ್ತರದೊಳೊಂದು ದಿಙ್ಮುಖ ನಾಗಿ ಕುಳ್ಳಿರ್ದು, "ಪ್ರಾಣಾಯಸ್ವಾಹಾ ..." ಎಂಬುದು ಮೊದಲಾದ ಮಂತ್ರಂಗಳಿಂ ಕಬಳಗಣನೆಯಿಲ್ಲದೆ ಯಥೇಷ್ಟವಾಗಿ ಭೋಜನಂಗೆಯ್ದು, ಸದಾ ವೇದಾಧ್ಯಯನ ತತ್ಪರನಾಗಿ, ಉಳಿದ ಮಂತ್ರಾನುಷ್ಠಾನವನುಳಿದು, ಲೌಕಿಕ ವೈದಿಕ ಅಧ್ಯಾತ್ಮಿಕಾದಿ ಶಾಸ್ತ್ರಾಭ್ಯಾಸವನಾದೊಡಂ ಮಾಡುತ್ತೆ, ಜಿತೇಂದ್ರಿಯತ್ವಾದಿಸದ್ಗುಣ ಸಂಪನ್ನನಾಗಿ, ಗಾಯತ್ರಿಬ್ರಹ್ಮಚಾರಿ, ಪ್ರಜಾಪತ್ಯಬ್ರಹ್ಮಚಾರಿ, ವೈದಿಕಬ್ರಹ್ಮಚಾರಿ, ನೈಷ್ಠಿಕ ಬ್ರಹ್ಮಚಾರಿಯೆಂದು ನಾಲ್ಕು ತೆರನಾಗಿರ್ಪಾತನೇ ಬ್ರಹ್ಮಚಾರಿಯಪ್ಪಂ. ೩೦೫

ಗೃಹಸ್ಥಾಶ್ರಮ:

ಮತ್ತಮಾ ಬ್ರಹ್ಮಚರ್ಯಾಶ್ರಮದಲ್ಲಿ ವೇದಾಧ್ಯಯನಾದಿಕಮಂ ಲೇಸಾಗಿ ಮಾಡಿದ ಬ್ರಹ್ಮಚಾರಿಯು, ತನಗೆ ವಿರಾಗತೆಪುಟ್ಟೆ ವಾನಪ್ರಸ್ಥಾಶ್ರಮವನಾದರೂ, ಯತ್ಯಾಶ್ರಮವನಾದರೂ ಸ್ವೀಕರಿಸೂದು. ಅಲ್ಲವೆ ರಾಗಯುಕ್ತನಾದೊಡೆ ಆಚಾ ರ್ಯನಾಜ್ಞೆಯಿಂದ ಬ್ರಹ್ಮಚರ್ಯಾಶ್ರಮವನುಳಿದು ಸ್ವಜಾತಿಯಲ್ಲಿಯೆ ಕನ್ನಿಕೆಯಂ ತರುವಲ್ಲಿ ಶಕುನಾದಿಕಮಂ ಪರೀಕ್ಷಿಸಿ. ೩೦೬

ಕನ್ಯಾದುರ್ಲಕ್ಷಣ:

ಬಳಿಕ ಮರ, ಪಕ್ಷಿ, ತೊರೆ, ತಿಪ್ಪೆ ಗಿರಿಪೆಸರುಳ್ಳ, ಬಲುದೋರದೊಡಲ, ಉರುಗಿದಂಗದ, ನೆರೆ ಧೀರ್ಘದೇಹದ, ಕಡುಗಿಡ್ಡಿಯ, ಕೆಂಚುದಲೆಗೂದಲು, ತರಟು ದಲೆಯು, ಬಂಗುಮೊಗದ, ಕುಳಿಕಣ್ಣ, ಕೆಂಗಣ್ಣ, ನಪ್ಪೆಮೂಗಿನ, ಮೊರಗಿವಿಯ

ಜೋಲ್ದುಟಿಯು, ಉರುಗಾಗಿ ತೆರಪಾದ ಹೊರಹಲ್ಲು, ಕುಸಿಗೊರಲ, ಹೆಚ್ಚು ಕುಂದಾದ ಕುಚದ, ನೇರವಲ್ಲದ ತೋಳ್ಕೈವೆರಳ್ಗಳ, ಸುರೇಖೆಯಿಲ್ಲದ ಕರದ, ಚಿಬ್ಬು ಗಂಕುಳಿನ, ಉದ್ಧವಾದುಬ್ಬಿನ ಬೆನ್ನು, ಮೈನವಿರುಳ್ಳ ಕಾಲಸೆರೆಯು, ಕಾಲ್ಬೆರಲುನೇರ ವಿಲ್ಲದ, ಕಿರುಕುಣಿಕೆ ನೆಲನಂ ಮುಟ್ಟದ, ನೆಲನದಿರೆ ನಡವ, ಹೆದ್ದನಿಯು, ಉಣುತ್ತ ಅಳುತ್ತ ಕೊರಗುವ, ತೂಕಡಿಸುವ, ಹೀನಸ್ವರದ, ಶೀಘ್ರಗೆಲಸವರಿಯದ, ಜಗಳ ಗಂಟೆಯು, ಚತುರತೆಯುಲ್ಲದವಳಂ ಬಿಟ್ಟು, ೩೦೭

ಕನ್ಯಾಸಲ್ಲಕ್ಷಣ:

ಬಳಿಕ ನೆಲೆಯಾದಸಿಯೊಡಲ, ನೀಲಗುರುಳ, ಬಟ್ಟಮೊಗದ, ಬಗಸೆಗಣ್ಣ, ನೇರಿತ್ತಾದ ನಾಸಿಕದ, ಕಿರುವಾಯು, ರಂಗಾದುಟಿಯು, ಸಸಿನಮಾದದಂತಪಙ್ತಿಯು, ಕಂಬುಗ್ರೀವದ, ನಿಡುದೋಳ, ಕರತಳದಲ್ಲಿ ಅಂಕುಶ ಶಂಖ ಧ್ವಜ, ಪದ್ಮಾದಿ ಸುರೇಖೆಗಳನುಳ್ಳ ಸಣ್ಣವೆರಳ್ಗಳ, ಸಮಾನವಾದಕುಚದ, ಮೈನವಿರಿಲ್ಲದ, ತೆಳುವಸುರ, ಬಡನಡುವಿನ, ವೃತ್ತಜಘನದ, ನುಣ್ದೊಡೆಯ ಚೆಲುವೆತ್ತ ಕಣಕಾಲ, ಮೃದುಪದದ ಅಲ್ಪಾಹಾರ ಅಲ್ಪ ನಿದ್ರೆಗಳನುಳ್ಳ, ಶೀಘ್ರಗೆಲಸದ, ಸುಸ್ವರದ ಕಲಹವರಿಯದ, ಕಡುಜಾಣೆಯಾದ, ಸರ್ವಲಕ್ಷಣಸಂಪನ್ನೆಯಪ್ಪ ಸಚ್ಚರಿತ್ರಮುಳ್ಳ ಸತಿಯಂ ಸೂತ್ರೋಕ್ತ ಪ್ರಕಾರದಿಂ ವಿವಾಹಮಾಗಿ ೩೦೮

ಶೈವ ನಿತ್ಯಕರ್ಮವಿಚಾರ:

ಆ ಧರ್ಮಪತ್ನಿ ಸಹಿತನಾಗಿಯೆ ಸಕಲಧರ್ಮಂಗಳನಾಚರಿಸುವಲ್ಲಿ: ಶಿಖಾ, ಯಜ್ಞೋಪವೀತ ವೇಣುದಂಡ, ಕಮಂಡಲ, ದೋತ್ರ, ಬಹಿರ್ವಾಸಂಗಳನುಳ್ಳಾತ ನಾಗಿ, ಪ್ರಾತಃ ಕಾಲದಲ್ಲಿ ಶಿವಸ್ಮರಣದಿಂದೆದ್ದು, ನಿರ್ಭಯಮಾದ ನಿರ್ಜನ ಪ್ರದೇಶದಲ್ಲಿ ಮೌನಾದಿವಿಧಿಗಳಿಂ ಮಲಮೂತ್ರಂಗಳಂತ್ಯಜಿಸಿ, ಗುದಗುಹ್ಯಂಗಳಂ ಮೃತ್ತಿಕೆ ಜಲಂಗಳಿಂ ದುರ್ಗಂಧ ನಿವೃತ್ತ್ಯರ್ಥಮಾಗಿ, ಮನಃಶುದ್ಧಿ ಪರಿಯಂತರಂ ಶೌಚಂಗೆಯ್ದು, ಬಳಿಕಾಚಮನಂಮಾಡಿ, ಅಪಾಮಾರ್ಗಾದಿಗಳಿಂ ದಂತಧಾವನಂಗೆಯ್ದು ಮೇಲೆರಡುವೇಳಾಚಮನಂ ಮಾಡಿಂತು, ಮಲಸ್ನಾನಾಂತರದಲ್ಲಿ ತ್ರಿಕಾಲದಲ್ಲಿಯೂ ವಿಧಿಸ್ನಾನಂ ತಪ್ಪದೆ, ತ್ರಿಯಂಬಕಮಂತ್ರ, ಮೂಲಮಂತ್ರಂಗಳಂ, ಕ್ರಮದಿಂ ಭಸ್ಮೋದ್ಧೂಳನ ತ್ರಿಪುಂಡ್ರಧಾರಣಂ ಮಾಡಿ, ರುದ್ರಾಕ್ಷಮಾಲೆಗಳಂ ಮಸ್ತಕಾದಿ ಸ್ಥಾನಂಗಳಲ್ಲಿ ವಿಧ್ಯುಕ್ತಮಾಗಿಧರಿಸಿ, ೩೦೯

ಗಾಯತ್ರಿಜಪ ವಿಧಾನ :

ಬಳಿಕ ಪ್ರಾಣಾಯಾಮತ್ರಯಮಂ ವಿಸ್ತರಿಸಿ, ಮೇಲೆ ಸಾಂಖ್ಯಾಯನ ಗೋತ್ರನಾದ, ಶ್ವೇತವರ್ಣಮಪ್ಪ, ಪ್ರಣವ ಪೂರ್ವಕಮಾದ ಭೂರಾದಿ ಸಪ್ತ ವ್ಯಾಹೃತಿಯನುಳ್ಳ, ತದಾದಿಚತುರ್ವಿಂಶತ್ಯಕ್ಷರಂಗಳಿಂದೆಸೆವ, ಬಳಿಕ ವಿಶ್ವಾಮಿತ್ರನೆ

ಋಷಿ, ಗಾಯತ್ರಿ ಛಂದಸ್ಸು, ರವಿಯೇ ದೇವತೆ, ಶಿವನಧಿದೇವತೆಯಾಗಿ ಮೆರೆವ ಮತ್ತಮಾ ಸಪ್ತವ್ಯಾಹೃತಿಗಳಿಗೆಯು, ಚತುರ್ವಿಂಶತ್ಯಾಕ್ಷರಂಗಳಿಗೆಯೂ, ಬೇರೆ ಬೇರೆ ಋಷಿ,ಛಂದ, ದೇವತೆ,ವರ್ಣ, ಮುದ್ರೆ, ನ್ಯಾಸಾದಿ ಸಾಂಗಿಕವಾದ ಪರಶಿವನೇ ತನಗರ್ಥವಾದ,ಮರಳಿ ನಿತ್ಯಂ ಪ್ರಾತಃಕಾಲದಲ್ಲಿ ಸಾವಿರಜಪವಾಗಿ ಇಪ್ಪತ್ತನಾಲ್ಕು ಲಕ್ಷಜಪವಂ ಮಾಡಿ ನಾಲ್ಕುಸಾವಿರ ಆಜ್ಯಾಹುತಿಯಿಂ, ಕಲ್ಪೋಕ್ತ ಪ್ರಕಾರದಿಂ ಪುನಶ್ಚರಣ ಜಪಂಗೆಯ್ದನಂತರದಲ್ಲಿ ಬೇರೆ ಬೇರೆ ಕ್ಷೀರಾದಿ ಹೋಮ ಸಂಖ್ಯಾ ನಿಯತವಾದ ಜಪಂಗಳಿಂ ೩೧೦

## ಗಾಯತ್ರಿ ಮೂರ್ತ ಸ್ವರೂಪ :

ಸಕಲ ಸಿದ್ಧಿಪ್ರದವಾದ, ಬಳಿಕ ಋಗ್ವೇದ, ಯಜುರ್ವೇದ, ಸಾಮವೇದ ವೆಂಬ ತ್ರಿಪಾದದಿಂದೆಸೆವ ಪೂರ್ವ ದಕ್ಷಿಣ ಪಶ್ಚಿಮೋತ್ತರ ಊರ್ಧ್ವಾರ್ಧಸ್ಸೆಂಬವಾರು ಕುಕ್ಷಿಯಿಂದೊಪ್ಪುವ, ಆಕಾಶವೇ ಕುಕ್ಷಿಯೊಳಗು, ಅಷ್ಟಾದಶ ಪುರಾಣವೇ ನಾಭಿ, ಜಗವೇ ಶರೀರ, ವೇದಾಂತ ಶಾಸ್ತ್ರವೇ ಸೂಕ್ಷ್ಮತನು, ಶಿಕ್ಷಾದೀಕ್ಷಾದಿಗಳೇ ಅಂಗ ರೋಮಂಗಳು,ಧರ್ಮವೇ ಹೃದಯ,ಛಂದಂಗಳೆ ಸ್ತನಂಗಳು, ನ್ಯಾಯಸಾಂಖ್ಯಂಗಳೇ ಕರ್ಣದ್ವಯಂಗಳು, ಅಗ್ನಿಯೇ ಮುಖ, ಜ್ಯೋತಿಷ್ಯಗಳೇ ನಯನಂಗಳು, ವ್ಯಾಕರಣ ಶಿಕ್ಷೆ, ಕಲ್ಪ, ನಿರುಕ್ತ, ಜ್ಯೋತಿಷವೆಂಬೈದು ಶಿರಂಗಳು, ಬ್ರಹ್ಮನೇ ಮೂರ್ಧ್ನಿ, ರುದ್ರನೇ ಶಿಖಿ, ವಿಷ್ಣುವೇ ಆತ್ಮನು, ಈಶ್ವರನೇ ಅಂತರಾತ್ಮನು, ಮೀಮಾಂಸೆಯೇ ಲಕ್ಷಣ, ಅಥರ್ವಣವೇ ಚೇಷ್ಟೆಗಳಾಗುಳ್ಳ, ವೇದಮಾತೆಯಾದ ಗಾಯತ್ರಿಯಾದೊಡೆ ೩೧೧

## ಉದಯಕಾಲ ಗಾಯತ್ರಿ ಧ್ಯಾನ :

ಉದಯಕಾಲದಲ್ಲಿ ನಾಭಿಸ್ಥಾನದ ರಕ್ತಪದ್ಮಾಸನದಲ್ಲಿ ರಕ್ತವರ್ಣ ರಕ್ತವಸ್ತ್ರಾಭರಣ, ಗಂಧಮಾಲ್ಯಾದಿಗಳಿಂದಲಂಕೃತವಾಗಿ,ಚತುರ್ಮುಖ, ದ್ವಾದಶ ಲೋಚನಂಗಳಿಂ ದಂಡಕಮಂಡಲು ಅಕ್ಷಮಾಲೆ ಸುರಭಿವಿಡಿದ ವಾಮ ದಕ್ಷಿಣ ಕರಚತುಷ್ಟಯದಿಂ, ಹಂಸವಾಹನದಿಂ, ಋಗ್ವೇದಮಯವಾಗಿ,ರಜೋಗುಣಾಧಿಕ್ಯದಿಂ ಬ್ರಹ್ಮಾಧಿದೇವತೆಯೆನಿಸಿ, ಗಾಯತ್ರಿ ಬ್ರಾಹ್ಮಿಯೆಂಬ ಪೆಸರ್ವಡೆದು, ಕರ್ಮಜ್ಞಾನಾರ್ಥವಾಗಿ ಧ್ಯಾನಿಸಲು ಯೋಗ್ಯವಾಗಿಹುದೆಂದನುಸಂಧಾನಿಸಿ, ೩೧೨

## ಮಧ್ಯಾಹ್ನ ಗಾಯತ್ರಿ ಧ್ಯಾನ :

ಬಳಿಕ ಮಧ್ಯಾಹ್ನ ಕಾಲದಲ್ಲಿ ಹೃದಯಸ್ಥಾನದಲ್ಲಿ ಶ್ವೇತಪದ್ಮಾಸನದಲ್ಲಿ ಶ್ವೇತ ವರ್ಣ, ಶ್ವೇತವಸ್ತ್ರಾಭರಣ, ಗಂಧಮಾಲ್ಯಾನುಲೇಪನಗಳಿಂದಲಂಕೃತವಾಗಿ, ಏಕ ಮುಖ, ದ್ವಿಲೋಚನಂಗಳಿಂ, ಚಕ್ರ ಅಕ್ಷಮಾಲೆ ಕಮಂಡಲು ಸುರಭಿವಿಡಿದವಾಮ ದಕ್ಷಿಣಕರ ಚತುಷ್ಟಯದಿಂ, ಗರುಡವಾಹನದಿಂ, ಯಜುರ್ವೇದಮಯವಾಗಿ ಸತ್ವ

ಗುಣಾಧಿಕ್ಯದಿಂ ವಿಷ್ಣುವಧಿದೇವತೆಯೆನಿಸಿ, ಸರಸ್ವತಿ ವೈಷ್ಣವಿಯೆಂಬಪೆಸರ್ವಡೆದು, ಕರ್ಮಜ್ಞಾನಾರ್ಥಮಾಗಿ ಧ್ಯಾನಿಸಲು ಯೋಗ್ಯಮಾಗಿಹುದೆಂದು ಚಿಂತನಂಗೆಯ್ದು. ೩೧೩

## ಸಾಯಂಕಾಲ ಗಾಯತ್ರಿ ಧ್ಯಾನ :

ಬಳಿಕ ಸಾಯಂಕಾಲದಲ್ಲಿ ಭ್ರೂಮಧ್ಯದ ಕೃಷ್ಣಪದ್ಮಾಸನದಲ್ಲಿ ಕೃಷ್ಣವರ್ಣ ಕೃಷ್ಣವಸ್ತ್ರಾಭರಣ, ಗಂಧಮಾಲ್ಯಾದಿಗಳಿಂದಲಂಕೃತವಾಗಿ, ಏಕಮುಖ ತ್ರಿಲೋಚನಗಳಿಂ, ಶೂಲ, ಅಕ್ಷಮಾಲೆ, ಕಮಂಡಲು, ಸುರಭಿವಿಡಿದ ವಾಮ ದಕ್ಷಿಣಕರ ಚತುಷ್ಟಯದಿಂ,ವೃಷಭವಾಹನದಿಂ,ಸಾಮವೇದಮಯವಾಗಿ ತಮೋಗುಣಾಧಿಕ್ಯದಿಂ ರುದ್ರಾಧಿದೇವತೆಯೆನಿಸಿ, ಸಾವಿತ್ರಿ ಮಾಹೇಶ್ವರಿಯೆಂಬ ಪೆಸರ್ವಡೆದು ಕರ್ಮಜ್ಞಾನಾರ್ಥಮಾಗಿ ಧ್ಯಾನಿಸಿಕೊಳಲು ಯೋಗ್ಯಮಾಗಿಹುದೆಂದು ಮನನಂಗೆಯ್ದಿಂತು ಗಾಯತ್ರಿಮಂತ್ರಮಂ ವಿಧ್ಯುಕ್ತಮಾಗಿ ಜಪಂಗೆಯ್ದು ಬಳಿಕ ಶಿವಲಿಂಗ ಪೂಜೆಯಂ ಶುದ್ಧಶೈವೋಕ್ತಕ್ರಮದಿಂ ವಿಸ್ತರಿಸಿ.

೩೧೪

## ಯಜ್ಞ ಪ್ರಕ್ರಿಯಾ :

ಬಳಿಕ ಜ್ಯೋತಿಷ್ಟೋಮ ರಾಜಸೂಯ ಪುತ್ರಕಾಮೇಷ್ಟಿಕಾದಿಯಾಗ, ಅಗ್ನಿಹೋತ್ರಾದಿ ಯಜ್ಞಭೇದಂಗಳಂ ವಿವೇಕಿಸಿ; ಬಳಿಕ ಅಗ್ನಿ ಇಂದ್ರ ಅಧ್ವರ್ಯು ಉದ್ಗಾತೃ ಹೋತೃ ಮೈತ್ರಾವರುಣ ಪ್ರತಿಷ್ಠಾತೃ ಪೋತೃ ನೇಷ್ಟರೆಂಬಿವರ್ಮೊದಲಾದ ಹದಿನೈದು ಋತ್ವಿಕ್ಕುಗಳೊಡಗೂಡಿ, ಮೇಲೆ ಕುಶ ತುರಗವಾಲ ವಿಶ್ವಾಮಿತ್ರ ತೃಣ ದೂರ್ವೆಯೆಂಬ ನಾಲ್ಕು ದರ್ಭೆಗಳಂ, ಗಂಧ ಪುಷ್ಪಾಜ್ಯ ಪಾತ್ರಾದಿ ಯಜ್ಞ ಸಾಧನಂಗಳಂ ಸಂಗ್ರಹಿಸಿ. ಮರಳಿ ಚತುರಸ್ರ, ಭಗಾಕಾರ ಅರ್ಧಚಂದ್ರಾಕಾರ ತ್ರಿಕೋಣವೃತ್ತ ಷಡಸ್ರಪದ್ಮಾಕಾರ ಅಷ್ಟಕೋಣ ರೂಪಮಾದೆಂಟು ತೆರದಿಂದುತ್ತಮವಾದ ಕುಂಡಸ್ಥಲಮೆಂಬ, ಮಧ್ಯಮವಾದ ಸ್ಥಂಡಿಲವೆಂಬ, ಕನಿಷ್ಠಮಾದ ಶುಭಸ್ಥಲಮೆಂಬ ಸ್ಥಾನತ್ರಯದಲ್ಲಿ;ವೇದಿಕೆ ಯೂಪಸ್ತಂಭಾದಿ ರಚನೆಗಳಂ ಮಾಡುತ್ತಲ್ಲಿ ಯೋಗ್ಯಮಾದ ಆಸನದಲ್ಲಿ ಕುಳ್ಳಿರ್ದು ಪ್ರಾಣಯಾಮಮಂ ಮಾಡಿ ಯಜ್ಞಮಂ ಮಾಡುತ್ತಿದ್ದೇನೆಯೆಂದು ಸಂಕಲ್ಪಿಸಿ. ೩೧೫

## ರುದ್ರಾಗ್ನಿ ಮೂರ್ತಿ :

ಮೇಲೆ ಮಥಿತಾಗ್ನಿಯಾಗಲಿ ಶ್ರೋತ್ರಿಯಾಗಾರಾಗ್ನಿಯಾಗಲಿ ಅದನು ಅಶ್ವತ್ಥಪಾಲಾಶಾದಿ ಯೋಗ್ಯಮಾದ ಕಾಷ್ಠಂಗಳಿಂದಾಯಾ ಮಂತ್ರಪೂರ್ವಕಮಾಗಿ, ದಕ್ಷಿಣಾಗ್ನಿ, ಗಾರ್ಹಪತ್ಯಾಗ್ನಿ, ಆಹವನೀಯಾಗ್ನಿ ಎಂಬ ಅಗ್ನಿತ್ರಯಾತ್ಮಕವಾಗಿ ಸಂಸ್ಕರಿಸಿ, ಬಳಿಕ ಧೂಮ್ರ ಅರ್ಚಿಷ ಊಷ್ಮ ಜ್ವಲಿನಿ ಜ್ವಾಲಿನಿ ವಿಸ್ಫುಲಿಂಗಿನಿ ಸಶ್ರೀ ಸ್ವರೂಪ ಕಪಿಲಾ ಹವ್ಯಕವ್ಯವಹಾಯೆಂಬ ದಶಕಲಾವೃತಮಾದ ಅಗ್ನಿಮಂಡಲ

ಮಧ್ಯದಲ್ಲಿ ಎರಡು ಶಿರಸ್ಸು ಚತುಃಶೃಂಗ ಕಪರ್ದ ಚಂದ್ರಕಲೆ ತ್ರಿನೇತ್ರ ಯಜ್ಞಸೂತ್ರ ತ್ರಿಮೇಖಲೆ ತ್ರಿಪಾದಂಗಳಿಂ,ವಾಮಭಾಗಸ್ಥಿತ ಸ್ವಾಹಾ ಶಕ್ತಿಯಿಂ ಶಕ್ತಿ ಅಗ್ನಿ ಸೃಕ್ಸ್ರು ಸೃವೆಗಳುಳ್ಳ ದಕ್ಷಿಣಕರ ಚತುಷ್ಟಯದಿಂ,ತೋಮರ ತಾಲವೃಂತ ಘೃತಪಾತ್ರೆಗಳನುಳ್ಳ ವಾಮಹಸ್ತತ್ರಯದಿಂ, ರಕ್ತವರ್ಣ ರಕ್ತಾಂಬರ ರಕ್ತಗಂಧಾದಿಗಳಿಂದಲಂಕೃತ ಮಾಗಿ ಮೆರೆವ ಶಿವಾಗ್ನಿಮೂರ್ತಿಯಂ ಸ್ಮರಿಸಿ, ಬಳಿಕ ಆ ಅಗ್ನಿಯ ಹರಿಣವರ್ಣ ಗಗನವರ್ಣ ರಕ್ತವರ್ಣ ಕೃಷ್ಣವರ್ಣ ಸುಪ್ರಭಾವರ್ಣ ಬಹುವರ್ಣ ಅತಿರಕ್ತವರ್ಣ ಮಾದೇಳು ಜಿಹ್ವೆಗಳಿಗೆ ಕ್ರಮದಿಂ ಸಮಿತ್ತು ಸಾಸವೆ, ಅರಳು,ತುಪ್ಪ, ಹಾಲು, ಅನ್ನ ಎಳ್ಳುಗಳೆಂಬ ಸಪ್ತಾಹುತಿಗಳಂ ಪ್ರಮಾಣಿಸಿ, ಯಜ್ಞಪೂಜಾಯೋಗ್ಯಮಾದ ದೇವತೆಗಳಂ ವಿಷಯೀಕರಿಸಿ ಹವ್ಯಕವ್ಯಾದಿ ಭೇದವರಿದು ಆಯಾಯ ಮಂತ್ರ ಪೂರ್ವಕಮಾಗಿ ಕೊಟ್ಟು ವಿಧ್ಯುಕ್ತವಾಗಿ ಯಜ್ಞವನು ಇಂತು ವಿಸ್ತರಿಸಿ. ೩೧೬

## ಗೃಹೀಧರ್ಮಾನುಶಾಸನ :

ಬಳಿಕ ವೇದಾಧ್ಯಯನರೂಪ ಬ್ರಹ್ಮಯಜ್ಞ, ಅಗ್ನಿಹೋತ್ರರೂಪ ದೇವಯಜ್ಞ ಅತಿಥಿಪೂಜಾರೂಪ ಮನುಷ್ಯಯಜ್ಞ, ಪಿತೃತರ್ಪಣರೂಪ ಪಿತೃಯಜ್ಞ, ಭೂತಬಲಿರೂಪ ಭೂತಯಜ್ಞವೆಂಬೀ ಪಂಚಯಜ್ಞಂಗಳಂ ನಡೆಸುತ್ತೆ, ಋತು ಕಾಲಮಂ ಮೀರದೆ ಸಂತಾನಾರ್ಥಮಾಗಿ ವೇದಮಂತ್ರ ಸ್ಮರಣದಿಂ ಸ್ವಸ್ತ್ರೀ ಸಂಭೋಗ ಸುಖಿಯಾಗಿ,ಗುರುಯಾತ್ರೆ ದೇವಯಾತ್ರೆ ತೀರ್ಥಯಾತ್ರೆ ಯಜ್ಞಧರ್ಮಂ ಗಳೆಂಬಿವಕ್ಕಾಗಿಯೇ ದ್ರವ್ಯಾರ್ಜನೆಯಂ ಮಾಡುತ್ತೆ, ಆತ್ಮಾರ್ಥವೆನ್ನದೆ ದೇವತಾರ್ಥ ಯಜ್ಞಾರ್ಥ ಭಿಕ್ಷಾರ್ಥಮಾಗಿಯೆ ಪಾಕಪ್ರಯತ್ನಂಗೆಯ್ದು, ತಾನೊಂದು ವೇಳೆ ಯಾದರೂ ಮೇಣೆರಡು ವೇಳೆಯಾದರೂ ಮುಷ್ಟಿಮಾತ್ರದ ಮೂವತ್ತೆರಡು ತುತ್ತು ಗಳಿಂ ಭೋಜನಂಗೆಯುತ್ತೆ, ಬಳಿಕ ಸರ್ವಭೂತದಯೆ ಸತ್ಯವಚನ, ಪರೋಪಕಾರ ಪುಣ್ಯಕರ್ಮಾನುಷ್ಠಾನಾದಿ ಸದ್ಗುಣಸಹಿತನಾಗಿ ವಾರ್ತಾವೃತ್ತಿ, ಸ್ವಾಧೀನವೃತ್ತಿ, ಋಯಾರವೃತ್ತಿ, ಮೌನಸನ್ಯಾಸಿಯೆಂದು ನಾಲ್ಕುತೆರನಾಗಿರ್ಪಾತನೇ ಗೃಹಸ್ಥಾಶ್ರಮಿ ಯಪ್ಪಂ ೩೧೭

## ಪಂಚ ಕರ್ಮವಿಭಾಗ:

ಮತ್ತಮಾ ಗೃಹಸ್ಥನಿಂದನುಷ್ಠಿಸಲ್ತಕ್ಕ ಕರ್ಮವಾದೊಡೆ: ನಿತ್ಯ, ನೈಮಿತ್ತಿಕ, ಪ್ರಾಯಶ್ಚಿತ್ತ, ಕಾಮ್ಯ, ನಿರ್ಮಲವೆಂದು ಪಂಚವಿಧವಾಗಿಹುದದರಲ್ಲಿ: ಸಂಧ್ಯಾ ವಂದನಾದಿಕವೆ ನಿತ್ಯಕರ್ಮವೆನಿಸೂದು. ಶುಭಕಾಲದೇಶಾದಿಗಳಲ್ಲಿ ಮಾಳ್ಪ ವಿಧಿ ವಿಶೇಷವೆ ನೈಮಿತ್ತಿಕ ಕರ್ಮವೆನಿಸೂದು. ಬ್ರಹ್ಮಹತ್ಯಾದಿ ದೋಷಪರಿಹಾರ ಕ್ರಿಯೆಯೇ ಪ್ರಾಯಶ್ಚಿತ್ತಕರ್ಮವೆನಿಸೂದು. ಜ್ಯೋತಿಷ್ಟೋಮ ಯಾಗಾದಿಕವೇ ಕಾಮ್ಯಕರ್ಮವೆನಿಸೂದು [illegible]

## ನಿರ್ಮಲ ಕರ್ಮವಿವೇಕ:

ಮತ್ತಮಾ ನಿರ್ಮಲಕರ್ಮವೆಂಬುದೊಂದೇ ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನವೆಂದೈದುತೆರನಾಗಿರ್ಪುದವರಲ್ಲಿ: ದೋಷಪರಿಹಾರಾರ್ಥಮಾಗಿ ಶರೀರ ಬಾಧಾತ್ಮಕತ್ವದಿಂ ಮಹಾಕಷ್ಟಂಗಳಾದ ತಪ್ತಕೃಚ್ಛ್ರ ಮಹಾತಪ್ತಕೃಚ್ಛ್ರ ಶೀತಕೃಚ್ಛ್ರ ಪಾವಕೃಚ್ಛ್ರ ಪ್ರಜಾಸತ್ಯಕೃಚ್ಛ್ರ ಪರಾಕಕೃಚ್ಛ್ರ ದೇವಕೃಚ್ಛ್ರ ಯಾವಕಕೃಚ್ಛ್ರಾದಿ ಅಷ್ಟಕೃಚ್ಛ್ರಗಳಿಂ ಪಕ್ಷ ಮಾಸಾದಿಗಳಲ್ಲಿ ಅನ್ನಮಂ ಪೆಚ್ಚಿಸಿ ತಗ್ಗಿಸಿಕೊಂಬುದು ಮೊದಲಾದುದೇ ಲಕ್ಷಣಮಾದಚಾಂದ್ರಾಯಣ, ಯವಚಾಂದ್ರಾಯಣ ಪಿಪೀಲಿಕಾ ಚಾಂದ್ರಾಯಣ, ಋಷಿಚಾಂದ್ರಾಯಣ, ಶಿಶುಚಾಂದ್ರಾಯಣ, ಯತಿಚಾಂದ್ರಾಯಣಾದಿ ಚಾಂದ್ರಾಯಣಂಗಳಿಂ ; ಪ್ರಜಾಪತ್ಯಾದಿವ್ರತಂಗಳಿಂ; ಧರ್ಮಾರ್ಥಕಾಮ್ಯಮಾಗಿ ಶರೀರ ಶೋಷಣಂಗೆಯ್ವುದೇ ತಪವೆನಿಸೂದು. ಬಾಹ್ಯಾಭ್ಯಂತರ ಸಾಧನಂಗಳಿಂ ಸಗುಣನಿರ್ಗುಣನಾದೀಶ್ವರಾರ್ಚನೆಯೇ ಕರ್ಮವೆನಿಸೂದು. ಪ್ರಣವಾದಿ ಮಂತ್ರಂಗಳಂ ಸಾಂಗಿಕಮಾಗುಚ್ಚರಿಪುದೇ ಜಪವೆನಿಸೂದು. ಹೃತ್ಕಮಲ ಕರ್ಣಿಕಾ ಮಧ್ಯದೊಳೀಶ್ವರ ಚಿಂತನಂಗೈಯ್ವುದೇ ಧ್ಯಾನವೆನಿಸೂದು. ಪ್ರತ್ಯಗಾತ್ಮರೈಕ್ಯ ವಿಚಾರವೇ ಜ್ಞಾನವೆನಿಸೂದು. ಇಂತಿವೆಲ್ಲಂ ಗೃಹಸ್ಥಂಗೆ ಕರ್ತವ್ಯಮಕ್ಕುಂ. ೩೧೯

## ನೀತಿ ಸಂಗ್ರಹ:

ಮತ್ತಮಾ ಗೃಹಸ್ಥನು ತನ್ನ ಕುಲಗುರು ದೇವತಾರಾಧನೆಯಂ ಬಿಡದೆ ಮಾಡಬೇಕು. ಮಾತಾಪಿತೃಗಳ ಮಾತಂ ಮೀರದಿರಬೇಕು. ಸ್ತ್ರೀ ಪುತ್ರ ಬಂಧು ಬಾಂಧವಾದಿಗಳಲ್ಲಿ ವಿನಯೋಪಚಾರವಂತನಾಗಿರಬೇಕು. ಪತಿಸುತರನತಿಕ್ರಮಿಸಲೀಯದೇ ಆಜ್ಞೆಯಿಂದಾಳಬೇಕು. ತಪೋವಿದ್ಯಾಸಂಪನ್ನನಾದ ಸತ್ಪಾತ್ರಂ ಬರಲಾವುದನಾದರೂ ಇಲ್ಲೆನ್ನದೀಯಬೇಕು. ಅರಿಯಲ್ಪಡದ ಕುಲನಾಮಂಗಳನುಳ್ಳ ಪಥಶ್ರಾಂತನಾದ ಅನ್ನಕಾಮನಪ್ಪತಿಥಿ ಬರಲಾತನಂ ಸರ್ವಥಾ ಸತ್ಕರಿಸಬೇಕು. ವಿದ್ಯಾವ್ಯಸನಿಯಾಗಬೇಕು. ಬುದ್ಧಿವಂತನಾದ ಬಾಲಕನಾದರೂ ಬೆಸಗೊಳ್ಳಬೇಕು. ಆವಕಾರ್ಯವನಾದರೂ ತರಹರದಿಂ ವಿಚಾರಿಸಿ ಮಾಡಬೇಕು. ಸಂಪತ್ತುಬಂದಲ್ಲಿ ಕುಸುಮದಂತೆ ಮೃದುಹೃದಯನಾಗಿರಬೇಕು. ವಿಪತ್ತಡಸಿದಲ್ಲಿ ಶಿಲೆಯಂತೆ ಕಠಿಣಚಿತ್ತನಾಗಿರಬೇಕು. ವೃಕ್ಷಾದಿಕದಂತೆ ಸ್ವಕಾರ್ಯವನುಳಿದಾದರೂ ಪರೋಪಕಾರಮಂ ಮಾಡಬೇಕು. ಸರ್ವವೂ ದೈವಾಧೀನವೆಂದಲಸಭಾವದಿಂದಿರದೆ ಪುರುಷಪ್ರಯತ್ನದಿಂದುದ್ಯೋಗಂ ಗೈಯ್ಯಬೇಕು. ಪರಗುಣಪರಮಾಣುವನಾದರೂ ಪರ್ವತೋಪಸಮಾನವಾಗಿ ನುತಿಸಬೇಕು. ನಿಜಗುಣಾತಿಶಯಮಂ ಮರಸಬೇಕು. ದೂರವಾದರೂ ತಾನು ಸುಖಮಿರ್ಪೆಡೆಗೆಯ್ದಬೇಕು. ತನಗೆ ಬಾಧೆಯಾದೇನನಾದರೂ ಬಿಡಬೇಕು. ವ್ಯವಹಾರಾದಿಕದಲ್ಲಿ ಸತ್ಯವಂತನಾಗಬೇಕು. ೩೨೦

ಬಳಿಕ ಪಗಲುತ್ತರಮುಖನಾಗಿ, ರಾತ್ರಿ ದಕ್ಷಿಣಮುಖನಾಗಿ, ಮಲಮಂ ತ್ಯಜಿಸೂದಲ್ಲಿ, ಶೌಚಂಗೆಯ್ವನ್ನೆಗಂ ನುಡಿಯಲಾಗದು. ವಪನ ತೈಲಾಭ್ಯಂಗನ ಸ್ನಾನಂಗಳನಾದಿತ್ಯ ಮಂಗಳ ಬೃಹಸ್ಪತಿ ಶುಕ್ರವಾರ ಜನ್ಮವಾರಂಗಳಲ್ಲಿ ಬಿಟ್ಟು ಮಿಕ್ಕದಿನಂಗಳೊಳ್ಪೂರ್ವೋತ್ತರ ದಿಙ್ಮುಖನಾಗಿ ಕುಳ್ಳಿರ್ದನುಗ್ಗೆಯ್ವುದಲ್ಲದೆ ಉಳಿದ ದಿಙ್ಮುಖನಾಗಿ ಕುಳ್ಳಿರಲಾಗದು. ಬುಧ, ಬೃಹಸ್ಪತಿ, ಶನಿವಾರಂಗಳಲ್ಲಿ ನೂತನ ವಸ್ತ್ರಮಂ ಚಂದ್ರಸ್ವರದಿಂದುಟ್ಟು ಪೊದೆವುದಲ್ಲದೆ ಮಿಕ್ಕವಾರಂಗಳಲ್ಲಿ ಸೂರ್ಯಸ್ವರದಿಂ ಪೋದೆದುಡಲಾಗದು. ಪೂರ್ವ ದಕ್ಷಿಣ ಪಶ್ಚಿಮ ಮುಖನಾಗಿಯೇ ಸೂರ್ಯಸ್ವರದಿಂ ಭೋಜನಂಗೆಯ್ವುದಲ್ಲದೆ, ಉತ್ತರಾಭಿಮುಖನಾಗಿ ಚಂದ್ರಸ್ವರದಿಂ ಭೋಜನಂಗೆಯ್ಯಲಾಗದು, ೩೨೧

ಅಸಾಕ್ಷಿಕನಾಗುಣಲಾಗದು. ತಾಮ್ರದಲ್ಲಿ ಗೋಕ್ಷೀರಪಾನಂಗೆಯ್ಯಲಾಗದು. ಉಪ್ಪು ವೆರಸಿದ ಪಾಲ್ಗುಡಿಯಲಾಗದು. ಕಂಚಿನಲ್ಲಿ ನಾಳಿಕೇರಾಂಬುಮಂ ಕೊಳಲಾಗದು. ವಾಮಕರದಿಂ ನೀರ್ಗುಡಿಯಲಾಗದು. ತರ್ಜನಿಯಿಂ ದಂತಧಾವನಂಗೈಯಲಾಗದು. ಅಡಕೆಯನೊಡೆಯದೆ ಎಲೆದೊಳೆಯದೆ ಸುಣ್ಣಮಂ ಶೋಧಿಸದೆ ತಾಂಬೂಲಮಂ ಸ್ವೀಕಾರಂ ಮಾಡಲಾಗದು. ವಾಮಹಸ್ತದಿಂದೆಲೆಗಳಿಗೆಯಂ ಕೊಳಲಾಗದು. ಚೂರ್ಣಪರ್ಣಮಂ ಮೆಲಲಾಗದು. ೩೨೨

ಮೂಡಲು ತೆಂಕಲು ಮಂಡೆಯಾಗಿ ಮಲಗೂದಲ್ಲದೆ ಪಡುವಲು ಬಡಗಲು ಮಂಡೆಯಾಗಿ ಮಲಗಲಾಗದು. ದಿವಾಮೈಥುನ ದಿವಾನಿದ್ರೆಗಳಂ ಮಾಡಲಾಗದು, ದಾಸಿ ವೇಶಿಯರೊಡಗೂಡಲಾಗದು. ಮರಣಾವಸ್ಥೆಯಾದರೂ ದೇಹಿಯೆಂದು ಬೇಡಲಾಗದು. ದೇಹಿಯೆಂದವರಿಗೆ ನಾಸ್ತಿಯೆನಲಾಗದು. ಆವುದಾದರೂ ತನಗೆ ಬರಲುಳ್ಳದೇಬಹುದು. ಬಾರದುದೇನ ಮಾಡಿದರೆಯು ಬಾರದಾಗಿ ಸ್ಥಿತಿಗತಿಗೆ ಚಿಂತಿಸಲಾಗದು. ಭಾಗ್ಯಕ್ಷಯಮಾದಲ್ಲದೆ ದ್ರವ್ಯಂ ತೀರದಾಗ ತ್ಯಾಗ ಭೋಗವನುಳಿದಿರಲಾಗದು. ಧನಕ್ಷಯವನು, ದ್ರವ್ಯಾರ್ಜನೆಯನು, ಗೃಹಛಿದ್ರವನು, ತನಗಾದವಮನ್ನಣೆಯನು ಪ್ರಕಟಿಸಲಾಗದು. ಸೂಪಕಾರನನು ಕವಿಯನು ವೈದ್ಯನನು ಮರ್ಮಜ್ಞನನು ಕೋಪಿಸಲಾಗದು, ೩೨೩

ಕರೆಯದಾರಗೃಹಮಂ ಪುಗಲಾಗದು. ಬೆಸಗೊಳದೇನನು ಹೇಳಲಾಗದು. ಆತ್ಮಸ್ತುತಿ ಪರನಿಂದೆಯನಾಡಲಾಗದು. ಶಿವಾರಾಮ ಶಿವಕ್ಷೇತ್ರಂಗಳಲ್ಲಿ ಮಲಮೂತ್ರಾದಿಗಳಂ ಬಿಡಲಾಗದು. ಪಂಚಸೂತಕಮಂ ಪೊರ್ದಲಾಗದು ಲೌಕಿಕಾಚಾರಮಂ ಮೀರಲಾಗದು. ಜಾತಿಸಂಕರಮಂ ಮಾಡಲಾಗದು. ಲೋಕ ವಾರ್ತೆಯನುಪೇಕ್ಷಿಸಲಾಗದು. ದಾಸಿಭೃತ್ಯರನಶನಾಚ್ಛಾದನಾದಿಗಳಿಂ ನೋಯಿಸಲಾಗದು. ತೃಣಾಂಬು ಶಯನ ಸ್ಥಲಾದಿಗಳಿಂ ಗೋರಕ್ಷಣೆಗಲಸಲಾಗದು. ದೀರ್ಘದ್ವೇಷಗಳಂ ಮಾಡಲಾಗದು. ಪೊರನಗಾಳಿಕಸಿಕಿಲುಗಳಂ ಸೂಂಕಲಾಗದು. ದುರ್ಜನರೊಡನಾಡಲಾಗದು.

ಪಾಪಕೃತ್ಯಮಂ ಮಾಡಲಾಗದು. ತನು ಧನ ವನಿತಾದಿಗಳನಿತ್ಯವಪ್ಪುದರಿಂ ವೃಥಾನುರಾಗಂ ಮಾಡಲಾಗದು. ಖ್ಯಾತಿಲಾಭಾರ್ಥಮಾಗಿ ಪೂಜಾದಿಕಮಂ ಮಾಡಲಾಗದು ಎಂಬಿವು ಮೊದಲಾದವೆಲ್ಲಂ ಗೃಹಸ್ಥಂಗೆ ವಿಹಿತಾಚಾರಮಕ್ಕುಂ. ೩.೨೪

ವಾನಪ್ರಸ್ಥಾಶ್ರಮ :

ಮತ್ತಮಾ ಗೃಹಸ್ಥಂಗೆ ವಿರಕ್ತಿ ಪುಟ್ಟಿ ವಾನಪ್ರಸ್ಥಾಶ್ರಮವನಾದರು, ಯತ್ಯಾಶ್ರಮವನಾದರು ಸ್ವೀಕರಿಸೂದು. ಅಲ್ಲಿ ಸತಿಸಮೇತನಾಗಾದರೂ, ಅಲ್ಲಮತ್ತೆ ವನಿತಾದಿ ಗೃಹಭಾರವಂ ಪುತ್ರಂಗೆ ವಹಿಸಿ ಮೇಲೆ ಸರ್ವಸಂಗ ಪರಿತ್ಯಾಗವಂ ಮಾಡಿ ಹೋಗುವ ಸಮಯದಲ್ಲಿ ತಪಃಕಾರ್ಯ ಸಿದ್ಧ್ಯರ್ಥಮಾಗಿ ಉತ್ತರಾಯನ ಶುಕ್ಲಪಕ್ಷ ಶುಭತಿಥಿ ಶುಭವಾರ ಶುಭಲಗ್ನ ಶುಭನಕ್ಷತ್ರ ಶುಭಮುಹೂರ್ತಂಗಳಂ ವಿಚಾರಿಸಿ. ೩.೨೫

ಪ್ರಯಾಣ ವಾರ ಶೂಲೆಗಳು :

ಬಳಿಕ ಶನಿವಾರ ಸೋಮವಾರಂಗಳ ಮೂಡಲೆಯ್ದ ಬಾರದು. ಆದಿತ್ಯವಾರ ಶುಕ್ರವಾರಂಗಳ ಪಡುವಲೆಯ್ದ ಬಾರದು. ಬುಧವಾರ ಮಂಗಳವಾರಂಗಳ ಬಡಗಲೆಯ್ದ ಬಾರದು. ಬೃಹಸ್ಪತಿವಾರವೆ ತೆಂಕಲೆಯ್ದ ಬಾರದೆಂದು ವಾರಶೂಲವನರಿದು. ೩.೨೬

ಶುಭ ಶಕುನಗಳು :

ಮೇಲೆ ಹರಡೆ ಗಾರ್ದಭ ಗೌಳಿಗಳು ವಾಮದಲ್ಲುಲಿಯೆ, ಹಸುಬನೆ ಬಲದಲ್ಲಿ ನುಡಿಯೆ, ಹರಿಣ ಭಾರದ್ವಾಜ ಹಂಗಂಗಳು ತಡೆಯೆ, ನರಿ ನವಿಲು ನಕುಲ ವಾಯಸಂಗಳು ತಿರ್ದೆ ಶುಭಶಕುನಂಗಳೆಂದಾರೈದು. ೩.೨೭

ದುರ್ದರ್ಶನಂಗಳು :

ಮರಳಿ ತಕ್ರ ತೈಲಾಭ್ಯಂಗನ ಸರ್ಪ ಧೂಮವೆರಸಿದಗ್ನಿ ಏಕವಿಪ್ರನು ಛಿನ್ನನಾಸಿಕನು ಆರ್ದ್ರವಸ್ತ್ರ ಕಾರ್ಪಾಸ ಕಾಷ್ಠಭಾರಿ ಸೂತಕಿಯಾದವಿಧವೆ ಶೂನ್ಯಘಟಾದಿಗಳೆಂಬ ದುರ್ದರ್ಶನಂಗಳಿಲ್ಲದೆ. ೩.೨೮

ಶುಭದರ್ಶನ :

ಬಳಿಕ ಕನ್ನಿಕೆ ಗೋವು ಭೇರಿ ಶಂಖ ದಧಿ ಫಲ ಕುಸುಮ ಉರಿವಗ್ನಿ ಅಂದಳ ವಿಪ್ರದ್ವಯ ಹಯ ಗಜ ವೃಷಭ ಸುರಾಭಾಂಡ ಮತ್ಸ್ಯದ್ವಯ ಸಿದ್ಧಮನ್ನ ವೇಶ್ಯಾಸ್ತ್ರೀ ಮಾಂಸ ಶುಭವಾರ್ತೆ ಪೂರ್ಣಕುಂಭಗಳೆಂಬ ಶುಭದರ್ಶನಮಾಗೆ. ೩.೨೯

ಅರಣ್ಯವಾಸ :

ಮೇಣು ದೂರದ ಪಯಣಕ್ಕೆ ಚಂದ್ರಸ್ವರ, ಸಮೀಪದ ಪಯಣಕ್ಕೆ ಸೂರ್ಯಸ್ವರ ವಾಗಬೇಕೆಂಬಿವು ಮೊದಲಾದ ಮಾಂಗಲ್ಯಸೂಚನೆಗಳಿಂ ಗೃಹಮಂಪೊರಮಟ್ಟು ಪುಣ್ಯವನ ಪ್ರವೇಶವಹುದು. ಅಲ್ಲಿ ಪರ್ಣಶಾಲೆಯುಲಾಗಲಿ ವೃಕ್ಷಾಶ್ರಯದೊಳಾದೊಡಂ ನೆಲಸಿ. ೩.೩೦

ವಾನಪ್ರಸ್ಥ ದೀಕ್ಷೆ :

ಜಟಾಧಾರಣ ಯಜ್ಞೋಪವೀತ ಕೃಷ್ಣಾಜಿನಗಳಂ ತಳೆದು ನಖರೋಮಂಗಳಂ ತ್ಯಜಿಸದೆ, ಸಕಲನಿಷಿದ್ಧಂಗಳಂ ಬಿಟ್ಟು, ಗ್ರಾಮಾದಿಕದೊಳನ್ನಮಂ ಯಾಚಿಸದೆ, ಶಾಖಾಮೂಲ ಫಲಾದಿಕಮಂ ಷೋಡಶ ಕಬಳದಿಂ ಭೋಜನಂಗೆಯ್ದು ಕಾಮ ಕ್ರೋಧಾದಿಗಳಂ ತೊರೆದು, ದ್ರವ್ಯಪ್ರತಿಗ್ರಹವಿಲ್ಲದೆ, ತ್ರಿಕಾಲಸ್ನಾನಂದಪ್ಪದೆ, ಭಸ್ಮೋದ್ಧೂಳನ ಧಾರಣಂಗಳಂ ಕ್ರಮದಿಂ ತ್ರಿಯಂಬಕಮಂತ್ರ ಮೂಲಮಂತ್ರಂಗಳಂ ಮಾಡಿ ಗಾಯತ್ರೀಜಪ ಶಿವಾರ್ಚನೆ ಅಗ್ನಿಹೋತ್ರ ಪಂಚಮಹಾಯಜ್ಞ, ಯಮ ನಿಯಮಾದ್ಯಷ್ಟಾಂಗ ಯೋಗಾದಿಗಳೊಡಗೂಡಿ ಕೃಚ್ಛ್ರಚಾಂದ್ರಾಯಣ ಉಪವಾಸ ಪಯಃಪಾನ ಗೋಮಯಭಕ್ಷಣ ವಾಯುಸೇವನೆ ಪರ್ಣಾಶನ ನಿರಾಹಾರ ಭೂಶಯನ ಶೀತವಾತಾದಿ ದ್ವಂದ್ವ ತಿತಿಕ್ಷೆಗಳನುಳ್ಳಾತನಾಗಿ. ೩೩೧

ಪಂಚಾಗ್ನಿಮಧ್ಯ ತಪಸ್ಸು :

ಬಳಿಕ ದೇಹದೊಳಗೆ ಮೂಲಾಧಾರಾದಿ ಸ್ಥಾನಂಗಳಲ್ಲಿರ್ಪ ಕಾಲಾಗ್ನಿ ವಡಬಾಗ್ನಿ ಪಾಷಾಣಾಗ್ನಿ ವೈದ್ಯುತಾಗ್ನಿ ಸೂರ್ಯಾಗ್ನಿಯೆಂಬ ಸೂಕ್ಷ್ಮ ಬಿಂದುರೂಪ ಪಂಚಾಗ್ನಿ ಧ್ಯಾನಯುಕ್ತನಾಗಿ, ಹೊರಗೆ ನಿದಾಘಕಾಲಾಗ್ನಿ ಸೂರ್ಯತಪಾಗ್ನಿ ರವಿಕಾಂತಾಗ್ನಿ ದಾವಾಗ್ನಿ ಉದರಾಗ್ನಿಯೆಂಬ ಪಂಚಾಗ್ನಿ ಮಧ್ಯದಲ್ಲಿ ಏಕಪಾದಸ್ಥಿತಿ ಮೊದಲಾದವರಿಂದುಗ್ರ ತಪಸ್ಸನಾಚರಿಸುವಾತನಾಗಿ, ಔದುಂಬರ, ವೈಪಾಸಿಕ ಪ್ರಕ್ಷಾಲಿನಿ ಪೌರ್ಣಮನೆಂದು ಚತುರ್ವಿಧನಾಗಿರ್ಪಾತನೇವಾನಪ್ರಸ್ಥನಪ್ಪಂ. ೩೩೨

ಯತ್ಯಾಶ್ರಮ:

ಬಳಿಕ ವಾನಪ್ರಸ್ಥಂಗೆ ವೈರಾಗ್ಯಂ ಜನಿಸೆ ಯತ್ಯಾಶ್ರಮಮಂ ಕೊಂಬುದು. ಆ ಯತಿಯೋ ವೃತ್ತಿಭೇದದಿಂ ಕುಟೀಚಕ, ಬಹೂದಕ, ಹಂಸ, ಪರಮಹಂಸರೆಂದು ನಾಲ್ಕುತೆರನಾಗಿರ್ಪನವರಲ್ಲಿ. ೩೩೩

ಕುಟೀಚಕ ಯತಿ:

ಶಿಖಾ ಯಜ್ಞೋಪವೀತಿಯಾಗಿ, ತ್ರಿದಂಡ ಕಮಂಡಲು ಭಿಕ್ಷಾಪಾತ್ರೆ ಕಾಷಾಯಾಂಬರಗಳನುಳ್ಳಾತನಾಗಿ,ತ್ರಿಸಂಧ್ಯೆಯಲ್ಲಿಯೂ ಭಸ್ಮೋದ್ಧೂಳನ ತ್ರಿಪುಂಡ್ರ ಧಾರಣ ರುದ್ರಾಕ್ಷಾಭರಣ ಶಿವಲಿಂಗಾರ್ಚನೆ ಗಾಯತ್ರಿಜಪಂಗಳಂ ವಿಶ್ವಾಸದಿಂ ಮಾಡುತ್ತೆ, ಸ್ವಜಾತಿಯಾಗಲಿ ತನ್ನ ಪುತ್ರ ಬಂಧುಗಳಲ್ಲಿಯಾಗಲಿ ಭಿಕ್ಷಾನ್ನಮಂ ತಂದು ಭೋಜನಂಗೆಯ್ದು ಸುಖಿಯಾಗಿರ್ಪಾತನೇ ಕುಟೀಚಕನಪ್ಪಂ. ೩೩೪

ಬಹೂದಕ ಯತಿ:

ಮತ್ತಂ ಶಿಖಾ ಯಜ್ಞೋಪವೀತಿಯಾಗಿ,ಗೋವಾಲರಚಿತ ರಜ್ಜು ಸಂಬಂಧವಾದ ತ್ರಿದಂಡಂಗಳಂ ಪಿಡಿದು,ಮೃತ್ಪಾತ್ರೆ ಕಾಂಸ್ಯಪಾತ್ರೆ ದಾರುಪಾತ್ರೆಯೊಳೊಂದಂ ಸ್ವೀಕರಿಸಿ, ಕಂಥೆ ಕೌಪೀನ ಆಚ್ಛಾದನ ಕೃಷ್ಣಾಜಿನ ಕೊಡೆ ಪಾದುಕೆ ಸೂಚಿ ಕರ್ತರಿ ಯೋಗವಟ್ಟಾದಿ ಪರಿಕರಂಗಳನುಳ್ಳಾತನಾಗಿ, ಭಸ್ಮೋದ್ಧೂಳನ ಧಾರಣ ರುದ್ರಾಕ್ಷಾಭರಣ ಶಿವಲಿಂಗಾರ್ಚನ, ಸಾವಿತ್ರಿ ಜಪಂಗಳಂ ತ್ರಿಸಂಧ್ಯೆಯಲ್ಲಿಯೂ ಬಿಡದಾಚರಿಸುತ್ತೆ, ವೇದಾಧ್ಯಯನವನುಳಿದು ಈಶ್ವರಧ್ಯಾನ ತತ್ಪರನಾಗಿ, ಏಕಾನ್ನವನೊಲ್ಲದೆ, ಬಂಧು ಪುತ್ರಾದಿ ಗೃಹವಂಪುಗದೆ, ಬೇರೆ ಏಳುಮನೆಯಲ್ಲಿಯೆ ಭಿಕ್ಷಾನ್ನವಂ ತಂದು, ಅನುಭವಿಸುತ್ತೆ ಸಹಜಮಯನಾಗಿರ್ಪಾತನೆ ಬಹೂದಕನಪ್ಪಂ. ೩೩೫

ಹಂಸಯತಿ:

ಮತ್ತಂ ಶಿಖಾ ಯಜ್ಞೋಪವೀತಂಗಳಂ ತ್ಯಜಿಸಿ, ವೇಣುದಂಡವೊಂದಂ ಪಿಡಿದು; ಕಮಂಡಲು, ಮೃತ್ಪಾತ್ರೆ, ಪಾಣಿಪಾತ್ರೆ, ಕಂಥೆ ಕೌಪೀನ, ಆಚ್ಛಾದನ, ಧೋತ್ರ, ಬಹಿರ್ವಾಸಂಗಳನುಳ್ಳಾತನಾಗಿ, ಭಸ್ಮೋದ್ಧೂಳನ- ಧಾರಣ ರುದ್ರಾಕ್ಷಾಭರಣ, ಶಿವಾರಾಧನ, ಸಾವಿತ್ರಿಜಪಂಗಳಂ ತ್ರಿಸಂಧ್ಯೆಯಲ್ಲಿಯೂ ಬಿಡದಾಚರಿಸುತ್ತೆ, ಒಂದೇಕಾಲದಲ್ಲಿ ಭಿಕ್ಷಾನ್ನವನೆಂಟುಗ್ರಾಸವನುಂಡು ಅಜಿಹ್ವ, ಷಂಡಕ, ಪಂಗು, ಅಂಧಕ, ಬಧಿರ, ಮುಗ್ಧನೆಂಬ ಷಡ್ಗುಣಯುಕ್ತನಾಗಿ; ವನಿತಾದಿ ವಿಷಯುಮಾಗಿ ಕಾಮಿಸಿನೆನೆವುದು, ಕೊಂಡಾಡುವುದು, ವಿನೋದಿಸುವುದು, ನೋಡುವುದು, ನುಡಿಸುವುದು, ರತಿಗೆಳಸುವುದು, ಒಡಂಬಡುವುದು, ಕೂಡುವುದು ಎಂಬ ಅಷ್ಟವಿಧ ಮೈಥುನಂಗಳಂ ತ್ಯಜಿಸಿ ಆಧ್ಯಾತ್ಮಿಕ ಚಿಂತಕನಾಗಿರ್ಪಾತನೇ ಹಂಸನಪ್ಪಂ. ೩೩೬

ಪರಮ ಹಂಸ ಯತಿ:

ಮತ್ತಂ ಶಿಖಾ ಯಜ್ಞೋಪವೀತ ನಿತ್ಯಕರ್ಮಾದಿಗಳಂ, ತ್ರಿದಂಡ ಕಮಂಡಲು ಮೊದಲಾದ ಪರಿಕರಂಗಳಂ ತ್ಯಜಿಸಿ, ಕಂಥೆ ಕೌಪೀನ ಪಾಣಿಪಾತ್ರಾದಿ ವಸ್ತುಗಳಂ ಶೀತಾದಿಬಾಧ್ಯಾ ಪರಿಹಾರಾರ್ಥಮಾಗಿ ಸ್ವೀಕರಿಸಿ, ಬಳಿಕ ದಿವ್ಯಸ್ನಾನ ವಾರುಣಸ್ನಾನ ವಾಯುವ್ಯಸ್ನಾನ ಮಾನಸಸ್ನಾನ ಆಗ್ನೇಯಸ್ನಾನವೆಂಬ ಪಂಚವಿಧ ಸ್ನಾನಂಗಳೊಳಗೆ, ಆಗ್ನೇಯುಮೆಂಬ ಭಸ್ಮಸ್ನಾನವೇ ಸಕಲ ಸ್ನಾನಂಗಳೊಳಗೆ ಕೋಟಿ ಕೋಟಿಗುಣಾಧಿಕಮಪ್ಪುದರಿಂದವು, ವೇದಸಿದ್ಧಮಪ್ಪುದರಿಂದವೂ, ಆವಾಶ್ರಮಿಗಳಿಂದವೂ ತ್ಯಜಿಸಲು ಯೋಗ್ಯವಲ್ಲಾಗಿ, ಅಗ್ನಿರಿತ್ಯಾದಿ ಮಂತ್ರದಿಂ ಭಸ್ಮೋದ್ಧೂಳನಮಂ ಪ್ರಣವಪೂರ್ವಕಮಾದ ಹಂಸಮಂತ್ರದಿಂ ತ್ರಿಪುಂಡ್ರಧಾರಣಂಗೆಯ್ದು, ರುದ್ರಾಕ್ಷೆಗಳಂಧರಿಸಿ, ಶಿವಲಿಂಗಾರ್ಚನೆಯಂ ಸರ್ವಥಾಬಿಡದಾಚರಿಸುತ್ತೆ; ತ್ರಿಸಂಧ್ಯೆ

ಯಲ್ಲಿಯೂ ಪ್ರಣವಪೂರ್ವಕವಾಗಿ ಷಟ್ಪ್ರಾಣಾಯಾಮದಿಂದಷ್ಟೋತ್ತರ ಶತ ಪ್ರಣವಜಪಂಗೆಯ್ದು; ಏಕಾಂತವಾಸಿಯಾಗಿ ಸ್ವಸ್ಥಮಾದಾಸನದಲ್ಲಿ ಕುಳ್ಳಿರ್ದು ಯಥಾಶಕ್ತಿ ಸಮಾಧಿನಿಷ್ಠನಾಗಿ, ಮಾಧೂಕರ ಅಸಂಕ್ಲ್ರಪ್ತ ಪ್ರಾಕ್ಪ್ರಣೀತ ಅಯಾಚಿತ ತಾತ್ಕಾಲಿಕವೆಂಬ ಪಂಚವಿಧಭಿಕ್ಷಂಗಳನಾದೊಡಂ ಏಕಾನ್ನವನಾದೊಡಂ ಯಥೇಷ್ಟವಮಲ್ಲದೆ ಅಲ್ಪವಮಲ್ಲದೆ ಯೋಗಾನುಗುಣ್ಯಮಾಗಿ ಭೋಜನಂಗೆಯ್ದು, ಗುರೂಪಾಸ್ತಿಯಿಂದಾತ್ಮಜ್ಞಾನಾಭ್ಯಾಸಿಯಾಗಿ, ಸ್ನಾನ ಶೌಚ ಸತ್ಯ ಅನೃತ ಕಾಮ ಕ್ರೋಧ ಲೋಭ ಮೋಹ ಶೋಕ ಹರ್ಷ ದಂಭ ದರ್ಪಾದಿಗಳಂ ಬಿಟ್ಟು ಚಾತುರ್ಮಾಸವನಾಚರಿಸುತ್ತೆ, ತನ್ನಿಂ ಪೂರ್ವಾಶ್ರಮಾಚಾರವನುಳಿದು ತ್ತುರಾಚಾರ ನಿಷ್ಠನಾಗಿರ್ಪಾತನೇ ಪರಮ ಹಂಸನಪ್ಪಂ. ೩೩೭

ಅತ್ಯಾಶ್ರಮಿ:

ಬಳಿಕ ಸೂರ್ಯೋದಯಕ್ಕೆ ಮೊದಲು ಇದು ಖದ್ಯೋತ, ಇದುದೀಪ, ಇದುನಕ್ಷತ್ರ, ಇದು ಚಂದ್ರನೆಂದಿಂತು ಬೇರೆ ಬೇರೆ ಲಕ್ಷಿಸಿಕೊಳುತ್ತಿರ್ದಪ್ರಕಾಶಾಂತರಂಗಳಾ ಸೂರ್ಯೋದಯಮಾಗಲೊಡನೆ, ತಾವಾ ಸೂರ್ಯ ದೀಪ್ತಿಯೊಳಂತರ್ಭಾವಮಪ್ಪಂತೆ, ಜ್ಞಾನೋತ್ಪತ್ತಿಗೆ ಮುನ್ನವೆ ಭಿನ್ನ ಭಿನ್ನಮಾಗಿ ಅಭಿಮಾನಿಸಿಕೊಳಲು ಯೋಗ್ಯಮಾಗಿರ್ದ ಚತುರಾಶ್ರಮಧರ್ಮಂಗಳಿಂದಂತಃಕರಣ ಶುದ್ಧನಾಗಿ, ಮೇಲೆ ಸಾಧನ ಚತುಷ್ಟಯ ಸಂಪನ್ನನಾಗಿ, ಬಳಿಕ ಶ್ರೀಗುರೂಪದೇಶದಿಂ ವೇದೋಕ್ತಮಾದ ಜೀವಪರಮೈಕ್ಯ ವಿಷಯಮಪ್ಪ ಸಮ್ಯಜ್ಞಾನಿಯಾದನಂತರದೊಳಾ ಜ್ಞಾನಕ್ಕೆ ಬೇರೊಂದತಿಶಯಮಿಲ್ಲಾಗಿ, ತನಗೊಂದಾಶ್ರಮಾಭಿಮಾನವಿಲ್ಲದೆ, ವಿಧಿನಿಷೇಧಾತೀತನಾಗಿ ಸರ್ವಾಶ್ರಮಗಳಿಂ ತಾನೆಪೂಜ್ಯನಾಗಿ ಜೀವನ್ಮುಕ್ತನೆಂದು ಅವಧೂತನೆಂದು ಸ್ಥಿತಪ್ರಜ್ಞನೆಂದು ಗುಣಾತೀತನೆಂದು ಭಗವದ್ಭಕ್ತನೆಂದು ಬ್ರಾಹ್ಮಣನೆಂದು ಪೆಸರ್ವಡೆದಿರ್ಪಾತನೇ ಅತ್ಯಾಶ್ರಮಿಯಪ್ಪಂ. ೩೩೮

ಶಿವಯೋಗಾಧಿಕಾರಿಗಳು:

ಬಳಿಕ ಇಂತು ಪೂರ್ವೋಕ್ತ ಸಕಲಶೈವರು, ವರ್ಣಾಶ್ರಮಿಗಳಲ್ಲಿ ಶುದ್ಧವೈದಿಕರೆಂದು, ತಾಂತ್ರಿಕವೈದಿಕರೆಂದು, ಶುದ್ಧತಾಂತ್ರಿಕರೆಂದು, ವೈದಿಕತಾಂತ್ರಿಕರೆಂದು ಜ್ಞಾನಕ್ರಿಯಾಭೇದದಿಂ ನಾಲ್ಕುತೆರದಧಿಕಾರಿಗಳಾಗಿರ್ಪರವರಲ್ಲಿ; ತಂತ್ರವಾಸನೆ ಪುಗದೆ ವೈದಿಕನಿಷ್ಠರೇ ಶುದ್ಧವೈದಿಕರು. ವೇದಸ್ಮೃಗಳೆರಡರಲ್ಲಿಯೂ ಪ್ರೀತಿಯುಕ್ತರೇ ತಾಂತ್ರಿಕವೈದಿಕರು. ವೇದವಾಸನೆ ಪುಗದೆ ತಂತ್ರೈಕನಿಷ್ಠರೇ ಶುದ್ಧ ತಾಂತ್ರಿಕರುಗಳು. ತಂತ್ರವೇದೋಭಯ ಪ್ರೀತರೇ ವೈದಿಕತಾಂತ್ರಿಕರಕ್ಕುಂ. ೩೩೯

### ಪ್ರಮಾಣ ಗ್ರಂಥ ವಿಭಾಗ:

ಮತ್ತಮಾ ಅಧಿಕಾರಿಗಳ್ಗೆ ಮಾರ್ಗಸಂಕರಮಾಗದಂತೆ ಬೇರೆಬೇರೆ ವಿಧಿ ಪ್ರತಿಪಾದಂಕಂಗಳಾವಾವೆಂತೆಂದೊಡೆ: ಸೂತಸಂಹಿತೆ, ಪಾರಾಶರ ಪುರಾಣಾದಿಗಳೇ ಶುದ್ಧವೈದಿಕ ಪ್ರತಿಪಾದಕಂಗಳು. ಶಿವರಾಘವಸಂವಾದ ವಾಯುವೀಯ ಸಂಹಿತಾದಿಗಳೇ ತಾಂತ್ರಿಕವೈದಿಕ ಪ್ರತಿಪಾದಕಂಗಳು. ಶೈವ ಪಾಶುಪತ ಸೋಮ ಲಾಕುಳವೆಂಬ ಶಾಸ್ತ್ರಾಂತರಂಗಳೇ ಶುದ್ಧತಾಂತ್ರಿಕ ಪ್ರತಿಪಾದಕಂಗಳು. ಭಾಗವತ ಶಿವಸಿದ್ಧಾಂತಾದಿಗಳೇ ವೈದಿಕತಾಂತ್ರಿಕ ಪ್ರತಿಪಾದಕಂಗಳೆಂದು ಪೇಳ್ವುದೇ ಚರ್ಯಾಪಾದಮಕ್ಕುಂ. ೩೪೦

## -ಯೋಗಪಾದ-

### ಯೋಗಾಚಾರ್ಯ ಲಕ್ಷಣ:

ಮತ್ತಮಾ ಯೋಗಪಾದದಲ್ಲಿ ಶ್ರೀಕಂಠೇಶ್ವರನಿಂದುಪದೇಶಂ ಪಡೆದ ಶ್ವೇತ ಸದಾವ ದಮನ ಸಹೋತ್ರ ಕಂಕ ಲೋಕಾಕ್ಷ ಜನಿಷತ್ಯ ದಧಿವಾಹ ವೃಷಭ ಉಗ್ರ ಅತ್ರಿ ಸುಬಾಲಕ ಗೌತಮ ವೇದಶಿರ ಗೋಕರ್ಣ ಗುಹಾವಾಸಿ ಶಿಖಂಡಿ ಜಟಾಮಾಲಿ ಅಟ್ಟಹಾಸ ದಾರುಕ ಲಾಂಗುಲಿ ಮಹಾಕಾಯ ಶೂಲಿ ಡಿಂಡಿ ಮುಂಡಿ ಸಹಿಷ್ಣು ಸೋಮಶರ್ಮ ಲಕುಲೀಶರೆಂಬ ಅಷ್ಟವಿಂಶತಿಯೋಗಾಚಾರ್ಯರಾದ ಮುನೀಶ್ವರರಾದೊಡೆ, ಒಬ್ಬೊಬ್ಬರಿಗೆ ನಾಲ್ವರು ನಾಲ್ವರು ಶಿಷ್ಯರುಗಳಾಗಿ ಶ್ವೇತ ಶಿಖಾದಿ ಗರ್ಗ ಮಿಶ್ರಕಶಿಷ್ಯನೆಂಬಾತಂ ಕಡೆಯಾದ ನೂರಹನ್ನೆರಡು ಶಿಷ್ಯರೊಡಗೂಡಿ, ಭಸಿತಾಕ್ಷ ಯೋಗದಂಡ ಯೋಗಪಟ್ಟಾದಿಗಳಿಂದಲಂಕೃತರಾಗಿ ಏಕಶಿಖಿ ಬಹುಶಿಖಿ ಪಂಚಶಿಖಿ ಕೇಶಪಾಶ ಮುಂಡನಂಗಳುಳ್ಳವರಾಗಿ ಶಾಂತ ತೇಜೋಮಯರಾಗಿರ್ಪರೆಂದು ಯೋಗಾಚಾರ್ಯ ಲಕ್ಷಣಂಗಳು. ೩೪೧

### ಯೋಗಾಧಿಕಾರಿಗಳು ಮತ್ತು ಯೋಗಭೇದಗಳು:

ಬಳಿಕೀಶ್ವರನಲ್ಲಿ ಚಿತ್ತದೇಕತ್ವವೇ ಲಕ್ಷಣವಾದ ಯೋಗದ ಮಂತ್ರ ಲಯ ಹಠ ರಾಜವೆಂಬ ನಾಲ್ಕು ಯೋಗಭೇದಂಗಳು. ಮೃದುವೆಂದು ಮಧ್ಯವೆಂದು ಅತಿಮಾತ್ರವೆಂದು ಅತಿಮಾತ್ರತರವೆಂದು ಚತುರ್ವಿಧಕ್ರಮದಿಂದಾ ಮಂತ್ರಾದಿ ಯೋಗಾಧಿಕಾರಿಗಳು. ಬಳಿಕ ನಾಲ್ಕುಯೋಗಾನುಕ್ರಮದಿಂದವೆ ಪ್ರಣವ, ಹಂಸಾದಿ ವಿಧಿಗಳುಂ, ದಶನಾದ, ದಶಬಿಂದು ಲಕ್ಷಣಂಗಳುಂ; ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬೀ ಸಗುಣ ನಿರ್ಗುಣ ರೂಪಮಾದಷ್ಟಾಂಗ ಯೋಗವಿಧಿಗಳುಂ; ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಕ್ಷಮೆ, ಧೃತಿ, ದಯೆ, ಆರ್ಜವ, ಮಿತಾಹಾರ,

ಶೌಚವೆಂಬ ಯಮದದಶಭೇದಂಗಳುಂ; ತಪಸ್ಸು, ಸಂತೋಷ, ಆಸ್ತಿಕ್ಯ, ದಾನ, ಈಶ್ವರಪೂಜೆ, ಸಿದ್ಧಾಂತಶ್ರವಣ, ಲಜ್ಜೆ, ಮತಿ, ಜಪ, ವ್ರತವೆಂಬ ನಿಯಮ ದಶಭೇದಂಗಳುಂ; ಬಳಿಕ ಯಮಾದಿ ಭೇದಂಗಳ ಲಕ್ಷಣವೆಂತೆನೆ: ಯಜ್ಞಾರ್ಥ ಮಾದ ಪಶುಹಿಂಸೆಯೊಂದು ಹೊರತಾಗಿ, ಮತ್ತೆಲ್ಲಾ ಕಡೆಯಲ್ಲಿಯೂ ಸಕಲ ಪ್ರಾಣಿಗಳ್ಗೆ ಕ್ಲೇಶವಂ ಪುಟ್ಟಿಸದಿರ್ಪುದೇ ಅಹಿಂಸೆಯೆನಿಸೂದು. ಗುರುದೇವತಾ ಪ್ರಯೋಜನಮಾದೊಂದೆಡೆಯಲ್ಲದೆ ತನಗೆ ಬಂದಾಪತ್ತು ಭೀತಿಗಳಲ್ಲಿಯೂ ಪುಸಿಯದಿರ್ಪುದೇ ಸತ್ಯವೆನಿಸೂದು. ಚೌರ್ಯದಿಂದಾದರೂ ಬಲಾತ್ಕಾರದಿಂ ದಾದರೂ ಪರದ್ರವ್ಯವನಪಹರಿಸದಿರ್ಪುದೇ ಅಸ್ತೇಯವೆನಿಸೂದು. ವನಿತಾದಿ ವಿಲಾಸವಂ ಕಂಡು ಕೇಳ್ದು ಅಲ್ಲಿ ಮನೋವಾಕ್ಕಾಯಂಗಳಿಂ ಮಾತ್ಸರ್ಯವೆಂದು ಬಗೆವುದೇ ಬ್ರಹ್ಮಚರ್ಯವೆನಿಸೂದು. ಪರರು ಮಾಳ್ಪಪಕಾರವಂ ತಾನು ಸಮರ್ಥನಾಗಿರ್ದು ಸೈರಿಪುದೇ ಕ್ಷಮೆಯೆನಿಸೂದು. ಅರ್ಥ ಬಂಧು ಸುತಾದಿಗಳ ಪ್ರಾಪ್ತ್ಯಪ್ರಾಪ್ತಿಗಳಲ್ಲಿ ಹರ್ಷ ಶೋಕವಿಲ್ಲದೆ ಇರ್ಪುದೇ ಧೃತಿಯೆನಿಸೂದು. ರೋಗಾದಿಗಳಿಂ ಪೀಡಿತರಾದ ಶತ್ರುಮಿತ್ರಾದಿಗಳ ರಕ್ಷಣಾಭಿಮುಖಮಪ್ಪುದೇ ದಯ ವೆನಿಸೂದು ಹರ್ಷ ಶೋಕಂಗಳೆಡೆಯಲ್ಲಿ ಬುದ್ಧಿ ಕದಡದಿರ್ಪುದೇ ಆರ್ಜವ ವೆನಿಸೂದು. ಅಲ್ಪವಲ್ಲದೆ ಯಥೇಷ್ಟವಲ್ಲದೆ ಯೋಗಾನುಗುಣ್ಯಮಾಗಿ ಭೋಜನಂ ಗೆಯ್ವುದೇ ಮಿತಾಹಾರವೆನಿಸೂದು. ಸ್ವದೇಹ ಮಲವಿಮೋಚನಾರ್ಥಮಾಗಿ ಮೃತ್ತಿಕೆ ಜಲಂಗಳಿಂ, ಮನೋಮಲ ಹರಾರ್ಥಮಾಗಿ ಮಂತ್ರಧ್ಯಾನಾದಿಗಳಂ ಮಾಳ್ಪುದೇ ಶೌಚಮೆನಿಸೂದು. ೩೪೩

ಬಳಿಕಾನಾರು, ಎನಗೀ ಸಂಸಾರವೇನು ಕಾರಣ ಬಂದಿತ್ತು, ಇದೆಂತು ಬಿಡುವು ದೆಂದಾಳೋಚಿಸಿ ತಿಳಿವುದೇ ತಪವೆನಿಸೂಕು. ತನಗೆನಿತು ದೊರಕಿದನಿತರಲ್ಲಿಯೇ ಪರಿಣಾಮಿಸಿರ್ಪುದೇ ಸಂತೋಷವೆನಿಸೂದು. ಪುಣ್ಯ ಪಾಪ ಸ್ವರ್ಗಕ್ಕೆ ನರಕಾದಿ ಗಳುಂಟೆಂದು ತಿಳಿವುದೇ ಆಸ್ತಿಕ್ಯವೆನಿಸೂದು ತಾನುಗಳಿಸಿದನ್ನಾದಿ ದ್ರವ್ಯಂಗಳಂ ಧರ್ಮಾರ್ಥಮಾಗಿ ವಿಧಿಪೂರ್ವಕದಿಂ ದೇಶ ಕಾಲ ಪಾತ್ರವರಿದೀವುದೇ ದಾನ ವೆನಿಸೂದು. ಸ್ಮರಣ ಸ್ತುತಿ ಭಜನೆಗಳಿಂ ಮನೋವಾಕ್ಕಾಯಂಗಳಲ್ಲಿ ಶಿವಭಕ್ತಿ ದೃಢಮಾದುದೇ ಈಶ್ವರ ಪೂಜೆಯೆನಿಸೂದು. ವೇದಾರ್ಥವಿಚಾರವಂ ಮಾಳ್ಪುದೇ ಸಿದ್ಧಾಂತ ಶ್ರವಣವೆನಿಸೂದು. ಲೌಕಿಕ ವೈದಿಕ ವಿರೋಧಮಾದ ಮಾರ್ಗದತ್ತ ಚಿತ್ತವನೆರಗಲೀಯದಿರ್ಪುದೇ ಲಜ್ಜೆಯೆನಿಸೂದು .ವಿಹಿತಮಾದ ಸ್ವಧರ್ಮದಲ್ಲಿಯ ವಿಶ್ವಾಸವೇ ಮತಿಯೆನಿಸೂದು. ಪ್ರಣವ ಶತರುದ್ರೀಯಾದಿಗಳ ಸ್ವಾಧ್ಯಾಯವೇ ಜಪವೆನಿಸೂದು. ಧರ್ಮಾರ್ಥಮಾತ್ಮಸಿದ್ಧ್ಯರ್ಥಮಾದುಪಾಯ ಗ್ರಹಣವೇ ವ್ರತವೆನಿಸೂದೆಂದು ಅಹಿಂಸಾದಿಗಳ ಲಕ್ಷಣಂಗಳು. ೩೪೪

## ಶಿವಯೋಗಾಸನಗಳು :

ಬಳಿಕ ಸ್ಥಿರಸುಖದಿಂ ನಿಶ್ಚಲಾತ್ಮಕಮಾದಾಸನದಲ್ಲಿ :
ಸಿದ್ಧಾಸನ ಸಿಂಹಾಸನ ಸ್ವಸ್ತಿಕಾಸನ ಸವ್ಯಾಸನ ಶೂಲಾಸನ ಸುಖಾಸನ ಸರ್ವತೋಭದ್ರಾಸನ ಗೋಮುಖಾಸನ ಗರುಡಾಸನ ಮಯೂರಾಸನ ಮತ್ಸ್ಯೇಂದ್ರಾಸನ ಮುದ್ಗರಾಸನ ಮಂಡೂಕಾಸನ ಮೃಗಾಸನ ನಾಗಾಸನ ಕುಕ್ಕುಟಾಸನ ಕುಂಜರಾಸನ ಕೂರ್ಮಾಸನ ಕ್ರೌಂಚಾಸನ ಕಾಷ್ಠಾಸನ ಖಡ್ಗಾಸನ ಕಾಮದಹನಾಸನ ಯೋನ್ಯಾಸನ ವ್ಯಾಘ್ರಾಸನ ವೈಣಿಕಾಸನ ವಸ್ತ್ರಾಸನ ವಾಸನಾಸನ ವೀರಾಸನ ವರಾಹಾಸನ ಪರ್ಯಂಕಾಸನ ಪದ್ಮಾಸನ ಪಥಾಸನ ಪಕ್ಷಿಮತಾಣಾಸನ ತ್ರಿಸದಾಸನ ಹಸ್ತಿಕರ್ಣಾಸನ ಹೈಮಾಸನ ಅರ್ಧಾಸನಾದಿ ಎಂಭತ್ನಾಲ್ಕಾಸನ ಭೇದಂಗಳುಂ. ೩೪೪

## ಯೋಗಕ್ಕೆ ಘಟಚಕ್ರಾದಿ ವಿವೇಕ :

ಬಳಿಕ ಶರೀರ ಜನಿತ ವಾಯುನಿರೋಧವೆ ಲಕ್ಷ್ಯಮಾದ ಪ್ರಾಣಾಯಾಮ ವಿಧಿಗೆ ಮೊದಲು ಪ್ರಾಕಾರ ವೇದಿಕೆ ಕೂಪ ಅಲ್ಪದ್ವಾರ ಅರಂಧ್ರ ವಿತಾನ ಸಕಲ ಬಾಧಾ ರಹಿತತ್ವಾದಿ ಸಲ್ಲಕ್ಷಣ ಯೋಗಮಂಟಪ ರಚನಾಪ್ರಕಾರಮುಂ,ಕುಶ ಕೃಷ್ಣಾ ಜಿನಾದಿ ಯೋಗ ಗೃಹೋಪಕರಣ ಪ್ರಕಾರಂಗಳುಂ; ತೈಲ ಪಿಣ್ಯಾಕಾದಿ ಯೋಗೀಶ್ವರ ನಿಷೇಧ ದ್ರವ್ಯಂಗಳುಂ ; ಮುದ್ಗ ಪಟೋಲಕ ಗೋಧುಮಾಧಿ ಯೋಗೀಶ್ವರ ಸ್ವೀಕಾರ ವಸ್ತು ನಿಯಮಂಗಳುಂ;ಮೇಲೆ ಪ್ರಾಣಾಯಾಮ ಪ್ರಾರಂಭದಲ್ಲಿ ಶ್ರೀಗುರು ಸರಸ್ವತಿ ವಿಘ್ನೇಶ್ವರ ವಿಶಾಖಾದಿದೇವತಾ ಪೂಜಾ ವಿಧಾನಂಗಳುಂ; ಬಳಿಕ ಸಕಲ ಮನುಷ್ಯರ ಶರೀರವೇ ತಮ್ಮ ತಮ್ಮ ತೊಂಭತ್ತಾರಂಗುಲದುದ್ದವಪುದಲ್ಲಿ, ಗುದ ಸ್ಥಾನದಿಂದೆರಡಂಗುಲದ ಮೇಲೆ ಶಿಶ್ನ , ಶಿಶ್ನದಿಂದೆರಡಂಗುಲದ ಕೆಳಗೆ ಮಧ್ಯ ಒಂದಂಗುಲ ಪ್ರಮಾಣಿನ ಸ್ಥಾನವೇ ದೇಹಮಧ್ಯವೆನಿಸೂದು. ಅದೇ ಮೂಲಾ ಧಾರವೆಂದೂ ಶಿಖಿ ಸ್ಥಾನವೆಂದೂ ಪೆಸರನುಳ್ಳುದಾಗಿ ತ್ರಿಕೋಣಾಕಾರಮಾಗಿ ತಪ್ತ ಸುವರ್ಣಕಾಂತಿಮಯುವಾಗಿಹುದು. ಮತ್ತದರಿಂ ನವಾಂಗುಲದುದ್ದದಲ್ಲಿ ಚತು ರಂಗುಲ ವಿಸ್ತಾರಮಾದ ಕುಕ್ಕುಟಾಂಡಾಕಾರಮಪ್ಪ ನಾಡೀ ಕಂದಮಿಹುದದರ ಮಧ್ಯವೇ ನಾಭಿಯೆನಿಸೂದಾ ನಾಡೀಕಂದದಿಂದೆರಡಂಗುಲದ ಕೆಳಗೆ ಕುಂಡಲಿ ಸ್ಥಾನ ವಿಹುದಲ್ಲಿ ಕುಂಡಲಿಸರ್ಪನು ಅಷ್ಟಪ್ರಕೃತಿರೂಪದಿಂ ಸಪ್ತಕುಟಿಲಾಕೃತಿಯಾಗಿ ನಾಡೀ ಕಂದ ಮಧ್ಯದ ಸುಷುಮ್ನೆಯೆಂಬ ನಾಡೀ ದ್ವಾರಮಂ ತನ್ನಮುಖದಿಂ ಮುಚ್ಚಿ ಮರಸಿ ನಿದ್ರಿತಮಾಗಿಹುದು. ೩೪೫

ಬಳಿಕಾ ನಾಡೀಕಂದದಿಂ ದ್ವಾದಶಾಂಗುಲದುದ್ದಮಾದ ನಾಳದಿಂ ಪತ್ರಾಷ್ಟಕದಿಂ ಚತುರಂಗುಲ ವಿಸ್ತಾರದಿಂ ಕದಳೀಕುಸುಮದಂತಧೋಮುಖಮಾಗಿ, ಪೂರ್ವ

ಹೃದಯ ಕಮಲವಿಹುದಲ್ಲಿ ಜೀವಹಂಸನು ಕರ್ಮಪಾಶಬದ್ಧನಾಗಿ ವಾಲಾಗ್ರ ಶತ ಭಾಗೆಯೊಳೊಂದರನಿತು ಸೂಕ್ಷ್ಮನಾಗಿ ಮನದ ನಡವಳಿಕೆಯಿಂ ಗಮಿಸುತ್ತಿಹನು. ೩೪೬

ಮತ್ತೆ ನಾಡೀಕಂದದಿಂ ಪೊರಮಟ್ಟು ಜಾಲಸೂತ್ರಂಗಳಂತೆ ಮೇಲು ಕೆಳಗೆ ಎಡಬಲಂಗಳಿಗೆಯಿದ್ದು ಮನಃ ಪ್ರಾಣಾದಿ ದಶವಾಯುಗಳ ಸಂಚಾರಮಾರ್ಗಂಗಳೆನಿಸಿ ದೆಪ್ಪತ್ತೆರಡು ಸಾವಿರನಾಡಿಗಳೊಳಗೆ ಮುಖ್ಯವೆನಿಸಿದ ಚತುರ್ದಶನಾಡಿಗಳವರಲ್ಲಿ ಈಶ್ವರನಧಿದೇವತೆಯಾದ ಸುಷುಮ್ನೆಯೀ ಮಸ್ತಕಾಂತಮಾಗಿಹುದು. ವಿಷ್ಣು ದೇವತೆಯಾದ ಈಡೆಯೀ ವಾಮನಾಸಾಪುಟಾಂತಮಾಗಿಹುದು. ಬ್ರಹ್ಮನಧಿದೇವತೆ ಯಾದ ಪಿಂಗಲೆಯೀ ದಕ್ಷಿಣನಾಸಾಪುಟಾಂತಮಾಗಿಹುದು. ಇಂದ್ರನಧಿದೇವತೆಯಾದ ಗಾಂಧಾರಿಯೀ ವಾಮನೇತ್ರಾಂತಮಾಗಿಹುದು. ದಿಕ್ಕಧಿದೇವತೆಯಾದ ಪೂಷೆಯೀ ದಕ್ಷಿಣನೇತ್ರಾಂತಮಾಗಿಹುದು. ಚಂದ್ರನಧಿದೇವತೆಯಾದ ಶಂಖಿನಿಯೆ ವಾಮ ಕರ್ಣಾಂತಮಾಗಿಹುದು. ಪ್ರಜಾಪತಿಯಧಿದೇವತೆಯಾದ ಪಯಸ್ವಿನಿಯೆ ದಕ್ಷಿಣ ಕರ್ಣಾಂತಮಾಗಿಹುದು. ವಿರಾಡಧಿದೇವತೆಯಾದ ಸರಸ್ವತಿಯೆ ಜಿಹ್ವಾಂತಮಾಗಿ ಹುದು. ಪಾವಕನಧಿದೇವತೆಯಾದ ವಿಶ್ವೋದರೆಯೆ ಜಠರಾಂತಮಾಗಿಹುದು. ಭೂಮಿಯಧಿದೇವತೆಯಾದ ಲಕುಹುಯೆಂಬುದೇ ಶಿಶ್ನಾಂತಮಾಗಿಹುದು. ವರುಣ ನಧಿದೇವತೆಯಾದ ಅಲಂಬುಷೆಯೀ ಪಾಯ್ವಾಂತಮಾಗಿಹುದು. ಸೂರ್ಯನಧಿ ದೇವತೆಯಾದ ಯಶಸ್ವಿನಿಯೀ ದಕ್ಷಿಣ ಪಾದಾಂಗುಷ್ಠಾಂತಮಾಗಿಹುದು. ವರುಣ (ಜಲ)ನಧಿದೇವತೆಯಾದ ಹಸ್ತಿಜಿಹ್ವೆಯೀ ವಾಮಪಾದಾಂಗುಷ್ಟಾಂತಮಾಗಿಹುದು. ವಾಯುವಧಿದೇವತೆಯಾದ ವಾರುಣಿಯೀ ಸರ್ವಾಂಗಗಾಮಿನಿಯಾಗಿಹುದೆಂದು ಶರೀರಾಭ್ಯಾಂತರ ನಾಡೀಚಕ್ರವಿಚಾರಂಗಳಿಂ. ೩೪೭

## ಬಳಿಕ ನಾಡೀ ಶೋಧನ ಕ್ರಮಂಗಳು

### ಯೋಗ ತಂತ್ರ ಪರಿಚಯ :

ರೇಚಕ, ಪೂರಕ, ಕುಂಭಕ ವಿಧಿಗಳಿಂ ; ತನ್ನಜಾನುವಂ ದಕ್ಷಿಣ ಹಸ್ತದಿಂ ಪ್ರದಕ್ಷಿಣಂಗೈದು ಒಂದು ಚಿಟುಗನಿಕ್ಕಲದೇ ಮಾತ್ರೆಯಕುದಾಗಿ ಷೋಡಶಾದಿ ಮಾತ್ರಾನಿಯಮಂಗಳಿಂ ; ತನುಲಾಘವ, ದೀಪನ, ಜಠರಾಗ್ನಿ ವರ್ಧನಾದಿ ನಾಡಿ ಶುದ್ಧಿ ಚಿಹ್ನಂಗಳಿಂ ; ಸೂರ್ಯಭೇದನ, ಉಜ್ಜಾಯಿ, ಸೀತ್ಕಾರಿ, ಶೀತಳಿ, ಭಸ್ತ್ರಿಕೆ ಭ್ರಮರಿ, ಮೂರ್ಛೆ, ಕೇವಲವೆಂಭಷ್ಟ ಕುಂಭಕ ಪ್ರಕಾರಂಗಳಿಂ ; ಮೂಲಬಂಧ ಉಡ್ಯಾಣಬಂಧ, ಜಾಲಂಧರಬಂಧವೆಂಬ ಬಂಧತ್ರಯಂಗಳಿಂ ; ಪ್ರಾಕೃತ ವೈಕೃತ ಮಾದ ರೇಚಕ, ಪೂರಕ, ಕುಂಭಕ, ಉತ್ಕರ್ಷ, ಅಪಕರ್ಷ, ಶೂನ್ಯ, ಉತ್ಕ್ರಾಂತಿ

ಯೆಂಬ ಸಪ್ತ ಪ್ರಾಣಾಯಾಮಲಕ್ಷಣಂಗಳುಂ ; ಸ್ವೇದ, ಕಂಪನ, ದೇಹೋತ್ಥಾನವೆಂಬ ಕ್ರಮದಿಂ ಕನಿಷ್ಟ, ಮಧ್ಯಮೋತ್ತಮ ಪ್ರಾಣಾಯಾಮ ಸಿದ್ಧಿ ಸೂಚನೆಗಳುಂ ; ಪಶ್ಚಿಮದ್ವಾರಗಮನ, ಬ್ರಹ್ಮಾದಿಗ್ರಂಥಿಭೇದನ, ಶಿರೋಮಧ್ಯಗತ ಚಂದ್ರಾಮೃತ ಸೇವನಾದಿ ಕ್ರಮಂಗಳುಂ ; ೩೪೮

## ಸರ್ವ ಯೋಗಾಂಗ ಫಲಾದಿ ಸಂಗ್ರಹ :

ಬಳಿಕೀ ಪ್ರಾಣಾಯಾಮದಿಂ ಪಾಪಕ್ಷಯರೂಪ ಶಾಂತಿ, ಅಜ್ಞಾನ ನಿವೃತ್ತಿರೂಪ ಪ್ರಶಾಂತಿ, ಜ್ಞಾನಪ್ರಕಾಶರೂಪ ದೀಪ್ತಿ, ಬುದ್ಧಿನಿರ್ಮಲರೂಪ ಪ್ರಸಾದವೆಂಬ ಚತುರ್ವಿಧ ಸಿದ್ಧಿಗಳಹವೆಂಬುದುಂ ; ಬಳಿಕ ಬಾಹ್ಯಕರ್ಮಪರಿತ್ಯಾಗದಿಂ ಚಿತ್ತವನಂತರ್ಮುಖಕ್ಕೆಯ್ದಿಸುವುದೇ ಲಕ್ಷಣಮಾದ ಪ್ರತ್ಯಾಹಾರದನೇಕ ಭೇದಂಗಳುಂ ; ಬಳಿಕ ಪರಶಿವನೆಂಬ ಶುಭಾಶ್ರಯದಲ್ಲಿ ಚಿತ್ತಸ್ಥಾಪನವೇ ಲಕ್ಷಣಮಾದ ಧಾರಣದ ಭೂಧಾರಣಾದಿ ಬಹುಪ್ರಕಾರಂಗಳುಂ ; ಮತ್ತಂ ವಿಷಯಾಂತರಕ್ಕೆರಗದೆ ಶಿವಚಿಂತಾ ಪ್ರವಾಹ ರೂಪಮಾದ ಧ್ಯಾನದ ನಾನಾವಿಧಂಗಳುಂ ; ಧ್ಯೇಯವಸ್ತುವಿನಲ್ಲಿ ಮನೋನಿಶ್ಚಲಾತ್ಮಕಮಾದ ಸಮಾಧಿಯ ಜ್ಞಾತಾಜ್ಞಾತಾದಿ ಭೇದಂಗಳುಂ ; ಬಳಿಕಣಿಮಾದ್ಯನೇಕ ಸಿದ್ಧಿಭೇದಂಗಳುಂ ; ೩೪೯

## ಯೋಗ ವಿಘ್ನಾದಿಗಳು ;

ಆಲಸ್ಯ, ವ್ಯಾಧಿ, ಪ್ರಮಾದ, ಸ್ಥಾನಸಂಶಯ, ಅನವಸ್ಥಿತಿ, ಅಶ್ರದ್ಧೆ, ಭ್ರಾಂತಿದರ್ಶನ, ದುಃಖ, ದೌರ್ಮನಸ್ಯ, ವಿಷಯಲೋಲುಪತ್ವವೆಂಬ ದಶಯೋಗವಿಘ್ನಂಗಳುಂ; ಲಯ, ವಿಕ್ಷೇಪ ಕಾಷಾಯವೆಂಬ ದೋಷತ್ರಯಂಗಳುಂ; ಆಯಾಯ ವಿಘ್ನದೋಷೋಪಶಾಂತಿ ಪ್ರಕಾರಂಗಳುಂ ; ೩೫೦

## ಯೋಗ ಫಲಾದಿಗಳು :

ಮತ್ತಮಾ ಯಮಾದ್ಯಷ್ಟಾಂಗನೊಳಗೆ ಮೊದಲ ಯಮಾದಿ ನಾಲ್ಕಂಗವೇ ಬಾಹ್ಯವೆನಿಸಿಹವು, ಮಿಕ್ಕ ಪ್ರತ್ಯಾಹಾರಾದಿ ನಾಲ್ಕಂಗವೇ ಅಂತರಂಗವೆನಿಸಿಹವು, ಅವರಲ್ಲಿ : ಅಹಿಂಸಾದ್ಯವಾಂತರಂಗಮುಳ್ಳ ಯಮಕ್ಕೆ ಅವೈರ ತ್ಯಾಗಾದಿಗಳುಂ; ತಪಃ ಸ್ವಾಧ್ಯಾಯಾದ್ಯವಾಂತರಂಗವುಳ್ಳ ನಿಯಮಕ್ಕೆ ಅಭಿಮತ ದೇವತಾ ಸಂದರ್ಶನಾದಿಗಳು; ಸ್ವಸ್ತಿಕಾದಿ ಭೇದವುಳ್ಳಾಸನಕ್ಕೆ ದೇಹಾರೋಗ್ಯ ಅನಾಲಸ್ಯಾದಿಗಳು ; ರೇಚಕಾದಿ ಸಪ್ತಭೇದವುಳ್ಳ ಪ್ರಾಣಾಯಾಮಕ್ಕೆ ಸಕಲದೋಷ ನಿವೃತ್ತ್ಯಾದಿಗಳುಂ ; ಇಂದ್ರಿಯಂಗಳನಂತರಂಗಕ್ಕಾಕರ್ಷಣಂ ಮಾಳ್ಪ ಪ್ರತ್ಯಾಹಾರಕ್ಕೆ ವೈರಾಗ್ಯಲಕ್ಷಣವಹ್ನಿಯಿಂ ತತ್ತದ್ವಿಷಯವರ್ಗ ವನ ದಹನಾದಿಗಳುಂ ;
ಶುಭಾಶ್ರಯದಲ್ಲಿ ಚಿತ್ತ ಬಂಧನ ರೂಪ ಧಾರಣಕ್ಕೆ ಪಾಪಕ್ಷಯಾದಿಗಳುಂ ;

ಸಗುಣ ನಿರ್ಗುಣ ಧ್ಯಾನಕ್ಕೆ ಅನೀಶ್ವರತ್ವಂ ನಿವೃತ್ಯಾದಿಗಳುಂ
ಜ್ಞಾತಾದಿ ಸಮಾಧಿಗೆ ಪ್ರಜ್ಞಾ ಪ್ರತಿಷ್ಠಾದಿಗಳೇ ಫಲಂಗಳೆಂಬುದುಂ ; ೩೫೧

## ಅಷ್ಟಾಂಗಾಧಿಕಾರಿ ಭೇದ :

ಮತ್ತಮಾ ಅಷ್ಟಾಂಗದೊಳಗೆ ಯಮಾದ್ಯಷ್ಟಾಂಗಾಭ್ಯಾಸಿಗಳೇ ಕನಿಷ್ಠರು. ಆಸನಾದಿ ಷಡಂಗಾಭ್ಯಾಸಿಗಳೇ ಮಧ್ಯಮರು. ಪ್ರತ್ಯಾಹಾರಾದಿ ಚತುರಂಗಾಭ್ಯಾಸಿಗಳೇ ಉತ್ತಮರು. ಧ್ಯಾನಾದಿ ದ್ವ್ಯಂಗಾಭ್ಯಾಸಿಗಳೇ ಉತ್ತಮೋತ್ತಮರೆಂಬಂಗಾಧಿಕಾರಿ ಭೇದಂಗಳುಂ. ೩೫೨

## ನಿರ್ಗುಣಾಷ್ಟಾಂಗ ಯೋಗ ಲಕ್ಷಣ :

ಅನಂತರದಲ್ಲಿ

ದೇಹೇಂದ್ರಿಯಾದಿ ವೈರಾಗ್ಯವೇ ಯಮ, ಪರಮಾರ್ಥಾಭಿರತಿಯೇ ನಿಯಮ,
ಸರ್ವವಸ್ತುವಿನೊಳುದಾಸೀನವೇ ಆಸನ, ವಿಷಯಾರ್ಥವಾದಿಂದ್ರಿಯ
ನಿರೋಧವೇ ಪ್ರಾಣಾಯಾಮ,
ವಿಷಯ ವಿಮುಖತೆಯೇ ಪ್ರತ್ಯಾಹಾರ, ಸ್ವಾತ್ಮನಿಷ್ಠೆಯೇ ಧಾರಣ,
ಬ್ರಹ್ಮವೇ ತಾನೆಂಬುದೇಧ್ಯಾನ, ಎಚ್ಚರಿಲ್ಲದ ಮರವೆಯಿಲ್ಲದ
ಸಂವಿನ್ಮಾತ್ರಾವಭಾಸನವೇ ಸಮಾಧಿ,

ಎಂಬೀ ನಿರ್ಗುಣಾಷ್ಟಾಂಗ ಯೋಗ ಲಕ್ಷಣಂಗಳುಂ ; ೩೫೩

## ಷಟ್ಚಕ್ರ ವಿಷಯ ವಿವೇಕ :

ಮತ್ತಮಾ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಗ್ನೇಯಮೆಂಬ ಷಟ್ಚಕ್ರಂಗಳುಂ ; ಕ್ರಮದಿಂದವಕ್ಕೆ ದೇಹಮಧ್ಯ, ಲಿಂಗ, ನಾಭಿ, ಹೃದಯ, ಕಂಠ, ಭ್ರೂಮಧ್ಯವೆಂಬಾರು ಸ್ಥಾನಂಗಳುಂ ; ಚತುರಸ್ರ, ಅರ್ಧಚಂದ್ರಾಕಾರ, ತ್ರಿಕೋಣ, ಷಟ್ಕೋಣ, ವೃತ್ತ, ವಿಚಿತ್ರಮಾದಾರಾಕಾರಂಗಳುಂ;ಪೃಥುವ್ಯಾದಿಮಾನಸಾಂತಮಾದಾರು ಭೂತಂಗಳುಂ ; ಪೀತ, ಶ್ವೇತ, ರಕ್ತ, ನೀಲ, ಸ್ಫಟಿಕ, ಮಾಣಿಕ್ಯವೆಂಬಾರು ವರ್ಣಂಗಳುಂ; ಚತುರ್ದಳ, ಷಡ್ದಳ, ದಶದಳ, ದ್ವಾದಶದಳ, ಷೋಡಶದಳ, ದ್ವಿದಳಂಗಳುಳ್ಳಾರು ಕಮಲಂಗಳುಂ ; ವಾದಿಸಾಂತ, ಬಾದಿಲಾಂತ, ಡಾದಿಫಾಂತ, ಕಾದಿಠಾಂತ, ಆದಿವಿಸರ್ಗಾಂತ, ಹಕಾರಕ್ಷಕಾರಂಗಳೆಂಬಾರು ವರ್ಗ, ದಳಾಕ್ಷರಂಗಳುಂ ; ನಕಾರಾದಿ ಪ್ರಣವಾಂತಮಾದಾರು ಕರ್ಣಿಕಾಕ್ಷರಂಗಳುಂ ; ಬ್ರಹ್ಮಾದಿಜೀವಾತ್ಮಾಂತಮಾದಾರಧಿದೇವತೆಗಳುಂ; ಮೇಲೆ ಬ್ರಹ್ಮಚಕ್ರ, ಶಿಖಾಚಕ್ರ, ಪಶ್ಚಿಮಚಕ್ರಮೆಂಬ ಚಕ್ರತ್ರಯಂಗಳುಂ ; ಕ್ರಮದಿಂದವಕ್ಕೆ ಮಸ್ತಕ, ಶಿಖಿ, ಶಿಖಾಂತಮೆಂಬ ಸ್ಥಾನತ್ರಯಂಗಳುಂ, ಸಹಸ್ರದಳ,ತ್ರಿದಳ,ಏಕದಳಮಾದ ಪದ್ಮತ್ರಯಂಗಳುಂ; ಜ್ಯೋತಿರ್ವರ್ಣ, ಮಹಾಜ್ಯೋತಿರ್ವರ್ಣ, ಅಪ್ರದರ್ಶನವರ್ಣಮೆಂಬ ವರ್ಣ

ತ್ರಯಂಗಳುಂ ; ಅಕ್ಷರಾತ್ಮಕನಾದ, ಅನಕ್ಷರಾತ್ಮಕನಾದ, ನಿತ್ಯಬ್ದವೆಂಬ ನಾದ ತ್ರಯಂಗಳುಂ ; ಅಂತರಾತ್ಮ ಪರಮಾತ್ಮ ಪರಬ್ರಹ್ಮವೆಂಬಾದಿ ದೇವತಾ ತ್ರಯಂಗಳುಂ ; ೩೫೪

ಯೋಗವಿದ್ಯಾ ಪರಿಶೇಷ :

ಬಳಿಕ ಸೋಮ ಸೂರ್ಯಾಗ್ನಿ ಮಂಡಲತ್ರಯ ಸ್ಥಾನ ಕಾಂತಿಪ್ರಕಾರಂಗಳುಂ ಬಾಹ್ಯಮಧ್ಯಮಾಂತರ್ಲಕ್ಷ್ಯತ್ರಯಂಗಳುಂ; ಗುಣರಹಿತಾದ್ಯಾಕಾಶ ಪಂಚಕಂಗಳುಂ; ಪೂರ್ವ ಮಧ್ಯೋತ್ತರವೆಂಬ ತಾರಕತ್ರಯಂಗಳುಂ ; ಷಣ್ಮುಖಿ, ಖೇಚರೀ ಶಾಂಭವಿ, ಮೊದಲಾದ ಮುದ್ರಾಭೇದಂಗಳುಂ; ಉನ್ಮನಿ ಮನೋನ್ಮನಿ, ಸಹಜಾದ್ಯ ವಸ್ಥಾಕ್ರಮಂಗಳುಂ; ವಿಕ್ಷೇಪ, ಗತಾಗತ, ಸಂಶ್ಲಿಷ್ಟ, ಸ್ವಲೀನವೆಂಬ ಮನೋವೃತ್ತಿ, ಚತುಷ್ಟಯಂಗಳುಂ; ಬಾಲ, ಉನ್ಮತ್ತ, ಪಿಶಾಚವೆಂಬ ಯೋಗೀಶ್ವರ ಚಿಹ್ನತ್ರಯಂ ಗಳುಂ ; ಎಂಬಿವು ಮೊದಲಾದವೆಲ್ಲಂ ಯೋಗಪಾದದಲ್ಲಿ ಪ್ರತಿಪಾದ್ಯಂಗಳಕ್ಕುಂ. ೩೫೫

## ಜ್ಞಾನ ಪಾದ

ಮತ್ತಮಾಜ್ಞಾನ ಪಾದದಲ್ಲಿ ಪತಿ ಪಶು ಪಾಶವೆಂಬ ತ್ರಿಪದಾರ್ಥ ಪ್ರತಿಪಾದಕ ಮಾಗಿಹುದವರಲ್ಲಿ.

ಪತಿ ಪದಾರ್ಥ ವಿಚಾರ :

ಅನಾದಿ ನಿರ್ಮಲ ಚಿದ್ಘನೈಕತ್ವದಿಂ, ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ, ಅನುಗ್ರಹವೆಂಬ ಪಂಚಕೃತ್ಯ ಕರ್ತೃತ್ವವೇ ತನಗೆ ಅಸಾಧಾರಣ ಧರ್ಮವಾಗುಳ್ಳುದೇ ಪತಿ ಪದಾರ್ಥಮಕ್ಕುಂ. ೩೫೬

ಸೃಷ್ಟಿ ಸ್ವರೂಪ :

ಬಳಿಕಾ ಸೃಷ್ಟ್ಯಾದಿ ಪಂಚಕೃತ್ಯದ ವಿವರವೆಂತೆನೆ. ಕರಣಕರ್ತೃತ್ವ, ಸಂಕಲ್ಪ ಕರ್ತೃತ್ವ, ಸನ್ನಿಧಾನ ಕರ್ತೃತ್ವವೆಂಬ ತ್ರಿವಿಧ ಕಾರ್ಯ ಕರ್ತೃತ್ವದೊಳಗೆ ಕುಲಾ ಲಾದಿಕದಂತೆ ವಿಕಾರಾತ್ಮಕವಾದ ಕರಣ ಕರ್ತೃತ್ವಮಂಬಿಟ್ಟು, ಬಳಿಕ, ಸಂಕಲ್ಪ ವೆಂಬುದು ಸ್ಮರಣ ವಿಶೇಷಮಪ್ಪುದರಿಂ, ವಿಶ್ವಕರ್ಮಾದಿಕದಂತೆ ಅಜ್ಞತ್ವಾದಿ ದೋಷ ಯುಕ್ತಮಾದ ಸಂಕಲ್ಪ ಕರ್ತೃತ್ವಮಂ ನೇತಿಗಳೆದು, ಮೇಲೆ ಕುಮುದ ಕಮಲ ಮಧೂಚ್ಛಿಷ್ಟ, ಮೃತ್ತಿಕೆಗಳ ಸಂಕೋಚವಿಕಾಸ, ದ್ರವ, ಶುಷ್ಕಂಗಳೆಂಬ ಕ್ರಮ ವಿಷಯಮತಿ ವಿಕಾರಂಗಳಿಗೆ ನಿರ್ವಿಕಾರನಾದ ಸೂರ್ಯನೆಂತಂತೆ, ಸನ್ನಿಧಾನ ಕರ್ತೃತ್ವಯುಕ್ತನೆನಿಸಿ, ಬಿಂದುವಿನಧಿಕಾರಾವಸ್ಥೋಪಾಧಿಯಿಂದೀಶ ಸಂಜ್ಞೆಯುಳ್ಳ ಪರಶಿವನ ಸಕಲ ಕಾರ್ಯೋತ್ಪಾದಕಮಾದ ವ್ಯಾಪಾರ ವಿಶೇಷವೇ ಸೃಷ್ಟಿಯಕ್ಕುಂ. ೩೫೭

**ಸ್ಥಿತಿ ಸ್ವರೂಪ :**

ಬಳಿಕಾತ್ಮರ್ಗೆ ಪರಮಾನಂದೋತ್ಪಾದಕವಪ್ಪುದರಿಂ, ಭೋಗಾವಸ್ಥೆಯ ನೆಯ್ದಿದ ಬಿಂದೂಪಾಧಿಯಿಂ, ಸದಾಶಿವನಾಮಧೇಯಮುಳ್ಳ ಪರಶಿವನ ಸಮಸ್ತ ಜಗತ್ಪಾಲನಾತ್ಮಕ ಕೃತ್ಯವಿಶೇಷವೇ ಸ್ಥಿತಿಯುಕ್ಕುಂ. ೩೫೮

**ಸಂಹಾರ ಸ್ವರೂಪ :**

ಮತ್ತಂ ಸಂಸಾರದಿಂ ದುಃಖಿತರಾದ ಪಶು ವಿಶ್ರಮಣಾರ್ಥಮಾಗಿ ಶಿವನ ನಿಯಾಮಕ ಶಕ್ತಿಯಿಂ ಸಕಲತತ್ವ ಭುವನಾದಿ ಕಾರ್ಯವರ್ಗಂ ಸಂಕುಚಿತಮಾಗಿ ಲಯಾವಸ್ಥೆಯನೆಯ್ದಿದ ಬಿಂದೂಪಾಧಿಯಿಂದೀಶ ಸಂಜ್ಞಿತನಾದ ಪತಿಯ ವ್ಯಾಪಾರ ವಿಶೇಷವೇ ಸಂಹಾರಮಕ್ಕುಂ. ೩೫೯

**ತಿರೋಭಾವ ಸ್ವರೂಪ :**

ಮತ್ತಂ ಸರ್ವಾತ್ಮರ ಭೋಗಸಾಧನಮಾದ ಬಿಂದೂಪಾಧಿಯಿಂ ಕ್ರಮಾನುಸಾರದಿಂದಾಯಾಯ ತತ್ವಭುವನಾದಿಗಳಲ್ಲಿರ್ದ ಭೋಗವನನುಣಿಪುದರಿಂ, ವಾಮ ನಾಮಧೇಯುವನುಳ್ಳ ಪರಶಿವನ ಕೃತ್ಯವಿಶೇಷವೇ ತಿರೋಭಾವಮಕ್ಕುಂ. ೩೬೦

**ಅನುಗ್ರಹ ಸ್ವರೂಪ :**

ಮತ್ತಂ ನಿಃಶೇಷಮಾಗಿ ನಷ್ಟವಹುದಕ್ಕೆ ಯೋಗ್ಯಮಾದ ಮಲ ಪರಿಪಾಕಾನುಸಾರದಿಂದತ್ಯಂತ ನಾಶ ಪರಿಣಾಮವಿಶೇಷಕ್ಕುಪಯೋಗವಾದ ತನ್ನ ಕಾರ್ಯವರ್ಗಂ ಗರ್ಭೀಕಾರಕ್ಕಭಿಮುಖವಪ್ಪ ಬಿಂದೂಪಾದಿಯಿಂ ಲಭ್ಯಮಾದ ನಿರಧಿಕರಣ ಸಾಧಿಕರಣ, ಶಿವಧರ್ಮಿಣಿ, ಲೋಕಧರ್ಮಿಣಿ, ನೈಷ್ಠಿಕಿ, ಭೌತಿಕಿ, ಸದ್ಯೋನಿರ್ವಾಣ, ಕ್ರಿಯಾವತಿ, ಜ್ಞಾನವತಿ, ಚಾಕ್ಷುಷಿ, ಸ್ಪಾರ್ಶಿಕಿ, ಮಾಂತ್ರಿಕಿ, ವಾಚಕಿ, ಶಾಸ್ತ್ರಿ, ಯೌಗಿಕಿ, ಹೌತ್ರಿಕಿಯೆಂಬಿವು ಮೊದಲಾದ ದೀಕ್ಷಾ ದ್ವಾರದಿಂದೀಶಾನ ಸಂಜ್ಞಿತನಾದ ಪತಿಯ ಸ್ವಸಾಮ್ಯತಾರೂಪ ವಿಶುದ್ಧಾತ್ಮಾಭಿವ್ಯಕ್ತಿಗೆ ಕಾರಣಮಾದ ವ್ಯಾಪಾರ ವಿಶೇಷವೇ ಅನುಗ್ರಹವಹುದು. ೩೬೧

**ಪಶು ಪದಾರ್ಥ :**

ಮತ್ತಮನಾದಿಮಲ ರುದ್ಧ ಜ್ಞಾನ ಕ್ರಿಯಾ ಶಕ್ತಿಯುಕ್ತ ಚೈತನ್ಯವೇ ಪಶುವಕ್ಕುಂ. ೩೬೨

**ಪಶು ಭೇದಗಳು :**

ಬಳಿಕಾ ಪಶುವೇ ಮಲ ಮಾಯೆ ಕರ್ಮವೆಂಬ ಪಾಶತ್ರಯ ಸಂಬಂಧದಿಂ ಸಕಲನೆಂದು, ಮಲಕರ್ಮವೆಂಬ ಪಾಶದ್ವಯ ಸಂಬಂಧದಿಂ ಪ್ರಳಯಾಕಲನೆಂದು, ಮಲೈಕಪಾಶ ಸಂಬಂಧದಿಂ ವಿಜ್ಞಾನ ಕೇವಲನೆಂದು ತ್ರಿವರ್ಗಮಾಗಿಹುದು. ಅಲ್ಲಿ ಮೊದಲ ಸಕಲ ವರ್ಗವೆ ಪಕ್ವತ್ರಿಪಾಶರೆಂದು, ಅಪಕ್ವತ್ರಿಪಾಶರೆಂದು ದ್ವಿವಿಧ ಮಾಗಿಹುದು. ೩೬೩

ಪಕ್ವತ್ರಿಪಾಶ ಪಶುಗಳು :

ಅಲ್ಲಿ ಪಕ್ವತ್ರಿಪಾಶರೊಳಗೆ ಕಲಾಮಸ್ತಕದಲ್ಲಿರ್ದ ಮಂಡಲೇಶ್ವರರೆಂಟು, ಗುಣ ಮಸ್ತಕದಲ್ಲಿರ್ದ ಕ್ರೋಧೇಶಾದಿಗಳೆಂಟು, ಸೂಕ್ಷ್ಮತನ್ಮಾತ್ರ ವರ್ಗದಲ್ಲಿರ್ದ ಶತರುದ್ರರಿಗೆ ಕರ್ತೃವಾದ ವೀರಭದ್ರನು, ಗುಣತತ್ವದಲ್ಲಿರ್ದ ಬ್ರಹ್ಮ ವಿಷ್ಣ್ವಾದಿಗಳಿಗೆ ಕರ್ತೃವಾದ ಶ್ರೀಕಂಠೇಶ್ವರನು, ಬ್ರಹ್ಮಾಂಡ ರಕ್ಷಕರಾದ ಶತರುದ್ರರೆಂಬ ನೂರಹದಿನೆಂಟನೂ ಪರಶಿವನು ತಾನೆ ನಿರಧಿಕರಣ ದೀಕ್ಷೆಯಿಂ ಮಂತ್ರೇಶ್ವರರಂ ಮಾಡಿ, ಆಯಾಯ ಕೃತ್ಯಾಧಿಕಾರಿಗಳಾಗಿ ನಿಲಿಸಲವರೆಲ್ಲಂ ದೇಹಯುಕ್ತರಾದೊಡಮಾದೇಹ ವಶಂಗತರಾಗದೆ ಸರ್ವಜ್ಞರಾಗಿ ಪತಿಪದಾರ್ಥವೆನಿಸಿಕೊಳುತ್ತಿರ್ಕುಂ. ೩೬೪

ಅಪಕ್ವ ತ್ರಿಪಾಶ ಪಶುಗಳು :

ಮತ್ತಮಾ ಅಪಕ್ವತ್ರಿಪಾಶರೊಳಗೆ ಕೆಲಂಬರೇ ವಿಷಮೂರ್ಛಿತರಂತೆ ಮಲ ನಿರೋಧದಿಂ ಕೇವಲಾವಸ್ಥರಾಗಿರ್ದು ಮೇಲೆ ಶಿವನಿಂ ಕಲಾ, ಯೋಗ, ಭೋಗ, ಕರ್ಮಕ್ಷಯ, ಮಲಪರಿಪಾಕಾದಿಕ್ರಮಯೋಗಂಬಡೆದು, ಬಳಿಕ ಮೋಕ್ಷದಲ್ಲಿಯ ಲವಲವಿಕೆ, ಸಂಸಾರದಲ್ಲಿಯ ಜಿಗುಪ್ಸೆ, ಶಿವಭಕ್ತರುಗಳಲ್ಲಿ ಭಕ್ತಿ, ಶ್ರೀಗುರೂಪಾಸ್ತಿ, ಶಿವಾಗಮಂಗಳಲ್ಲಿ ವಿಶ್ವಾಸಂ ಮೊದಲಾದ ಚಿಹ್ನಂಗಳನುಳ್ಳ ಶಕ್ತಿಪಾತದ ಮಂದ, ಮಂದತರ, ತೀವ್ರ, ತೀವ್ರತರವೆಂಬ ಭೇದ ಪರೀಕ್ಷೆಯಿಂ ಪರಶಿವನು ಗುರುಮೂರ್ತಿಯನಧಿಷ್ಟಿಸಿ, ಮಾಳ್ಪ ಸಾಧಿಕರಣ ದೀಕ್ಷಾಕ್ರಮದಿಂ ಶಿವಸಮಾನರೂಪ ಮೋಕ್ಷವನೆಯ್ದುತಿರ್ಕುಂ ೩೬೫

ಅಪಕ್ವ ತ್ರಿಪಾಶ ಪ್ರಳಯಾಕಲರು :

ಬಳಿಕ ಅಪಕ್ವತ್ರಿಪಾಶರೊಳಗುಳಿದವರುಗಳೆ ಕರ್ಮಫಲ ಭೋಗಾಧಿಕದಿಂದಿಂತು ಮುಕ್ತರಾಗಲೋಸುಗ ಶಿವನು ನಾನಾಯೋನಿಯೊಳ್ಪಸರಿಸೆ, ಕಿಂಚಿಜ್ಞತ್ವ, ಕಿಂಚಿತ್ಕರ್ತೃತ್ವದಿಂ ಸುಖ ದುಃಖ ಮೋಹಂಗಳನುಳ್ಳವರಾಗಿ, ಆಯಾದೇಹಿಗಳೆನಿಸುತ್ತಲ್ಲಿ ಸಮಯಾಂತರ ದೀಕ್ಷಾವಿಶೇಷದಿಂ, ಪಶುತ್ವೈಕದೇಶದಿಂ ಪಿಂಗಿ ಶಿವತ್ವೈಕ ದೇಶಾಭಿವ್ಯಕ್ತಿ ಘಟಿಸೆ, ಮಾಯಾಪಾಶ ವಿಮೋಚನದಿಂ, ಮಲಕರ್ಮವೆಂಬ ಪಾಶದ್ವಯಯುಕ್ತರಾಗಿ ಪ್ರಳಯಾಕಲ ಸಂಜ್ಞೆಯಿಂ ತಾಳಿರ್ಕುಂ. ೩೬೬

ಪ್ರಳಯಾಕಲರಲ್ಲಿ ವಿಧಗಳು :

ಮತ್ತಮಾ ಪ್ರಳಯಾಕಲರೇ ಪಕ್ವಪಾಶದ್ವಯರೆಂದು. ಅಪಕ್ವ ಪಾಶದ್ವಯರೆಂದು, ದ್ವಿವಿಧಮಕ್ಕುಂ. ಬಳಿಕಿಲ್ಲಿ ಪಕ್ವಪಾಶದ್ವಯರೇ ಪರಶಿವನ ನಿರಧಿಕರಣ ದೀಕ್ಷಾಸಾಮರ್ಥ್ಯದಿಂ ನಿಜಮೋಕ್ಷವನೆಯ್ದುತ್ತಿಹರು. ಮತ್ತಮಾ ಅಪಕ್ವ ಪಾಶದ್ವಯರೇ ಪುರ್ಯಷ್ಟಕ ದೇಹಯುಕ್ತರಾಗಿ ಕರ್ಮಾಧೀನದಿಂದಾಯಾಯ ಭುವನಜ ದೇಹಸಂಬಂಧಿಗಳಹರು. ಮತ್ತವರೊಳಗೆ ಲೋಕಪಾಲಾ[illegible]

ಅತಿಗುಹ್ಯಾಷ್ಟಕರು, ಗುಹ್ಯಾದ್ಗುಹ್ಯಾಷ್ಟಕರು, ಪವಿತ್ರಾಷ್ಟಕರುಗಳೆಂಬ ಪಂಚಾಷ್ಟಕರುಗಳೆ ಮಂತ್ರಮಹೇಶ್ವರನಾದ ಅನಂತೇಶ್ವರನಿಂದನುಗ್ರಹೀತರಾಗಿ, ಸರ್ವಜ್ಞರೆನಿಸಿ ಭುವನ ಪತಿಗಳಾಗಿರ್ಕುಂ. ೩೬೭

ಮತ್ತಮಾ ಅಪಕ್ವಪಾಶದ್ವಯರೇ ವಿಜ್ಞಾನ ಯೋಗದ ಸನ್ಯಾಸಿಗಳಿಂ ಕರ್ಮಕ್ಷಯಮಾಗಿ ಮಲೈಕಪಾಶಬಂಧದಿಂ ದರ್ಶನಾಂತರಕ್ಕೆ ಮುಕ್ತಿಸ್ಥಾನವೆನಿಪ ಮಾಯಾತತ್ವ, ಶುದ್ಧವಿದ್ಯಾತತ್ವದ್ವಯದಂತರಾಳಲಕ್ಷಣ ಕೈವಲ್ಯಪದದೊಳ್ನಿಂದು ವಿಜ್ಞಾನ ಕೇವಲ ಸಂಜ್ಞೆಯಂ ತಾಳಿರ್ಕುಂ ೩೬೮

## ವಿಜ್ಞಾನ ಕೇವಲರು :

ಮತ್ತಮಾ ವಿಜ್ಞಾನ ಕೇವಲರೇ ಮಲವಿಶಿಷ್ಟ ಪರಿಪಾಕ ತಾರತಮ್ಯದಿಂ ಶಿವನಿಂ ಸಂಪ್ರಾಪ್ತ ನಿರಧಿಕರಣ ದೀಕ್ಷಾತಿಶಯದಿಂ ವಿದ್ಯೆ, ವಿದ್ಯೇಶ್ವರ, ಸದಾಶಿವಾದಿ ಭೇದದಿಂದುತ್ತರೋತ್ತರಮಾದ ಅಧಿಕಾರಾವಸ್ಥೆಯಂ ಸ್ವೀಕರಿಸಿ ಪರಮುಕ್ತರಂತೆ ದುಃಖಲೇಶವಿಲ್ಲದೆ ನಿರತಿಶಯ ಸಮಸ್ತ ಬೈಂದವಾನಂದವನಾಸ್ವಾದನಂಗೈದು, ಬಳಿಕಾ ಭೋಗದೊಳ್ವಿರತಿಪುಟ್ಟಿ, ಪ್ರಯೋಜ್ಯ ಕರ್ತೃತ್ವದಾಯಪಮಂ ಬಿಸುಟು ಸಕಲಬೈಂದವೋತ್ತೀರ್ಣಮಾಗಿ, ತತ್ವಾತೀತಮಾದ ಸರ್ವಾಭಿವ್ಯಕ್ತ ನಿರ್ವಿಕಲ್ಪ ಶಿವಸಮಾನ ಲಕ್ಷಣಜ್ಞಾನ ಕ್ರಿಯಾಶಕ್ತಿಯುಕ್ತ ಪರಮ ಮುಕ್ತರೆನಿಸಿರ್ಪರೆಂಬುದೇ ದ್ವಿತೀಯ ಪದಾರ್ಥಮಕ್ಕುಂ. ೩೬೯

## ಪಾಶ ಪದಾರ್ಥ—ಪಂಚಭೇದ :

ಮತ್ತಮನಾದಿಯಿಂ ಶಿವ-ಶಕ್ತಿಯಿಂದಧಿಷ್ಠಿತಮಾಗಿ ಪಶುಜ್ಞಾನ ಕ್ರಿಯಾಶಕ್ತಿಯಂ ತಿರಸ್ಕರಿಸಿಕೊಂಡಿರ್ಪುದೇ ಪಾಶಪದಾರ್ಥಮಕ್ಕುಂ. ಬಳಿಕಾ ಪಾಶವೇ ಮಲ, ಮಾಯ, ಕರ್ಮ, ಬಿಂದು, ತಿರೋದಾನವೆಂದು ಪಂಚವಿಧವಹುದಲ್ಲಿ: ೩೬೯(a)

## ಮಲಪಾಶ ವಿವೇಕ :

ಪಶುಗಳ ಚೈತನ್ಯ ಪ್ರಕಟತೆಯಂ ನಿಲಿಸಿ, ಮಾಯಾ ಬೀಜಾಂಕುರಕ್ಕೆ ಸಾಧನವಹತನದಿಂದಾತ್ಮರ್ಗೆ ಭೋಕ್ತೃತ್ವವನಾಪಾದಿಸಿ ತಾನೊಂದೆಯಾದೊಡಂ, ಪ್ರತ್ಯೇಕಾತ್ಮರನಾವರಿಸಿರ್ದನೇಕ ಶಕ್ತಿಯುಕ್ತಮಾಗಿ, ತನ್ನ ಪರಿಪಾಕವಶದಿಂ ಸಂಪ್ರಾಪ್ತಮಾದ ದೀಕ್ಷಾವಿಶೇಷದಿಂ ತೊಲಗಲುಳ್ಳಾಯಾ ಶಕ್ತಿ ಸಹಿತಮಾಗಿ; ಅಜ್ಞಾನ, ಅವಿದ್ಯೆ, ಆವೃತ್ತಿ, ಅಂಜನ, ಅಶುದ್ಧಿ, ಆಣವ, ಅನಿರ್ಮಲ, ಮೃತ್ಯು, ಮೂರ್ಛೆ, ತಿರಸ್ಕಾರ, ರುಕ್, ಪಶುತ್ವವೆಂಬಿವು ಮೊದಲಾದ ಪರ್ಯಾಯನಾಮಂಗಳನುಳ್ಳ; ಮೋಹ, ಮದ, ರಾಗ, ತಾಪ, ಶೋಷ, ವಿಷಾದ, ವೈಚಿತ್ರಮೆಂಬ ಸಪ್ತಾವಸ್ಥೆಯನುಳ್ಳ; ಮೋಹ, ಮಹಾಮೋಹ, ಮಿಶ್ರ, ತಾಮಿಶ್ರ, ಅಂಧತಾಮಿಶ್ರ——,——,ಯೆಂಬ ಸಪ್ತಾವಸ್ಥೆಯನುಳ್ಳ ಕೂಟಸ್ಥಾನಾದಿಯಾದ ಪಾಶವಿಶೇಷವೇ ಮಾಯೆಯಕ್ಕುಂ. ೩೭೦

## ಗುಣಕರ್ಮ ವಿವೇಕ :

ಮತ್ತಮಾ ಮಾಯೆಗೆ ಕರ್ಮಾಶ್ರಯಮೆಂತೆನೆ ಸಕಲಾತ್ಮರೂ ಮಾಳ್ಪ ಸುಕೃತ ದುಃಕೃತ ರೂಪಕರ್ಮವೇ ಕ್ರಮದಿಂ ಧರ್ಮ, ಜ್ಞಾನ,ಐಶ್ವರ್ಯ, ವೈರಾಗ್ಯಮೆಂಬ; ಅಧರ್ಮ, ಅಜ್ಞಾನ, ಅನೈಶ್ವರ್ಯ, ಅವೈರಾಗ್ಯಮೆಂಬ ಅಷ್ಟಭಾವಾತ್ಮಕತ್ವದಿಂ, ಬುದ್ಧಿಯ ಗುಣಮೆನಿಸಿ ಅಪೂರ್ವಮೆಂಬ ಪೆಸರಿಂ ಸಂಸ್ಕರಿಸಿಹುದಾ ಗುಣಂಗಳೊಳಗೆ ಮೊದಲ ಧರ್ಮಾದಿಚತುಷ್ಟಯಮೆ ಸಾತ್ವಿಕಗುಣಂಗಳು, ಮಿಕ್ಕ ಅಧರ್ಮಾದಿ ತ್ರಯಮೇ ತಾಮಸಂಗಳು, ಮೇಲವೈರಾಗ್ಯಮೊಂದೇ ರಾಜಸಮುಕ್ಕುಂ. ೩೭೧

## ಗುಣ ಸಂಸ್ಕಾರ ಭೇದಂಗಳು ;

ಮತ್ತಮಾ ಗುಣಂಗಳಾವುವೆಂತೆಂದೊಡೆ ಸಾಂಸಿದ್ಧಿಕಮೆಂದು, ವೈನೈಮಿಕ ಮೆಂದು, ಪ್ರಾಕೃತಮೆಂದು ತ್ರಿವಿಧಮಾಗಿರ್ಪುವವರಲ್ಲಿ; ಇಷ್ಟಪೂರ್ತ್ಯಾದಿ ಧರ್ಮ ಸಂಸ್ಕಾರಿಗಳೇ ದೇಹವಳಿದಮೇಲೆ ಜನ್ಮಾಂತರದಲ್ಲಿ ಮೊದಲ ಸಂಸ್ಕಾರಂ ತಾನೆ ಉದ್ಬೋಧ ಮಾಗಲದೇ ಸಾಂಸಿದ್ಧಿಕಮೆನಿಸೂದು. ಬಳಿಕ ದೇಹತ್ಯಾಗದಿಂ ಮೇಲೆ ಪುನರ್ಜನ್ಮದಲ್ಲಿ ಲೋಕ ಬುದ್ಧಿ ಗುರು ಶಾಸ್ತ್ರಾದಿಗಳಿಂದಾಯಾಯ ಸಂಸ್ಕಾರಾನುಸಾರಮಾದ ಗುಣಂಡೋರ್ಪುದೇ ವೈನೈಮಿಕಮೆನಿಸೂದು. ಬಳಿಕ ಸ್ವಪ್ನಮೂರ್ಛಾದಿಕದಿಂದೆಚ್ಚತ್ತಾತಂಗೆ ಯಥೋಚಿತ ಸಂಸ್ಕಾರಮಳವಡುವಂತೆ, ವರ್ತಮಾನದೇಹದಲ್ಲಿಯೆ ಆಯಾಯ ಗುಣಾಭಿವ್ಯಕ್ತಿಯಹುದು ಇದೇ ಪ್ರಾಕೃತಮುಕ್ಕುಂ. ೩೭೨

ಬಳಿಕವರಲ್ಲಿ ಸಾಂಸಿದ್ಧಿಕಮಾದ ಧರ್ಮದಿಂ ವಶ್ಯಾದಿಗಳು, ಜ್ಞಾನದಿಂ ಧರ್ಮಪರಿಜ್ಞಾನ ಸಂಬಂಧಾದಿಗಳು, ಐಶ್ವರ್ಯದಿಂ ವಿಘ್ನಸಮೂಹ ನಿವೃತ್ತ್ಯಾದಿಗಳು, ವೈರಾಗ್ಯದಿಂ ಭೋಗಪರಿತ್ಯಾಗಾದಿಗಳು. ಅಧರ್ಮದಿಂ ಭೋಗಶಕ್ತ್ಯಾದಿಗಳು ಅಜ್ಞಾನದಿಂ ತಿರಸ್ಕಾರಾದಿಗಳು, ಅನೈಶ್ವರ್ಯದಿಂ ವಿಘ್ನಾದಿಗಳು, ಅವೈರಾಗ್ಯದಿಂ ಜನ್ಮಾಂತರಂಗಳಕ್ಕುಂ. ೩೭೩

ಬಳಿಕ ವೈನೈಮಿಕ ಪ್ರಾಕೃತಂಗಳಾದ ಧರ್ಮದಿಂ ಸ್ವರ್ಗಾದಿಗಳು, ಜ್ಞಾನದಿಂ ಮುಕ್ತ್ಯಾದಿಗಳು ಐಶ್ವರ್ಯದಿಂದಿಷ್ಟಸಿದ್ಧ್ಯಾದಿಗಳು, ವೈರಾಗ್ಯದಿಂ ಪ್ರಕೃತಿ ಲಯಾದಿಗಳು; ಅಧರ್ಮದಿಂ ಪಶು ಪಕ್ಷಿ ಮೃಗ ಸರ್ಪ ಸ್ಥಾವರಮೆಂಬ ಪಂಚವಿಧ ತಿರ್ಯಗ್ಯೋನಿ ಪ್ರಾಪ್ತ್ಯಾದಿಗಳು, ಅಜ್ಞಾನದಿಂ ನರಕಭಯಾದಿಗಳು, ಅನೈಶ್ವರ್ಯದಿಂ ವಿಘ್ನಾದಿಗಳು,ಅವೈರಾಗ್ಯದಿಂ ಬಂಧಾದಿಗಳಹವಿಂತು ಸಕಲ ಕರ್ಮಸಂಸ್ಕಾರಂಗಳೆಲ್ಲಂ ಬುದ್ಧಿಯಲ್ಲಿರ್ಪವಾ ಬುದ್ಧಿಯಾದೊಡೆ ಪ್ರಳಯದಲ್ಲಿ ಮಾಯೆಯಲ್ಲಡಗಲಾಸಂಸ್ಕಾರದಲ್ಲಿರ್ದು ಕಾಲವಶದಿಂ ಫಲಿಸುತ್ತಿಹುದಾಗಿ ಮಾಯೆಯೇ ಕರ್ಮಾಶ್ರಯಮೆಂದರ್ಥಂ. ೩೭೪

## ಧರ್ಮಾಧರ್ಮಾದಿ ಕಾರ್ಯಗಳು :

ಮತ್ತಂ ಮನೋವಾಕ್ಕಾಯಮೆಂಬ ತ್ರಿವಿಧಕರಣದಿಂ ಜನಿಸಿ, ಸುಖದುಃಖಾದ್ಯನೇಕ ಗುಣಕ್ಕೆಕಾರಣವಾದ ಧರ್ಮಾಧರ್ಮರೂಪದಿಂ ವಿಚಿತ್ರಮಾಗಿಉತ್ಕ್ಷೇಪಣ, ಅಪಕ್ಷೇಪಣ, ಆಕುಂಚನ, ಪ್ರಸಾರಣ, ಗತಿಗಳೆಂಬ ಪಂಚವ್ಯಾಪಾರ ಸಂಭವಮಾಗಿ; ಉತ್ಪಾದ್ಯ, ಪ್ರಾಪ್ಯ, ವಿಕಾರ್ಯ, ಸಂಸ್ಕಾರ್ಯವೆಂಬ ಚತುರ್ವಿಧ ಫಲಂಗಳನುಳ್ಳುದೆನಿಸಿ; ಜಾತಿಪ್ರದ, ಆಯುಃಪ್ರದ, ಭೋಗಪ್ರದಮಾಗಿ ಅಧ್ಯಾತ್ಮಾದಿತ್ರಿಸಾಧನಮೆನಿಸಿ; ಸುರ ನರ ತಿರ್ಯಗ್ಯಾದಿ ಯೋನಿ ಪ್ರಾಪ್ತಿ ನಿಯಮಮದೊಳನುಗುಣಮಾದ ಕಲಾದಿ ಮಾಯಾಕಾರ್ಯಜನಿಪುದಕ್ಕೆ ಸಹಕಾರಿಯಾಗಿ ಬೀಜವೃಕ್ಷನ್ಯಾಯದಿಂ ಪ್ರವಾಹನಾದಿಯಪ್ಪ ಪಾಶ ವಿಶೇಷವೆ ಕರ್ಮವಕ್ಕುಂ. ೩೭೫

## ಭೋಗ ಲಕ್ಷಣ :

ಬಳಿಕೀ ಕರ್ಮಕ್ಕೆ ಭೋಗ ಪ್ರದತ್ವಮುಂಟಾಗಲಾ ಭೋಗ ಲಕ್ಷಣಮೆಂತೆನೆ · ಚಕ್ಷುರಾದಿಂದ್ರಿಯಂಗಳೇ ಬಾಹ್ಯದ ವನಿತಾದಿ ವಿಷಯಂಗಳಂ ಪ್ರಕಾಶಿಸಲವರಲ್ಲಿರ್ದ ಗುಣದೋಷಂಗಳಂ ಪರಾಮರ್ಶಂಗೆಯ್ವುದೇ ಮನಸ್ಸು. ಬಳಿಕಾ ಬುದ್ಧಿಯಾದೊಡಾ ವಿಷಯಂಗಳಂ ನಿಶ್ಚೈಸುತ್ತಲ್ಲಿಯ ಲೇಸು ಹೊಲ್ಲೆಯಗಳಂ ತಾನೆ ಸುಖದುಃಖ ರೂಪದಿಂ ಪರಿಣಾಮಿಸಿ, ಸಾಕ್ಷಾದ್ಭೋಗ್ಯಮೆನಿಸಲದನೆ ಕಲೋದ್ಭರಿತ ಚೈತನ್ಯನಾದ ಆತ್ಮನು ವಿದ್ಯೆಯೆಂಬಂತಃಕರಣದಿಂ ಕಂಡು, ಮೇಲೆ ಅಹಂಕಾರಮೆಂಬ ಕರಣದಿಂ ನಾನು ಸುಖಿ, ನಾನು ದುಃಖಿಯೆಂದಿಂತು ಅಭ್ಯಾಸದಿಂದಾ ಭೋಗ್ಯರೂಪ ಬುದ್ಧಿಯನರಿವಕನವೇ ಭೋಗಮಕ್ಕುಂ. ೩೭೬

## ಬಿಂದು ಪಾಶ ಸ್ವರೂಪ :

ಅನಂತರದೊಳತ್ಯಂತ ವಿಶಿಷ್ಟಾಧಿಕಾರಿಗಳಿಗೆ ಮಾಯೆ, ಕರ್ಮಂಗಳ ಸೋಂಕಿಲ್ಲದಿರ್ಪುದರಿಂ, ನಿರಂತರಮಾದ ನಿರತಿಶಯ ಸುಖಾನುಭವ ಲಕ್ಷ್ಯ ಭೋಗಸಾಧನ ಕಾರ್ಯಜಾತಂ ಜನಿಪುದಕ್ಕುಪಾದಾನ ಕಾರಣಮಾಗಿ, ಮಲಕ್ಷಯದೊಡನೆ ತೊಲಗಲುಳ್ಳಾಗಂತುಕ ಪಾಶವೆನಿಸಿಕೊಂಡು, ಮಹಾಮಾಯೆ, ಕುಟಿಲೆ, ಕುಂಡಲಿ, ಕ್ರಿಯಾಶಕ್ತಿ, ಪರನಾದ, ಪರಬಿಂದು, ಪರಿಗ್ರಹಶಕ್ತಿ, ಪರವಿದ್ಯೆ, ಶಬ್ದತತ್ವ, ಶಬ್ದಬ್ರಹ್ಮ ಶುದ್ಧಮಾಯೆ:, ಶಿವತತ್ವ, ಷಡಧ್ವಬೀಜ, ಶಿವಲಿಂಗಪೀಠ, ಯೋಗಪೀಠ, ಮಂತ್ರಪೀಠ, ವ್ಯೋಮ, ವಿದ್ಯಾಶಕ್ತಿ, ವಾಗೀಶ್ವರಿ, ಅನಾಹತ, ಅಘೋಷವಾಕ್ಕು, ಬ್ರಹ್ಮವೆಂಬಿವು ಮೊದಲಾದ ಪರ್ಯಾಯ ನಾಮಂಗಳುಳ್ಳುದೆನಿಸಿ, ಕ್ಷಕಾರದಿಂ ಮೊದಲಾದೈವತ್ತೊಂದು ವರ್ಣಾಧ್ವಕ್ಕೆ, "ಓಂ ಶಿವಾಯ ನಮೋನಮಃ" ಎಂಬುದು ಮೊದಲಾದ ಎಂಭತ್ತೊಂದು ಪದಾಧ್ವಕ್ಕೆ "ಹೃದಯಾಯ ನಮಃ" ಎಂಬುದೇ ಮೊದಲಾದ ಏಕಾದಶ ಮಂತ್ರಾಧ್ವಕ್ಕೆ, ಪೃಥುವ್ಯಾದಿ ಶುದ್ಧಾಶುದ್ಧರೂಪ ಷಟ್ತ್ರಿಂಶ ತತ್ವಾಧ್ವಕ್ಕೆ,

ಕಾಲಾಗ್ನಿ ಮೊದಲಾದನೇಕ ಭುವನಾಧ್ವಕ್ಕೆ, ನಿವೃತ್ತ್ಯಾದಿ ಪಂಚಕಲಾಧ್ವಕ್ಕೆ, ಬಳಿಕ ವೈಖರ್ಯಾದಿ ಚತುರ್ವಿಧ ವಾಕ್ಕುಗಳಿಗೆಯುಂ ಆಧಾರ ಪರಿಣಾಮರೂಪದಿಂ ಕಾರಣ ಮಾಗಿ, ನಿರ್ವಿಕಲ್ಪ ಜ್ಞಾನೋಪೇತನಾದ ಪರಶಿವನೆಂಬ ಅಶರೀರ ಕರ್ತೃಕವಾದ ಪರಿಪೂರ್ಣ ಪರಂಜ್ಯೋತಿ ಸ್ವರೂಪಮಪ್ಪ ಪಾಶವಿಶೇಷವೇ ಬಿಂದುವಕ್ಕುಂ. ೩೭೭

ಚತುರ್ವಿಧ ವಾಕ್ಕುಗಳು :

ಮತ್ತಮಾ ಬಿಂದುವೆ ಚತುರ್ವಿಧ ವಾಕ್ಕುಗಳ್ಗೆ ಕಾರಣವೆಂತೆಂದೊಡೆ : ಆ ವಾಕ್ಕುಗಳ ಸ್ವರೂಪವೆಂತೆನೆ : ಪರೆ, ಪಶ್ಯಂತಿ, ಮಧ್ಯಮೆ, ವೈಖರಿಗಳೆಂಬವೆ ಚತುರ್ವಿಧವಾಕ್ಕುಗಳು. ಅವರಲ್ಲಿ ಆವನಾನೋರ್ವ ವಕ್ತೃವಿನ ಮೂಲಾಧಾರದಲ್ಲಿ ಸೂಕ್ಷ್ಮನಾದಸ್ವರೂಪದಿಂದಾತ್ಮನೊಡನೇಕರಸಮಾಗಿ ಸಮಸ್ತಕ್ಕೆ ಕಾರಣಮಾಗಿರ್ದ ವಾಣಿಯೇ ಪರೆಯೆನಿಸೂದು. ಬಳಿಕ್ಕದೇ ನಾಭಿಸ್ಥಾನದಲ್ಲಿ ಮಯೂರಾಂಡ ರಸಗತ ಪಾದಪಕ್ಷಾದ್ಯವಯವಂಗಳಂತೆ ಅರ್ಥವಾಚಕ ವರ್ಣಕ್ರಮವಿಲ್ಲದೆ ನಿರ್ವಿಕಲ್ಪ ಮಾಗುಜ್ವಲಿಸುತ್ತಿರ್ಪ ವಾಣಿಯೇ ಪಶ್ಯಂತಿಯೆನಿಸೂದು. ಬಳಕ್ಕದೇ ಹೃದಯಸ್ಥಾನ ದಲ್ಲಿ ಪದಾರ್ಥಂಗಳ ವಾಚಕವರ್ಣಾನು ಸಂಧಾನ ರೂಪದಿಂ ಪ್ರಾಣವೃತ್ತಿಯೊಡ ಗೂಡದೆ ಸವಿಕಲ್ಪಕಮಾಗಿರ್ಪ ವಾಣಿಯೇ ಮಧ್ಯಮೆಯೆನಿಸೂದು. ಬಳಿಕ್ಕದೇ ಉರ ಕಂಠ ಜಿಹ್ವಾಮೂಲ ತಾಲುಗೆ ಓಷ್ಠ ದಂತ ನಾಸಿಕ ಶಿರಸ್ಸೆಂಬ ಎಂಟುಸ್ಥಾನದಲ್ಲಿ ಪ್ರಾಣವಾಯು ಸಂಬಂಧನಾಗಲಲ್ಲಿ ಪುಟ್ಟುವ ಅರ್ಣ, ವರ್ಣ, ಬೀಜ, ಲಿಂಗ, ಮಾತೃಕೆ, ಶುದ್ಧಗೆಯುಂಬ ಪರ್ಯಾಯ ಸಂಜ್ಞೆವಿಡಿದ, ಪ್ರತ್ಯೇಕ ವರ್ಣಾಧಿದೇವತಾ ಫಲಂಗಳನುಳ್ಳ ಸ್ವರ, ವ್ಯಂಜನವೆಂಬಿತ್ತೆರನಾದ್ಯೈವತ್ತೊಂದಕ್ಷರಾಭಿವ್ಯಕ್ತಿಯಿಂ, ಇದು ಘಟ,ಇದು ಪಟವೆಂದು ಪೇಳೆ ಪರಶ್ರವಣಗೋಚರಮಾಗಿ ಸಕಲಸಂಸಾರ ವ್ಯಾಪಾರಕ್ಕೆ ಕಾರಣಮಪ್ಪುದರಿಂ, ಮುಖ್ಯ ಬಿಂದುರೂಪಮಾದ ವಾಣಿಯೇ ವೈಖರಿಯಕ್ಕುಂ. ೩೭೮

ವಾಗಾಧಿಕಾರಿಗಳು :

ಬಳಿಕ್ಕವರಲ್ಲಿ ಬಾಹ್ಯದೊಳೊಂದು, ಅಭ್ಯಂತರದಲ್ಲಿ ಮೂರು ವರ್ತಿಸುತ್ತಿರ್ಪ ವವರೊಳಗೆ ಮುಂದೆ ಪೇಳ್ವ ಶುದ್ಧಾಧ್ವ ವರ್ತಿಗಳಿಗೆ ಪರೆಯೆಂಬ ನಾದಸಂಜ್ಞೆಯುಳ್ಳ ಕಾರಣ ವಾಕ್ಕೇ ಮುಖ್ಯಮಾಗಿಹುದು. ಮಿಶ್ರಾಧ್ವವಾಸಿಗಳಲ್ಲಿ ಪಶ್ಯಂತಿ ಮಧ್ಯಮೆ ಯೆಂಬೆರಡು ಬಿಂದು ಸಂಜ್ಞೆಯುಳ್ಳ ಸೂಕ್ಷ್ಮವಾಕ್ಕುಗಳೇ ವರ್ತಿಸುತ್ತಿಹವು. ಆ ಶುದ್ಧಾಧ್ವಸ್ಥಿತರೇ ವೈಖರಿಯೆಂಬ ಅರ್ಣಸಂಜ್ಞೆಯುಳ್ಳ ಸ್ಥೂಲವಾಕ್ಕಿನಿಂದವೆ ವ್ಯವಹರಿಸುತ್ತಿರ್ಕುಂ. ೩೭೯

ವಾಗ್ಮಿ ವಿಭಾಗ :

ಬಳಿಕಿಲ್ಲಿ ವೃಕ್ಷಾದಿಗಳಿಗೆ ಪರೆ, ಸರ್ಪಾದಿಗಳಿಗೆ ಪಶ್ಯಂತಿ, ಪಶ್ವಾದಿಗಳಿಗೆ ಮಧ್ಯಮೆ, ಮನುಷ್ಯರ್ಗೆ ವೈಖರಿಯೇ ಪ್ರಧಾನ ಮಾಗಿರ್ಕುಂ. ೩೮೦

### ವೈಖರೀ ವಿಶೇಷ ವಿವೇಕ :

ಮತ್ತಮಾ ವೈಖರೀ ರೂಪ ಶಬ್ದ ಸಮೂಹವೇ ವಾಚಕವೆಂದು ಲಾಕ್ಷಣಿಕವೆಂದು, ವ್ಯಂಜಕವೆಂದು ತ್ರಿವಿಧಮಾಗಿಹುದು. ಅದರಲ್ಲಿ ವೃದ್ಧ ಸಂಕೇತಮಾಗಿ ಇದು ಘಟ,ಇದುಪಟವೆಂದು ಮುಖ್ಯಾರ್ಥಮಂ ಗೋಚರಿಪ ಶಬ್ದಾದಿಕವೇ ವಾಚಕ ಶಬ್ದವೆನಿಸೂದು. ಅಟ್ಟಣೆ ಕೂಗಿತ್ತೆಂಬಲ್ಲಿ ಅಚೇತನವಾದಟ್ಟಣೆ ಕೂಗಲರಿದು, ತತ್ಸಂಬಂಧಿಯಾದ ಮಾನವನೇ ಕೂಗಿದನೆಂದು ಅನ್ಯಾರ್ಥಮಂ ಲಕ್ಷಿಪ ಶಬ್ದಾದಿಕವೇ ಲಾಕ್ಷಣಿಕ ಶಬ್ದವೆನಿಸೂದು. ಸೂರ್ಯನಸ್ತಂಗತನಾದನೆಂಬಲ್ಲಿ ಸುಕೃತಿಗಳಪೇಕ್ಷೆಯಿಂ ದೇವ ಪೂಜೆ ಸಂಧ್ಯಾವಂದನಾದಿಕಮಂ ಮಾಡಲ್ವೇಕ್ಕುದೆಂದು ಬೇರೊಂದರ್ಥಮಂ ಸೂಚಿಪ ಶಬ್ದಾದಿಕವೇ ವ್ಯಂಜಕ ಶಬ್ದಮಕ್ಕುಂ. ೩೮೧

### ಸವಿಕಲ್ಪಕ ಜ್ಞಾನ ಗುರುಪರಂಪರೆ :

ಬಳಿಕಿಲ್ಲಿ ಘಟಾದಿ ಸಕಲ ವಿಷಯಂಗಳ ವಾಚ್ಯವಾಚಕ ಸಂಬಂಧ ಸಂಕೇತ ಲಕ್ಷಣ ಸವಿಕಲ್ಪಕ ಜ್ಞಾನಮಾದೊಡೆ ಮೊದಲು ನಿರ್ವಿಕಲ್ಪಕತ್ವದಿಂ ಸರ್ವವಸ್ತುವಿನ ಯಥಾರ್ಥಗ್ರಾಹಕನಪ್ಪ ಸರ್ವಜ್ಞನಾದ ಪರಮೇಶ್ವರ ಪ್ರಸಾದದಿಂದನಂತೇಶ್ವರಾದಿಗಳಿಗೆ ಬಂದಿತ್ತು. ಬಳಿಕವರಿಂ ರುದ್ರಾದಿಗಳಿಗೈದಿತ್ತು. ಮೇಣವರಿಂ ಬ್ರಹ್ಮಾದಿಗಳಿಗೆ ಲಭಿಸಿತ್ತು. ಮರಳವರಿಂ ದೇವತೆಗಳಿಗೊದಗಿತ್ತು. ಮತ್ತವರಿಂ ಋಷಿಗಳಳಗಳವಟ್ಟಿತ್ತು. ಬಳಿಕವರಿಂದ ಸ್ಕಂದಾದಿ ಪಿತೃ ಪಿತಾಮಹರಿಗೆ ಸಾರಿತ್ತು. ಮಗುಳವರಿಂದಸ್ಮದಾದಿಗಳಿಗೆ ಸಿದ್ಧಿಸಿತ್ತೆಂದರಿಯಲ್ವೇಳ್ಕುಂ. ೩೮೨

### ತಿರೋಧಾನ ಪಾಶ ಸ್ವರೂಪ :

ಬಳಕ್ಕೆಂತು ಪೇಳ್ದ ಮಲಾದಿ ಚತುರ್ವಿಧಪಾಶವಚೇತನವಪ್ಪುದರಿಂ, ತಮ್ಮ ತಮ್ಮ ವ್ಯಾಪಾರದೊಳ್ತಾವೆ ಪ್ರವರ್ತಿಸಲರಿಯವಾಗಿ ಆಯಾಯಾ ಪಾಶಾನುಗ್ರಹ ಲಕ್ಷಣಮಾದ, ಆಯಾಯ ಪಾಶವ್ಯಾಪಾರಾನುಸಾರಣಮಪ್ಪ ಶಿವ-ಶಕ್ತಿ ವಿಶೇಷವೇ ತಿರೋಧಾನವಹುದೆಂಬುದೇ ತೃತೀಯ ಪದಾರ್ಥವಿವೇಕಮಕ್ಕುಂ. ೩೮೩

### ಸಿದ್ಧಾಂತೋಪ ಸಂಹಾರ :

ಬಳಿಕೀ ಪ್ರಕಾರದಿಂ ಪೇಳ್ದ ಇವು ಮೊದಲಾದಸಂಖ್ಯಾತಮಪ್ಪವಾಂತರ ಭೇದ ಯುಕ್ತಮಾದ ಪತ್ಯಾದಿ ಪದಾರ್ಥ ಪ್ರತಿಪಾದಕಮಾದುದೇ ಜ್ಞಾನಪಾದವಹುದು. ಇಂತು ಕ್ರಿಯಾಪಾದಂ ಮೊದಲಾದ ನಾಲ್ಕು ಪಾದಪ್ರವರ್ತಕಮಪ್ಪ ಶಿವಾಗಮ ಶ್ರವಣ, ಪಠಣ, ಗ್ರಹಣ, ಮನನ, ನಿಧಿಧ್ಯಾಸಂಗಳಿಂದುತ್ಪನ್ನಮಾದ ಆತ್ಮನ ಯಥಾರ್ಥ ಜ್ಞಾನದೃಢತೆಯಿಂ ಪುಟ್ಟಿದ ಸಮಸ್ತ ಪ್ರಾಕೃತ ಮಾಯೆಯ ಬೈಂದವ ಭೋಗ ನಿಸ್ಪೃಹಲಕ್ಷಣ, ಪರಮ ವೈರಾಗ್ಯಬಲದಿಂ ಷಡಧ್ವಾತೀತಮಪ್ಪ ಶಿವ ಸಾಮ್ಯಸಾನಪ್ಪೆನೆಂಬ ನಿಶ್ಚಯಮುಳ್ಳಾತನೇ ಚರಮಕೃತಾರ್ಥನೆಂದು ಪೇಳ್ವುದೇ ಶಿವಸಿದ್ಧಾಂತದರ್ಥ ವಿಸ್ತಾರಮಕ್ಕುಂ. ೩೮೪

**ಇತಿ ಶಿವಾಗಮಾರ್ಥ ವರ್ಣನಂ ದ್ವಿತೀಯ ಪರಿಚ್ಛೇದ ಪರಿಸಮಾಪ್ತಂ**

## ತೃತೀಯ ಪರಿಚ್ಛೇದ

ಕಂದ || ಸಕಲಾಗಮಾರ್ಥಮಂ ಸಾ
ಧಕರರಿವಂತೆಯ್ದೆ ಪೇಳ್ದೆ ನಿಂತನುನಯದಿಂ ।
ಪ್ರಕಟಿಸುವೆನಿನ್ನಜಾಂಡಾ
ದಿಕಮಂ ಕೌತುಕವಿದೆಂದು ಕೇಳ್ವಂತಿಳೆಯೊಳ್ ||

ಅದೆಂತೆಂದೊಡೆ,

ಆಗಮರೀತ್ಯಾ ಷಟ್ತ್ರಿಂಶ ತತ್ವಗಳು :

ಪೂರ್ವೋಕ್ತ ಬಿಂದುವಿನ ಕಾರ್ಯಮಾದ ವರ್ಣಾದಿ ಕಲಾಂತಮಪ್ಪ ಷಡಧ್ವ ವಿಚಾರವಾಗಮಂಗಳಲ್ಲಿ ಪ್ರಸಿದ್ಧಮಪ್ಪುದರಿಂದವರೊಳಗೆ, ತತ್ವಾಧ್ವ, ಭುವನಾಧ್ವಂಗಳೆರಡನೇ ಚಿಲುಪಾಲು ಸಕ್ಕರೆ ತುಪ್ಪಂಗಳೊಂದುಗೂಡಲತಿ ಮಧುರಮಪ್ಪಂತೆ, ವೇದಾಗಮ ಪುರಾಣ ಸಮ್ಮತಿಗೂಡಿ ಪೇಳ್ವೆನದೆಂತೆಂದೊಡೆ : ಶಿವ ಶಕ್ತಿ ಸದಾಶಿವ ಈಶ್ವರ ವಿದ್ಯೆ ಕಾಲ ನಿಯತಿ ಕಲೆ ಅವಿದ್ಯೆ ರಾಗ ಪುರುಷ ಪ್ರಕೃತಿ ಗುಣ ಬುದ್ಧಿ ಅಹಂಕಾರ ಚಿತ್ತ ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ಘ್ರಾಣ ವಾಕ್ಕು ಪಾಣಿ ಪಾದ ಪಾಯು ಉಪಸ್ಥ ಶಬ್ದತನ್ಮಾತ್ರೆ ಸ್ಪರ್ಶತನ್ಮಾತ್ರೆ ರೂಪತನ್ಮಾತ್ರೆ ರಸತನ್ಮಾತ್ರೆ ಗಂಧತನ್ಮಾತ್ರೆ ನಭ ವಾಯು ವಹ್ನಿ ಜಲ ಭೂಮಿಗಳೆಂಬ ಮೂವತ್ತಾರು ತತ್ವಂಗಳವರಲ್ಲಿ ಸೃಷ್ಟಿಕ್ರಮ, ಸ್ವರೂಪಸಿದ್ಧಿ, ಗುಣ ಕರ್ಮ ಪ್ರಯೋಜನಾದಿಗಳ ವಿಸ್ತಾರವನಾಗಮಂಗಳಲ್ಲಿ ವಿಚಾರಗೆಯಲ್ತಕ್ಕುದವರೊಳಗೆ

## ಶುದ್ಧಾಧ್ವ ತತ್ವಗಳು :

ಮೊದಲ ಶಿವಾದಿ ವಿದ್ಯಾಂತಮಾದೈದು ತತ್ವಂಗಳೇ ಬಿಂದುಮಯವಾಗಿ ಶುದ್ಧಾಧ್ವವೆನಿಸಿಕೊಂಡು ವಿಜ್ಞಾನ ಕೇವಲರೆಂಬಾತ್ಮ ವರ್ಗಕ್ಕೆ ಶರೀರಾದಿ ಭೋಗ ಸಾಧನಂಗಳಾಗಿರ್ಕುಂ. ೩೮೬

## ಮಿಶ್ರಾಧ್ವ ತತ್ವಗಳು :

ಮತ್ತಮಾ ಕಾಲಾದಿ ಪ್ರಕೃತಿ ಕಡೆಯಾದೇಳು ತತ್ವಂಗಳೇ ಮಾಯಾವಿಕಾರ ಮಾಗಿ ಮಿಶ್ರಾಧ್ವವೆನಿಸಿಕೊಂಡು ಪ್ರಳಯಾಕಲರೆಂಬಾತ್ಮವರ್ಗಕ್ಕೆ ಕರಣಾದಿ ಭೋಗ ಸಾಧನಂಗಳಾಗಿರ್ಕುಂ. ೩೮೭

## ಅಶುದ್ಧಾಧ್ವ ತತ್ವಗಳು :

ಬಳಿಕಾ ಗುಣಾದಿ ಭೂಮ್ಯಾಂತಮಾದ ಇಪ್ಪತ್ತನಾಲ್ಕು ತತ್ವಂಗಳೇ ಪ್ರಕೃತಿ ಕಾರ್ಯಮಾಗಿ ಅಶುದ್ಧಾಧ್ವವೆನಿಸಿಕೊಂಡು ಸಕಲರೆಂಬಾತ್ಮವರ್ಗಕ್ಕೆ ಭುವನಾದಿ ಭೋಗ ಸಾಧನಂಗಳಾಗಿರ್ಕುಂ. ೩೮೮

## ಸೂಕ್ಷ್ಮತತ್ವಗಳು :

ಬಳಿಕ್ಕವರಲ್ಲಿ ಕಾಲಾದಿ ಭೂಮ್ಯವಧಿಯಾದ ಮೂವತ್ತೊಂದು ತತ್ವಂಗಳಾವಾ ವೆಂತೆಂದೊಡೆ : ಸ್ಥೂಲ ಸೂಕ್ಷ್ಮ ಭೇದದಿಂದಿತ್ತೆರನಪ್ಪುವವರೊಳಗೆ, ಸೂಕ್ಷ್ಮರೂಪಂ ಗಳೇ ಭೂತ ತನ್ಮಾತ್ರೆ, ಕರ್ಮೇಂದ್ರಿಯ, ಜ್ಞಾನೇಂದ್ರಿಯ ಅಂತಃಕರಣ, ಗುಣ, ಪ್ರಕೃತಿ, ಕಲಾದಿಕಮೆಂದೆಂಟು ವರ್ಗಮಾಗಿ, ಬೇರೆಬೇರೆ ಪುರ್ಯಷ್ಟಕ ಶರೀರವೆನಿಸಿ ಕೊಂಡು ಸೃಷ್ಟಿ ತೊಡಗಿ ಪ್ರಳಯಾವಧಿಯಾಗಾದರೂ, ಅಲ್ಲವೆ ಮೋಕ್ಷಾಂತಮಾಗಾ ದರೂ ಕೆಡದಿರ್ದು, ತಮ್ಮ ತಮ್ಮ ವ್ಯಾಪಾರಮುಖದಿಂ, ಪಿಶಾಚ, ಯಕ್ಷ, ರಾಕ್ಷಸ, ಗುಹ್ಯಕ, ಇಂದ್ರ, ಬ್ರಾಹ್ಮ್ಯ, ಸೋಮ, ಪ್ರಜಾಪತ್ಯ, ಪಶು, ಪಕ್ಷಿ, ಸರ್ಪ, ಮೃಗ, ವೃಕ್ಷ, ಮನುಷ್ಯರೆಂಬ ಚತುರ್ದಶ ಸೃಷ್ಟಿಯೋಗ್ಯರಾದ ಪ್ರತ್ಯೇಕಾತ್ಮರ್ಗೆ ಭೋಗ ಸಾಧನಂಗಳಾಗಿರ್ಕುಂ. ೩೮೯

## ಸ್ಥೂಲ ತತ್ವಂಗಳ ಪಂಚೀಕರಣ :

ಬಳಿಕ್ಕುಳಿದ ಸ್ಥೂಲರೂಪಂಗಳೇ ಭುವನಂಗಳಿಗಾಧಾರಮಾಗಿರ್ಪವದೆಂತೆಂದೊಡೆ ಪರಮೇಶ್ವರ ಪ್ರೇರಣೆಯಿಂ ಬ್ರಹ್ಮನು ಪೃಥುವ್ಯಾದಿಸ್ಥೂಲ ಪಂಚಭೂತಂಗ ಳೊಂದೊಂದನೆರಡೆರಡಾಗಿ ವಿಭಾಗಿಸಿ, ಬಳಿಕ್ಕವರೊಳೊಂದೊಂದು ಭಾಗವನೆ ಮಹಾ ಭೂತಮಾಗಿರಿಸಿ, ಮಿಕ್ಕೊಂದೊಂದು ಭಾಗವನೆ ಮತ್ತೆರಡೆರಡು ಭಾಗಂಗೆಯ್ದು, ಮೇಣಾಭಾಗದ್ವಯದೊಳಗೆ ಮೊದಲಮೊದಲಭಾಗಮಂ ಮತ್ತೆ ನಾಲ್ಕು ನಾಲ್ಕು

ಭಾಗಂ ಮಾಡಿ, ಮೇಲಾ ನಾಲ್ಕು ನಾಲ್ಕು ಭಾಗಮಂ ತಮ್ಮ ತಮ್ಮ ದ್ವಿತೀಯ ಭಾಗದೊಳ್ಬೆರಸದೆ, ಮಿಕ್ಕವರೆರಡೆರಡನೆಯ ಭಾಗದೊಂದಂ ಕೂಡಲಿಪ್ಪತ್ತೈದು ಭಾಗಮಪ್ಪುದದೆಂತೆಂದೊಡೆ ೩೯೦

ಆಕಾಶ ಪಂಚೀಕರಣ :

ಆಕಾಶದ ದ್ವಿತೀಯ ಭಾಗವೇ ಜ್ಞಾತೃವೆನಿಸೂದು, ಅನಿಲನ ದ್ವಿತೀಯ ಭಾಗದೊಳ್ಬೆರೆದುದೇ ಮನಸ್ಸು, ಅನಲನ ದ್ವಿತೀಯ ಭಾಗದೊಳ್ಬೆರೆದುದೇ ಬುದ್ಧಿ, ವಾರಿಯ ದ್ವಿತೀಯ ಭಾಗದೊಳ್ಬೆರೆದುದೆ ಚಿತ್ತ, ಭೂಮಿಯ ದ್ವಿತೀಯ ಭಾಗದೊಳ್ಬೆರೆದುದೇ ಅಹಂಕಾರ, ಇಂತೈದಂತಃಕರಣಂಗಳಾಕಾಶದ ಪಂಚೀಕರಣಂಗಳಕ್ಕುಂ. ೩೯೧

ವಾಯು ಪಂಚೀಕರಣ :

ಬಳಿಕ ವಾಯುವಿನ ದ್ವಿತೀಯ ಭಾಗವೇ ವ್ಯಾನವೆನಿಸೂದು, ನಭದ ದ್ವಿತೀಯ ಭಾಗದೊಳ್ಕೂಡಿದುದೇ ಸಮಾನ, ವಹ್ನಿಯ ದ್ವಿತೀಯ ಭಾಗದೊಳ್ಕೂಡಿದುದೇ ಉದಾನ, ಜಲದ ದ್ವಿತೀಯ ಭಾಗದೊಳ್ಕೂಡಿದುದೇ ಅಪಾನ, ಧರೆಯ ದ್ವಿತೀಯ ಭಾಗದೊಳ್ಕೂಡಿದುದೇ ಪ್ರಾಣವಿಂತೈದು ಮಾರುತಂಗಳೇ ವಾಯುವಿನ ಪಂಚೀಕರಣಂಗಳಕ್ಕುಂ. ೩೯೨

ಅಗ್ನಿಯ ಪಂಚೀಕರಣ

ಬಳಿಕ ಅಗ್ನಿಯ ದ್ವಿತೀಯ ಭಾಗವೇ ನೇತ್ರವೆನಿಸೂದು. ವ್ಯೋಮದ ದ್ವಿತೀಯ ಭಾಗದೊಳೊಂದಿದುದೇ ಶ್ರೋತ್ರ. ಸಮೀರನ ದ್ವಿತೀಯ ಭಾಗದೊಳೊಂದಿದುದೇ ತ್ವಕ್ಕು. ಸಲಿಲದ ದ್ವಿತೀಯ ಭಾಗದೊಳೊಂದಿದುದೇ ಜಿಹ್ವೆ. ಅವನಿಯ ದ್ವಿತೀಯ ಭಾಗದೊಳೊಂದಿದುದೇ ಘ್ರಾಣವಿಂತೈದು ಜ್ಞಾನೇಂದ್ರಿಯಂಗಳೇ ಅಗ್ನಿಯ ಪಂಚೀಕರಣಂಗಳಕ್ಕುಂ. ೩೯೩

ಅಪ್ಪುವಿನ ಪಂಚೀಕರಣ :

ಬಳಿಕ ಅಪ್ಪುವಿನ ದ್ವಿತೀಯ ಭಾಗವೇ ಪಾಯುವೆನಿಸೂದು. ಗಗನದ ದ್ವಿತೀಯ ಭಾಗದೊಡವೆರದುದೇ ಶಬ್ದ. ಪವನನ ದ್ವಿತೀಯ ಭಾಗದೊಡವೆರದುದೇ ಸ್ಪರ್ಶ. ಪಾವಕನ ದ್ವಿತೀಯ ಭಾಗದೊಡವೆರದುದೇ ರೂಪು, ಧರಣಿಯ ದ್ವಿತೀಯ ಭಾಗದೊಡವೆರದುದೇ ಗಂಧವಿಂತೈದು ವಿಷಯಂಗಳೇ ಅಪ್ಪುವಿನ ಪಂಚೀಕರಣಂಗಳಕ್ಕುಂ. ೩೯೪

ಪೃಥುವಿಯ ಪಂಚೀಕರಣ :

ಬಳಿಕ ಪೃಥುವಿಯ ದ್ವಿತೀಯ ಭಾಗವೇ ಪಾಯುವೆನಿಸೂದು. ಅಂಬರದ ದ್ವಿತೀಯ ಭಾಗದೊಳೆಯ್ದುದೇ ವಾಕ್ಕು; ಪವನನ ದ್ವಿತೀಯ ಭಾಗದೊಳೆಯ್ದುದೇ

ಪಾಣಿ, ಜ್ವಲನನ ದ್ವಿತೀಯ ಭಾಗದೊಳೆಯ್ದುದೇ ಪಾದ. ಉದಕದ ದ್ವಿತೀಯ ಭಾಗದೊಳೆಯ್ದುದೇ ಉಪಸ್ಥವಿಂತೈದು ಕರ್ಮೇಂದ್ರಿಯಂಗಳೇ ಪೃಥ್ವಿಯ ಪಂಚೀಕರಣಂಗಳು. ೩೯೫

## ಎಂಭತ್ತನಾಲ್ಕು ಲಕ್ಷ ಜೀವಯೋನಿಗಳು :

ಇಂತು ಪಂಚೀಕೃತ ಭೂತಂಗಳಿಂ ಬ್ರಹ್ಮಾಂಡವಾಬ್ರಹ್ಮಾಂಡದಲ್ಲಿ ಕಾಲಾಗ್ನಿ ಮೊದಲಾದ ಭುವನ, ಆ ಭುವನದಲ್ಲಿ ಅಂಡಜ ಸ್ವೇದಜ ಉದ್ಭಿಜ ಜರಾಯುಜ ಮಂತ್ರಜವೆಂಬೈದು ಯೋನಿಭೇದಂಗಳೊಳಗೆ, ನವಲಕ್ಷ ಮನುಷ್ಯ ಜಾತಿಗಳ, ಹದಿನಾಲ್ಕುಲಕ್ಷ ದೇವಜಾತಿಗಳ, ಹತ್ತುಲಕ್ಷ ಜಲಚರ ಪ್ರಾಣಿಗಳ, ಹತ್ತುಲಕ್ಷ ಬಹುಪಾದ ಜಾತಿಗಳ, ಹತ್ತುಲಕ್ಷ ಸರ್ಪ ಜಾತಿಗಳ, ಹತ್ತುಲಕ್ಷ ಖೇಚರ ಜನ್ಮಿಗಳ, ಒಂದುಲಕ್ಷ ಭೂಗತ ಚರಾಚರಜೀವಿಗಳ, ಇಪ್ಪತ್ತುಲಕ್ಷ ಸ್ಥಾವರ ಜಾತಿಗಳ ಸಂಖ್ಯಾಭೇದದಿಂ ಎಂಭತ್ತನಾಲ್ಕು ಲಕ್ಷಮಾದ ಜೀವರಾಶಿಗಳ ಸ್ಥೂಲ ಶರೀರಗಳು ದಿಸುತಿರ್ಕುಂ. ೩೯೬

## ಸ್ಥೂಲ ಶರೀರದಲ್ಲಿ ಪಂಚೀಕೃತ :

ಮತ್ತಮಾ ಸ್ಥೂಲ ಶರೀರದಲ್ಲಿಯೇ ಪೃಥುವ್ಯಾದಿ ಭೂತ ಪಂಚೀಕರಿಸಿರ್ಪವರಲ್ಲಿ: ಅಸ್ಥಿ ಚರ್ಮಾದಿ ಪಂಚಕಂಗಳೇ ಪೃಥ್ವಿ, ಮೂತ್ರ ರಕ್ತಾದಿ ಪಂಚಕಂಗಳೇ ಅಪ್ಪು, ಕ್ಷುಧಾ ತೃಷ್ಣಾದಿ ಪಂಚಕಂಗಳೇ ಅಗ್ನಿ, ಧಾವನ ಚಲನಾದಿ ಪಂಚಕಂಗಳೇ ವಾಯು, ಕಾಮ ಕ್ರೋಧಾದಿ ಪಂಚಕಂಗಳೇ ಆಕಾಶಮುಕ್ಕುಂ, ೩೯೭

## ಭೋಗ ಸಾಧನ ಸೂಕ್ಷ್ಮ ಸ್ಥೂಲಂಗಳು

ಬಳಿಕ್ಕಿಂತು ಪೇಳ್ದ ತತ್ವ ಪುರ್ಯಷ್ಟಕಮಾದ ಸೂಕ್ಷ್ಮಶರೀರ,ಭುವನಜ ಮಾದ ಸ್ಥೂಲ ದೇಹಂಗಳೊಳಗೆ ತತ್ವಂಗಳೇ ಸಮಸ್ತ ಜೀವರ್ಗೆಯುಂ, ಭೋಗಾಶ್ರಯಂಗಳಾಗಿ ಸಾಧಾರಣಂಗಳೆನಿಸಿಕೊಂಬವು. ಸೂಕ್ಷ್ಮ ಶರೀರಂಗಳೇ ಬೇರೆ ಬೇರೊಬ್ಬೊಬ್ಬ ಜೀವರ ಭೋಗಕ್ಕೆಯೇ ಸಾಧನಂಗಳಾಗಿ ಅಸಾಧಾರಣಂಗಳೆನಿಸಿಕೊಂಬವು. ಸ್ಥೂಲ ದೇಹಂಗಳೇ ಅನ್ಯೋನ್ಯ ಜೀವರ್ಗೆಯುಂ ಭೋಗ ಸಾಧನಂಗಳಾಗಿ ಸಾಧಾರಣಾಸಾಧಾರಣಂಗಳೆನಿಸಿಕೊಳುತ್ತಿರ್ಕುಂ. ೩೯೮

## ಬ್ರಹ್ಮಾಂಡಾದಿ ಲಕ್ಷಣ ಮತ್ತು ಸೃಷ್ಟಿ :

ಮತ್ತಮಾ ಬ್ರಹ್ಮಾಂಡ ಭುವನಾದಿಗಳ ಲಕ್ಷಣಮೆಂತೆನೆ : ಪಂಚೀಕರಿಸಿದ ಮೂಲ ಪೃಥ್ವೀತತ್ವದ ದಶಾಂಶದೇಕದೇಶದೊಳೊಂದುಕೋಟಿ ಯೋಜನದಳತೆಯ ದಟ್ಟದ ಸುವರ್ಣಮಯಮಾದ ಹಂಚನುಳ್ಳ,ಒಂದರ್ಬುದ ಯೋಜನ ಸ್ಥೂಲಮಾದ, ನೂರು ಕೋಟಿ ಯೋಜನ ಪ್ರಮಾಣದ ವಿಶಾಲೋನ್ನತಮಾದ, ಒಳವಳಯ

ಮಾದಂಡಾಕಾರವಪುದೇ ಬ್ರಹ್ಮಾಂಡ. ಆ ಬ್ರಹ್ಮಾಂಡವನೆ ಬ್ರಹ್ಮನು ಮಧ್ಯದಲ್ಲಿ ಸಮಾನಮಾದ ಕೊಪ್ಪರಿಗೆಯಾಕಾರದಿಂದೆರಡು ಹೋಳಾಗಿ ಮಾಡಿ, ತಾನೊಳ ಹೊಕ್ಕು ಮತ್ತೆ ಕರಂಡಗೆಯ ಮುಚ್ಚಳವನಮರ್ಚಿಸಿದಂತೆ ಮೊದಲ ಹಾಂಗೆ ದೃಢ ಮಾಗಿ ಸೇರಿಸುತ್ತದರೊಳತಿ ವಿಚಿತ್ರಮಾದ ಭುವನ ರಚನೆಗಳಂ ಮಾಡಿದನದರಿಂ ಬ್ರಹ್ಮಾಂಡವೆನಿಸಿತ್ತು. ೩೯೯

## ಬ್ರಹ್ಮಾಂಡಾಂತರ್ವಿವೇಕ :

ಆ ಬ್ರಹ್ಮಾಂಡದಡಿಯಣ ಖರ್ಪರದೊಳವಳಯದೊಳಗೆ ಘನಗಂಭೀರಮಾದ ವಾರಿ ಪೂರಿತಮಾಗಿಹುದದರ ನಟ್ಟ ನಡುವೆ ವಿಶ್ವಕರ್ಮನಿರ್ಮಿತ ದಿವ್ಯಸಿಂಹಾಸನದ ಮೇಲೆ ಜಲಸ್ತಂಭಕತ್ವದಿಂ ಮೆರೆವ ಆಧಾರ ಶಕ್ತಿಯಾದೊಡೆ. ೪೦೦

## ಆಧಾರ ಶಕ್ತಿ–ಕಮಠ–ಅಷ್ಟದಿಗ್ಗಜಗಳು

ಹಿರಣ್ಮಯ ಶರೀರದಿಂ ಏಕವಕ್ತ್ರ ತ್ರಿಲೋಚನಂಗಳಿಂ, ವರದಾಭಯ ಕಲಶೋತ್ಪಲವಾಂತ ವಾಮ ದಕ್ಷಿಣ ಕರಚತುಷ್ಟಯಂಗಳಿಂದೆಸೆದು, ಶಿವಧ್ಯಾನದಿಂ ನಿಶ್ಚಲಾತ್ಮಕಿಯಾಗಿರ್ಪಳಾ ಶಕ್ತಿಯ ಮಸ್ತಕದಲ್ಲಿ ಸೂಡಿದ ಹೊಂದಾವರೆಯಂತೆಸೆವ ದಶಕೋಟಿ ಯೋಜನದಗಲದ ಸುವರ್ಣಮಯ ಕೂರ್ಮನಿಹುದು. ಆ ಕೂರ್ಮನ ಬೆನ್ನರುಗಿನೊಳಿಂದ್ರಾದಿ ದಿಕ್ಕೆಂಟರಲ್ಲಿ ಕ್ರಮದಿಂದೈರಾವತ ಪುಂಡರೀಕ ವಾಮನ ಕುಮುದ ಅಂಜನ ಪುಷ್ಪದಂತ ಸಾರ್ವಭೌಮ ಸುಪ್ರತೀಕವೆಂಬೆಂಟು ದಿಗ್ಗಜಗಳಾದೊಡೆ, ಅಭ್ರಮು ಕಪಿಲೆ ಪಿಂಗಲೆ ಅನುಪಮೆ ತಾಮ್ರಪರ್ಣಿ ಶುಭ್ರದಂತಿ ಅಂಗನೆ ಅಂಜನಾವತಿಯೆಂಬ ತಮ್ಮ ತಮ್ಮ ಸ್ತ್ರೀಯರುಗಳೊಡನೆ ಕ್ರಮದಿಂ ಕೂಡಿ ಭೂಮಿಯುಂ ವಹಿಸಿರ್ಪವು. ೪೦೧

## ಅಷ್ಟಕುಲ ಫಣಿಗಳು-ಮಹಾಶೇಷನು

ಅವಕ್ಕೆ ಸ್ತಂಭಕತ್ವದಿಂ ಕೊರಳಂ ಬಳಸಿ ತಮ್ಮ ತಮ್ಮ ಪೆಡೆಗಳಿಂದಾ ಇಂದ್ರಾಗ್ನಿಮೊದಲಾದೆಂಟು ದಿಕ್ಕಿನ ಭೂಮಿಯಂ ಕ್ರಮದಿಂ ಹೊತ್ತು ಅನಂತ ತಕ್ಷಕ ವಾಸುಕಿ ಶಂಖಪಾಲ ಪದ್ಮ ಕರ್ಕೋಟಕ ಕ್ರೋಧ ಕಾಳಮೆಂಬಷ್ಟಕುಲ ಫಣಿಗಳಿರ್ಕುಂ. ಬಳಿಕಾ ಕೂರ್ಮನ ನಡುಬೆನ್ನಮೇಲೆ ನೆಲಸಿ ಪರಮೈಶ್ವರ್ಯ ಸಂಪನ್ನನಾಗಿ ಮೆರೆವ ಮಹಾಶೇಷನಾದೊಡೆ, ಒಂದೊಂದು ಮೂವತ್ತು ಸಾವಿರ ಯೋಜನದಗಲದ ಪೆಡೆಸಹಸ್ರಂಗಳಿಂದೊಪ್ಪಿರ್ಪನಾ ಗಜಫಣಿ ಮಹಾಶೇಷನೆಂಬಿವರೊಂದೊಂದರಾಹಾರ ಸಮಯದೊಳುಳಿದುಳಿದಿರ್ಪವೆ ಭೂಮಿಯಂ ತಳೆದಿರ್ಕುಂ. ೪೦೨

## ದಶಲೋಕೇಶ್ವರರು :

ಮತ್ತಂ ಇಂತು ಗಜಂಗಳ ಮಸ್ತಕ ಫಣಿ ಮಹಾಶೇಷಂಗಳ ಪಡೆಗಳ ಮೇಲೊಂದು ಕೋಟಿ ಯೋಜನದಳತೆಯ ದಟ್ಟಮುಳ್ಳತಿ ವಿಶಾಲಮಾದ ಸರ್ವ

ಧಾರಮಪ್ಪ ಸುವರ್ಣಮಯ ಭೂಮಿ ಕಣ್ಗೊಳಿಸುತ್ತಿಹುದು. ಅದರ ಮೇಲೆ ಮೇಲು ಕೆಳಗಿಂದ್ರಾದಿ ದಶದಿಕ್ಕುಗಳಲ್ಲಿ, ಕ್ರಮದಿಂದೆಸೆವ ಪ್ರಕ್ಷ್ನ, ಅನಂತ, ಈಶ್ವರ, ಪಿಂಗಲ, ಕಾಲ, ಕ್ರೋಧೇಶ, ಜಲದ, ಬಲದ, ಧನದ, ಶಂಕರರೆಂಬ ದಶಲೋಕೇಶ್ವರರ ಭುವನ ಮಧ್ಯದೊಳು. ೪೦೩

## ಕಾಲಾಗ್ನಿ ರುದ್ರಮೂರ್ತಿ

ಏಕಾದಶ ಭುವನವೆನಿಸಿಕೊಂಡು ಕಾಲಾಗ್ನಿರುದ್ರಭುವನವೈದು ಕೋಟಿ ಯೋಜನದಗಲದಿಂದಿಹುದದರ ಮಧ್ಯದರಮನೆಯಲ್ಲಿ, ಎರಡು ಕೋಟಿ ಯೋಜನ ದಗಲ, ಒಂದು ಕೋಟಿ ಯೋಜನದುದ್ದದಿಂ ನಾನಾರತ್ನ ಖಚಿತಮಾದ ದಿವ್ಯ ಸಿಂಹಾಸನಾಗ್ರದಲ್ಲಿ ಮೆರೆವ ಕಾಲಾಗ್ನಿ ರುದ್ರನಾದೊಡೆ ಮಹಾತೇಜೋಮಯ ನಾಗಿ ರಕ್ತವರ್ಣದೊಂದು ಕೋಟಿ ಯೋಜನ ದೀರ್ಘಶರೀರದಿಂ, ಕರಾಳವದನ ಚತುಷ್ಟಯದಿಂ, ದೀರ್ಘಸ್ಮಶೃಗಳಿಂ, ದ್ವಾದಶಾಕ್ಷಂಗಳಿಂ, ಖಡ್ಗ ಖಟ್ವಾಂಗ ಪಾಶ ಬಾಣ ವರಂಗಳನುಳ್ಳ ದಕ್ಷಿಣ ಪಂಚಹಸ್ತಂಗಳಿಂ, ಶೂಲ ಅಂಕುಶ ದಂಡ ಧನು ಅಭಯುವಾಂತ ವಾಮಕರ ಪಂಚಕಂಗಳಿಂದೆಸೆದು, ತಾನೂರ್ಧ್ವಮುಖನಾಗೆ ಜಗತ್ಸಂ ಹಾರವಾದಪುದೆಂದು ಅಧೋಮುಖನಾಗಿ, ತನಗೆ ಸಮಾನವಾದ ಕೋಟಿ ರುದ್ರರು ಗಳಿಂದಾವೃತನಾಗಿರ್ಪನಾತನ ಜ್ವಾಲೆ ದಶಕೋಟಿ ಯೋಜನಾಂತವಾಗಿ ಮೇಲಾ ವರಿಸಿಹುದದರ ಧೂಮವೈದು ಕೋಟಿ ಯೋಜನಾವಧಿಯಾಗಿ ತೀವಿರ್ಕುಂ. ೪೦೪

## ಯಮಲೋಕ

ಬಳಿಕಲ್ಲಿಂದಂ ಮೇಲೆ ಯಮರಾಜನಾಜ್ಞಾಸೀಮೆಯಾದ ಪ್ರತ್ಯೇಕಮೊಂಭತ್ತು ಯೋಜನದಂತರಾಳವನುಳ್ಳ, ಮೂವತ್ತಮೂರು ಘಟಕಂಗಳ ಮಧ್ಯದಲೊಂದು ಲಕ್ಷ ಯೋಜನಾವಕಾಶಮಪ್ಪ, ಪಾಪಾತ್ಮಕ ವೇದನೆಗೋಸುಗವಜನಿಂ ಕಲ್ಪಿತಮಾದ ನರಕಲೋಕವಿಹುದಲ್ಲಿ, ರೌರವಾದಿ ಮೂವತ್ತೆರಡು ಮುಖ್ಯ ನರಕಂಗಳಿರ್ಪವವಾ ವೆಂದೊಡೆ ನಾಲ್ಕು ಭಾಗದಿಂದೆಂಟೆಂಟೆನಿಸಿ, ನರಕ, ಮಹಾನರಕ,ರಾಜನರಕ, ರಾಜ ರಾಜೇಶ್ವರನರಕಂಗಳೆನಿಸಿಪ್ಪವವರಲ್ಲಿ. ೪೦೫

## ನರಕಾಷ್ಟಕ

ರೌರವ, ಧ್ವಾಂತ, ಶೀತ, ಉಷ್ಣ, ಸಂತಾಪ, ಅಂಬುಜ, ಮಹಾಂಬುಜ, ಕಾಲಸೂತ್ರಂಗಳೆಂಬವೇ ನರಕಂಗಳು. ೪೦೬

## ಮಹಾ ನರಕಾಷ್ಟಕ

ಸೂಚಿಮುಖ, ಕಾಲಖಡ್ಗ, ಕ್ಷುರಧಾರೆ, ಅಂಬರೀಷಕ, ತಪ್ತಾಂಗಾರ, ದಾಹ, ಮಹಾದಾಹ, ಸಂತಾಪಂಗಳೆಂಬವೇ ಮಹಾನರಕಂಗಳು. ೪೦೭

ಅಷ್ಟ ರಾಜನರಕಂಗಳು :

ಲಾಕ್ಷಾಪ್ರಲೇಪ, ಮಾಂಸಾದ, ನಿರುಚ್ಛ್ವಾಸ, ಸನಿಚ್ಛ್ವಾಸ, ಯುಗಾದ್ರಿ ಶಾಲ್ಮಲಿ, ಲೋಹಪ್ರದೀಪ, ಕ್ಷುತ್ಪಿಪಾಸಕಕ್ರಿಮಿಕುಲಂಗಳೆಂಬವೇ ರಾಜನರಕಂಗಳು. ೪೦೮

ರಾಜರಾಜೇಶ್ವರ ನರಕಾಷ್ಟಕಂಗಳು:

ಲೋಹಸ್ತಂಭ, ವಿಣ್ಮೂತ್ರ, ವೈತರಣೀನದಿ, ತಾಮಿಶ್ರ, ಅಂಧತಾಮಿಶ್ರ ಕುಂಭೀಪಾಕ, ಮಹಾರೌರವ, ಮಹಾಪಥಾನುಗವೀಚಿಗಳೆಂಬವೆ ರಾಜರಾಜೇಶ್ವರ ನರಕಂಗಳಕ್ಕುಂ. ೪೦೯

ರಾಜ ಮಂತ್ರಿ ನರಕಂಗಳು:

ಮತ್ತಮಾ ನರಕಂಗಳಲ್ಲಿ ರೌರವ ಮಹಾರೌರವ ತಮ ಶೀತ ಉಷ್ಣಂಗಳೆಂಬವೈದು ಮಂತ್ರಿನರಕಗಳಿಂದಾವೃತವಾಗಿ ಘೋರವೆಂಬರಸು ನರಕವಿಹುದು.
ಸುದಮನ, ಸತೀಕ್ಷ್ಣ, ಪದ್ಮ, ಸಂಜೀವನ, ಶತಮಹಾಸನವೆಂಬೈದು ಮಂತ್ರಿ ನರಕಂಗಳಿಂ ಪರಿವೇಷ್ಟಿಸಿ ಸುಘೋರವೆಂಬರಸು ನರಕವಿಹುದು,
ವಿಲೋಮ, ಸುಭೀಮ, ಕಟಂಕಟ, ತೀವ್ರವೇಗ, ಕರಾಳವೆಂಬೈದು ಮಂತ್ರಿ ನರಕಂಗಳಿಂ ಬಳಸಿ ಅತಿಘೋರವೆಂಬರಸು ನರಕವಿಹುದು.
ವಿಕರಾಳ, ಪ್ರಕಂಪ, ಪದ್ಮ, ಸುವಕ್ತ್ರ, ಕಾಲವೆಂಬೈದು ಮಂತ್ರಿನರಕಂಗಳಿಂ ಕೂಡಿ ಅಘೋರವೆಂಬರಸು ನರಕವಿಹುದು.
ಪ್ರಮರ್ದನ, ಸೂಚೀಮುಖ, ಅಸುನೇಮಿ, ಸುಪೀಡನ, ಬಾಧಕವೆಂಬೈದು ಮಂತ್ರಿನರಕಂಗಳಿಂ ಪರಿವೇಷ್ಟಿಸಿ ಘೋರವೆಂಬರಸುನರಕವಿಹುದು.
ಕುಂಭೀಪಾಕ, ಸುಪಾಕ, ಪ್ರಮುಖ, ದಾರುಣ, ಅಂಗಾರಕವೆಂಬೈದು ಮಂತ್ರಿ ನರಕಂಗಳಿಂದಾವರಿಸಿ ತರಳತಾರವೆಂಬರಸು ನರಕವಿಹುದು.
ದಹನ, ಅಶ್ರುಪ್ರದ, ತೀಕ್ಷ್ಣಾಯಸ್ತುಂಡ, ಶಕುನಿ, ಪಾಯುಹ್ರದ, ಮಹಾಸುವರ್ತಕವೆಂಬವೈದು ಮಂತ್ರಿನರಕಂಗಳೊಡಗೂಡಿ, ಭಯಾನಕವೆಂಬರಸುನರಕವಿಹುದು.
ಕ್ರತು, ಪೂತಿಮಾಂಸ, ತಪ್ತಜತುಲೇಪ, ದ್ರವತ್ರಪು, ಉಚ್ಛ್ವಾಸವೆಂಬೈದು ಮಂತ್ರಿನರಕಂಗಳಿಂದೊಂದಿ ಕಾಳರಾತ್ರಿಯೆಂಬರಸು ನರಕವಿಹುದು.
ನಿರುಚ್ಛ್ವಾಸ, ಸುಧೀರ್ಘ, ಕೂಟಶಾಲ್ಮಲಿ, ಅರಿಷ್ಟ, ಸುಮನವೆಂಬೈದು ಮಂತ್ರಿ ನರಕಂಗಳೊಡನೆ ಭಯೋತ್ಕಟವೆಂಬರಸು ನರಕವಿಹುದು.
ನಾದ, ಪ್ರವಾಹ, ಖುಕ್ಷ, ಸುಪ್ರವಾಹ, ಮೋಷವೆಂಬವೈದು ಮಂತ್ರಿನರಕಂಗಳ ಮಧ್ಯದಲ್ಲಿ ಚಂಡವೆಂಬರಸು ನರಕವಿಹುದು.

ಸಕಲ, ಶಲ್ಯ, ಸಿಂಹ, ಗಜಾನನ, ವ್ಯಾಘ್ರವೆಂಬವೈದು ಮಂತ್ರಿನರಕಂಗಳ ಮೇಳದಲ್ಲಿ ಮಹಾಚಂಡವೇಂಬರಸು ನರಕವಿಹುದು.
ಶುನಕ, ಸೂಕರ, ಅಜ, ಮಹಿಷ, ಆವಿಳಕವೆಂಬವೈದು ಮಂತ್ರಿ ನರಕಂಗಳ ನಡುವೆ ಚಂಡಕೋಲಾಹಳವೆಂಬರಸು ನರಕವಿಹುದು.
ಉಗ್ರ ವೃಕಾಸ್ಯ ಗ್ರಾಹ ಕುಂಭಿ ನಕ್ರವೆಂಬೈದು ಮಂತ್ರಿನರಕಂಗಳ ಮೇಳದಿಂ ಪ್ರಚಂಡವೆಂಬರಸು ನರಕವಿಹುದು.
ಸರ್ಪ, ಕೂರ್ಮ, ವಾಯಸ, ಗೃಧ್ರ ಉಲೂಕವೆಂಬವೈದು ಮಂತ್ರಿನರಕಂಗಳಿಂ ಸಂಯೋಗಿಸಿ ಪದ್ಮವೆಂಬರಸು ನರಕವಿಹುದು.
ಜಲೂಕ, ಮಹಾವ್ಯಾಘ್ರ, ಮರ್ಕಟ, ಕರ್ಕಟ ಗಂಡಕವೆಂಬವೈದು ಮಂತ್ರಿ ನರಕಂಗಳ ಸಹಾಯದಿಂ ಮಹಾಪದ್ಮವೆಂಬರಸು ನರಕವಿಹುದು.
ಪೂತಿವಕ್ತ್ರ, ರಕ್ತ, ಪೂತಿ, ಮೃತ್ತಿಕೆ ಕಣಧೂಮವೆಂಬವೈದು ಮಂತ್ರಿನರಕಂಗಳಿಂ ಬೆರೆದು ಭೀಮವೆಂಬರಸು ನರಕವಿಹುದು.
ತುಷಾಗ್ನಿ, ಕ್ಲಿಮಿಸಂಘ, ಅಮೇಧ್ಯ, ಅಪ್ರತಿಷ್ಠ, ಮೂತ್ರವೆಂಬವೈದು ಮಂತ್ರಿ ನರಕಂಗಳಿಂ ಸುತ್ತಿ ಭೀಮಭೀಷಣವೆಂಬರಸುನರಕವಿಹುದು.
ಮಲಭಕ್ಷಣ, ಆತ್ಮಭಕ್ಷಣ, ರುಧಿರಾಂಬುಭಕ್ಷಣ, ಸರ್ವಭಕ್ಷಣ ಸುಧಾರಣವೆಂಬವೈದು ಮಂತ್ರಿನರಕಂಗಳಿಂ ಕಲಿತವಾಗಿ ಕರಾಳವೆಂಬರಸು ನರಕವಿಹುದು.
ಅಂಬರೀಷ, ಕಟ, ತಪ್ತಲೋಹಶಯನ, ವೈತರಣಿನದಿ ಕಷ್ಟವೆಂಬವೈದು ಮಂತ್ರಿ ನರಕಂಗಳಿಂ ಯುಕ್ತವಾಗಿ ವಜ್ರವೆಂಬರಸು ನರಕವಿಹುದು.
ಸಂಕಟ, ವಿಸಂಕಟ, ಸುವಿಶಾಲ, ಕಟ, ವಿಕಟವೆಂಬವೈದು ಮಂತ್ರಿನರಕಂಗಳಿಂ ಮೋಹಿಸಿ ವಿಕರಾಳವೆಂಬರಸು ನರಕವಿಹುದು.

ಅಸಿತಾಳವನ, ಅಸಿತಯಂತ್ರ, ಪ್ರಪೀಡನ, ತಿಲಯಂತ್ರ, ಇಕ್ಷುಯಂತ್ರವೆಂಬವೈದು ಮಂತ್ರಿನರಕಂಗಳಿಂ ಮೆರೆದು ತ್ರಿಕೋಣವೆಂಬರಸು ನರಕವಿಹುದು.
ಮಹಾಚೂರ್ಣ, ದಲಾಸಂಚೂರ್ಣ, ಕೂಟವೇಷ, ಪ್ರಮರ್ದನತಪ್ತಲೋಹಮಯ ತಪ್ತತೈಲಮುಖವೆಂಬವೈದು ಮಂತ್ರಿನರಕಂಗಳ ಸಹಚರ್ಯದಿಂ ಪಂಚಕೋಣವೆಂಬರಸುನರಕವಿಹುದು.

ಪರ್ವತ, ಯುಗಳಪರ್ವತ, ಕ್ಷುರಧಾರೆ, ಮೂತ್ರಕೂಪ, ವಿಷ್ಟಾಕೂಪವೆಂಬವೈದು ಮಂತ್ರಿ ನರಕಂಗಳಾಧಿಪತ್ಯದಿಂ ಸುದೀರ್ಘವೆಂಬರಸು ನರಕವಿಹುದು.
ಕ್ಷಾರದಕೂಪ, ಅಂಧಕೂಪ, ಶಾತನಮುಸಲ, ಉಲೂಖಲಯಂತ್ರ, ಶಿಲಾಶಕಟವೆಂಬವೈದು ಮಂತ್ರಿನರಕಂಗಳಿಂದೊಪ್ಪಿ ವರ್ತುಳವೆಂಬರಸು ನರಕವಿಹುದು.
ಲಾಂಗೂಲ, ತಾಳಪತ್ರ, ಅಸಿಗಹನ, ಮಶಕಮಂದಿರ, ಮೋಹನವೆಂಬವೈದು ಮಂತ್ರಿನರಕಂಗಳಿಂದಲಂಕೃತವಾಗಿ ಸಪ್ತಭೌಮವೆಂಬರಸು ನರಕವಿಹುದು.

ಅಸ್ತಿಭಂಗ, ತಪ್ತಶೂಲಮಯ, ತಪ್ತಗೂಢ, ಬಹುದುಃಖಜ, ಮಹಾದುಃಖ ವೆಂಬವೈದು ಮಂತ್ರಿನರಕಂಗಳಿಂ ರಂಜಿಸಿ ಅಷ್ಟಭೌಮವೆಂಬರಸು ನರಕವಿಹುದು.
ಶಾಲ್ಮಲ, ಶಕಲ, ಹಾಳಾಹಳ, ವಿರೂಪ, ಸ್ವರೂಪವೆಂಬವೈದು ಮಂತ್ರಿನರಕಂ ಗಳಿಂದಾಢ್ಯಮಾಗಿ ದೀಪ್ತವೆಂಬರಸು ನರಕವಿಹುದು.
ಯಮಾನುಗ, ಏಕಪಾದ, ದ್ವಿಪಾದ,ತೀವ್ರ, ಅಚಿರಂತನವೆಂಬವೈದು ಮಂತ್ರಿನರಕಂ ಗಳಿಂ ಸಂಪನ್ನಮಾಗಿ ಮಾಯಾಖ್ಯವೆಂಬರಸು ನರಕವಿಹುದು.
ಇಂತಿಪ್ಪತ್ತೆಂಟು ಅರಸು ನರಕಂಗಳಾದೊಡೊಂದೊಂದು ಕೋಟಿನಾಯಕ ನರಕಂ ಗಳಿಂದನೇಕ ಪರಿವಾರ ನರಕಂಗಳಿಂದಾವೃತಮಾಗಿ ತೀವ್ರವೇದನಾರೂಪಂಗಳಾ ಗಿಹವೆಂದು ನಿಶ್ಚಿತಮುಕ್ಕುಂ. ೪೧೦

ಪಾಪ ಸ್ವರೂಪ :

ಮತ್ತಮಾ ನರಕ ಪ್ರಾಪ್ತಿಗೆ ಹೇತುಭೂತಮಾದ ಪಾಪವಾದೊಡೆ. ಬ್ರಹ್ಮ ಹತ್ಯವೆಂಬ ಶಿರಸ್ಸಿನಿಂ ಸುವರ್ಣಸ್ತೇಯವೆಂಬ ಭುಜದ್ವಯದಿಂ, ಸುರಾಪಾನ ವೆಂಬ ಹೃತ್ಪ್ರದೇಶದಿಂ, ಗುರುತಲ್ಪಗಮನವೆಂಬ ಜಘನಯುಗದಿಂ, ಪಾತಕವೆಂಬಂಗ ಪ್ರತ್ಯಂಗ ಸಂಗದಿಂ, ಉಪಪಾತಕಾದಿಗಳೆಂಬ ರೋಮಂಗಳಿಂ, ಕಾರ್ಗತ್ತಲೆಯಂತಪ್ಪ ಕಾರೊಡಲಿಂ, ಭಯಂಕರ ವದನದಿಂ,ಕೆಂಡದಂತಿರ್ಪ ಕಂಗಳಿಂ, ಜುಂಜುವೆತ್ತ ಕರ್ಕಶ ಮಾದ ಮೀಸೆಗಳಿಂ, ಹಲಗೆ ಖಡ್ಗವಾಂತ ಕರಯುಗದಿಂ,ಭಯಾನಕ ಮೂರ್ತಿಯಾಗಿ ಜೀವರ ವಾಮಕುಕ್ಷಿಯಲ್ಲಿರ್ದು. ೪೧೧

ದಶವಿಧಪಾತಕಗಳು :

ಮನೋವಾಕ್ಕಾಯವೆಂಬ ತ್ರಿಕರಣದಲ್ಲಿ ಮಹಾಪಾತಕವೆಂದು, ಅತಿಪಾತಕ ವೆಂದು, ಪ್ರಾಸಂಗಿಕವೆಂದು, ಪಾತಕವೆಂದು, ಉಪಪಾತಕವೆಂದು, ಜಾತಿ ಭ್ರಂಶಕವೆಂದು, ಸಂಕೀರ್ಣಕವೆಂದು,ಅಪಾತ್ರೀಕರಣವೆಂದು,ಮಲಾವಹವೆಂದು ಪ್ರಕೀರ್ಣಕವೆಂದು, ದಶವಿಧಮಾದ ಪಾತಕಂಗಳನುದ್ಘೋಷಿಸುತಿರ್ಕುಂ. ೪೧೨

ಪಂಚ ಮಹಾಪಾತಕ :

ಮತ್ತಮವರಲ್ಲಿ ಬ್ರಹ್ಮಹತ್ಯ, ಸುರಾಪಾನ, ಸುವರ್ಣಸ್ತೇಯ, ಗುರುತಲ್ಪ ಗಮನ ವತ್ಸರೈಕ ತತ್ಸಂಯೋಗವೆಂಬವೆ ಮಹಾಪಾತಕಂಗಳು. ೪೧೩

ಅತಿಪಾತಕಂಗಳು :

ಮಾತೃ-ಪುತ್ರಿಯರ ಗಮನ, ಸೊಸೆ-ಅಗ್ರಜೆಯರಗಮನ, ಬ್ರಹ್ಮವಿಷ್ಣ್ವಾದಿ ಮೂರ್ತಿ ಸ್ಥಾಪನಪತನಾದಿಗಳೇ ಅತಿಪಾತಕಂಗಳು ೪೧೪

ಪ್ರಾಸಂಗಿಕ ಪಾತಕಂಗಳು :

ಕ್ಷತ್ರಿಯ, ಸೂತಕಿ, ಗರ್ಭಿಣಿ, ಬಂಧುಗಳೆಂಬಿವರವಧೆ, ದೇವಬ್ರಾಹ್ಮಣ, ತಪಸ್ವಿಗಳ ಭೂಮಿಯಹರಣ, ಅತ್ತೆ, ರಾಜಸ್ತ್ರೀಯರ ಗಮನ, ಕೂಟಸಾಕ್ಷಿತ್ವಾದಿಗಳೆ ಪ್ರಾಸಂಗಿಕವೆಂಬ ಪಾತಕಂಗಳು. ೪೧೫

ಸಾಧಾರಣ ಪ್ರಬಲ ಪಾತಕಂಗಳು :

ಮಾತಾ ಸಹೋದರಿ, ಮಾತಾ ಸಖಿ, ಸುತೆ, ಅತ್ತಿಗೆ, ಸೊಸೆಯರ ಗಮನ, ಭಸ್ಮಧಾರಣವನುಳಿದು ಊರ್ಧ್ವಪುಂಡ್ರಾಂಕ ಧಾರಣ, ಅಂಕುಶ ಗದಾದಂಡ ಶಂಖ ಚಕ್ರ ಶರೀರಾಂಕನಾದಿಗಳೇ ಪಾತಕಂಗಳು. ೪೧೬

ಮುಖ್ಯೋಪ ಪಾತಕಂಗಳು :

ಆಚಾರ್ಯ, ಋತ್ವಿಕ್ಕು, ಮಿತ್ರರ ಸ್ತ್ರೀಯರ ಗಮನ, ಸ್ವಸ್ತ್ರೀಸಖೀಗಮನ, ಸಗೋತ್ರಕನ್ನಿಕಾಗಮನ, ತನ್ನಮರೆಹೊಕ್ಕಸ್ತ್ರೀಯರ ಗಮನ, ಆದಿತ್ಯ ದುರ್ಗಾದಿ ದೇವತಾಪತನ, ಪಾಷಾಂಡಿಗಳೊಡತಣ ಸಂಬಂಧಾದಿಗಳೇ ಮುಖ್ಯೋಪಪಾತ ಕಂಗಳು. ೪೧೭

ಗುಣೋಪಪಾತಕಂಗಳು :

ಪುಸಿ, ಕೊಂಡೆಯ ಗುರುನಿರಾಕರಣ, ವೇದನಿಂದೆ, ವೇದಾಧ್ಯಯನತ್ಯಾಗ, ಯಜ್ಞತ್ಯಾಗ, ಪುತ್ರೋತ್ಪತ್ತಿತ್ಯಾಗ, ಪಿತೃಮಾತೃ ಸಹೋದರ ಸ್ವಸ್ತ್ರೀಯರಪರಿತ್ಯಾಗ ಅಭಕ್ಷ್ಯಾಭಕ್ಷಣ, ಪರದ್ರವ್ಯಾಪಹರಣ, ಪರದಾರಾಗಮನ, ಗುಲ್ಮಲತಾ ವನಛೇದನ, ಅಭಿಚಾರಕ್ರಿಯೆ, ಬ್ರಹ್ಮಚರ್ಯವರ್ಜನ, ಕುಶಾಸ್ತ್ರಾಭ್ಯಾಸ, ಕುಶೀಲಕುಮತ ಗ್ರಹಣಾದಿಗಳೇ ಗುಣೋಪಪಾತಕಂಗಳು. ೪೧೮

ಜಾತಿಭ್ರಂಶಕ ಪಾತಕಂಗಳು :

ಸುರೆಯವಾಸನೆ, ಹೆಣದ ದುರ್ಗಂಧ, ಮಹಿಷೀಪುರುಷ ಮೈಥುನಾದಿಗಳೇ ಜಾತಿಭ್ರಂಶಕಪಾತಕಂಗಳು. ೪೧೯

ಸಂಕೀರ್ಣ ಪಾತಕಂಗಳು :

ಗ್ರಾಮಾರಣ್ಯದ ಪಶು ಮೃಗಹಿಂಸಾದಿಗಳೇ ಸಂಕೀರ್ಣಪಾತಕಂಗಳು ೪೨೦

ಅಪಾತ್ರಕರಣ ಪಾತಕಂಗಳು :

ನಿಂದಿತರ ದ್ರವ್ಯಗ್ರಹಣ, ನಿಂದಿತರಿಗನ್ನದಾನ, ಪುಸಿದುಮಾಡುವ ವ್ಯವಹಾರ, ಅದೀಕ್ಷಿತ ಶೂದ್ರರ ವೇದಾಧ್ಯಯನಾದಿಗಳೇ ಅಪಾತ್ರೀಕರಣವೆಂಬ ಪಾತಕಂಗಳು ೪೨೧

### ಮಲಾವಹ ಪಾತಕಂಗಳು :

ವನ ತಟಾಕ ಸ್ಥಲಾದಿಗಳಲ್ಲಿರ್ದ ಪಕ್ಷಿಘಾತಕತನ, ನಿಷಿದ್ಧ ಸೊಂಕಿದನ್ನ ಭಕ್ಷಣಾದಿಗಳೇ ಮಲಾವಹನೆಂಬ ಪಾತಕಂಗಳು. ೪೨೨

### ಪ್ರಕೀರ್ಣ ಪಾತಂಕಗಳು :

ಇಂತು ಪೇಳದುಳಿದ ಸಕಲ ಪಾತಕಂಗಳೇ ಪ್ರಕೀರ್ಣನೆಂಬ ಪಾತಕಂಗಳು. ೪೨೩

### ಮರಣ ಸೂಚನೆಗಳು :

ಮತ್ತಮಾ ಪಾತಕಂಗಳತಿ ವಿಶೇಷಮಾಗಲಿಹದಲ್ಲಿಯೆ ಮೂರುವರ್ಷ ಮೂರು ತಿಂಗಳು ಮೂರುಪಕ್ಷ ಮೂರುದಿನಂಗಳೊಳಗೆ ಫಲಿಸಿ ಮಹಾದುಃಖಂಗಳನೀವುತ್ತಿಹವು. ಅಲ್ಲದೆ ಮರಣವಾದಮೇಲೆ ನರಕಬಾಧೆಗಳಂ ಕೊಡುತ್ತಿರ್ಪವಾಗಿ, ಜನಿಸಿದಾತಂಗೆ ಮರಣ ತಪ್ಪದಾದಕಾರಣ ಆ ಮರಣಸೂಚನೆಗಳೆಂತೆಂದೊಡೆ :

ಧ್ರುವನು ಅರುಂಧತಿ ಚಂದ್ರಛಾಯೆ ಮಹಾಪಥಂಗಳಂ ಕಾಣದಿರ್ದೊಡೊಂದು ವರ್ಷಕ್ಕೆ ಮೃತಿ. ರಶ್ಮಿರಹಿತಮಾಗಿ ಸೂರ್ಯನಂ ರಶ್ಮಿಯುಕ್ತಮಾಗಿ ಪಾವಕನಂ ಕಂಡೊಡೆ ಹನ್ನೊಂದು ತಿಂಗಳಿಗೆ ಮೃತ್ಯು. ಸ್ವಪ್ನದಲ್ಲಾಗಲಿ ಪ್ರತ್ಯಕ್ಷಮಾಗಲಿ ಸುವರ್ಣರಜತಾದಿಗಳ ವಮನವಾಗೆ ಹತ್ತುತಿಂಗಳಬಾಳುವೆ. ಭೂತಪ್ರೇತ ಪಿಶಾಚ ಗಂಧರ್ವನಗರ ರಕ್ತವರ್ಣದ ದ್ರುಮಾದಿಗಳಂ ಕಂಡೊಡೊಂಭತ್ತುತಿಂಗಳ ಬದುಕು. ಅಕಸ್ಮಿಕದಿಂ ತನ್ನನತಿ ಸ್ಥೂಲನಾಗಿ ಅತಿಕೃಶನಾಗಿ ಅತಿಕೃಷ್ಣವರ್ಣಮಯನಾಗಿ ಕಂಡೊಡೆಂಟುತಿಂಗಳಸ್ಥಿತಿ. ಮಳಲಲ್ಲಾಗಲಿ ಕೆಸರಲ್ಲಾಗಲಿ ತನ್ನಹೆಜ್ಜೆಯಹಿಂದಾಗಲಿ ಮುಂದಾಗಲಿ ಅರ್ಧವೇತೋರಿದೊಡೇಳು ತಿಂಗಳಿಗೆ ದೇಹದಳಿವು. ಕಾಗೆ ಗೂಗೆ ಕಪೋತಾದಿ ಪಕ್ಷಿಗಳು ತನ್ನಮಸ್ತಕದ ಮೇಲೆ ಕುಳ್ಳಿರಲಾರು ತಿಂಗಳಿಗೆ ಪಂಚತ್ವವಹುದು. ಮಳಲ ಮಳೆ ತನ್ನಮೇಲೆ ಕರೆವುದಂ, ತನ್ನ ನೆಳಲಲ್ಲಿ ಕರಚರಣ ವಿಕೃತಿ ಮೊದಲಾದವಂ ಕಂಡೊಡೈದು ತಿಂಗಳು ನಾಲ್ಕು ತಿಂಗಳಿಗೆ ನಿಧನವಹುದು. ದಕ್ಷಿಣ ದಿಕ್ಕಿನಲ್ಲಿ ಮುಗಿಲಿಲ್ಲದೆ ಮಿಂಚನು, ಉದಕದೊಳಿಂದ್ರಚಾಪಮಂ ಕಂಡೊಡೆ ಮೂರು ತಿಂಗಳೆರಡು ತಿಂಗಳೊಳಗೆ ನಾಶವಹುದು. ನಿರ್ಮಲದರ್ಪಣದಲ್ಲಿ ತನ್ನನು ಶಿರವಿಲ್ಲದಾತನಾಗಿ ತಾನೆಯಾದೊಡಂ ಅನ್ಯಪುರುಷರಾದೊಡಂ ಕಂಡೊಡೊಂದು ತಿಂಗಳಿಗೆ ಕಾಲ ಭೀತಿ. ತನ್ನದೇಹವು ವಸ್ತುಗಂಧಮಾಗಿ, ಶವಗಂಧಮಾಗಿ, ನಿಂಬಗಂಧಮಾಗಿ ತೋರೆ ಮಾಸಾರ್ಧಕ್ಕೆ ಪ್ರಾಣತ್ಯಾಗವಹುದು. ಎದೆಯೊಳಗಿ ಸದಾಕಂಪನಂ ಪುಟ್ಟಿದೊಡೆ ಹತ್ತುದಿನಕ್ಕೆ ಅಸುವಿಯೋಗವಹುದು.

ಸ್ವಪ್ನದಲ್ಲಿ ಕರಡಿಕಪಿಗಳೊಡಗೂಡಿ ಪಥದಲ್ಲಿ ತಾನು ದಕ್ಷಿಣ ದಿಙ್ಮುಖನಾಗಿ ಪೋಪುದಂ ಕಂಡಡೆ ಮರಣ ಸಮೀಪವಹುದು. ಕೃಷ್ಣಾಂಬರಧರರಾದ ಸ್ತ್ರೀಪುರುಷ

ರೊಡಗೂಡಿ ತಾನು ದಕ್ಷಿಣದೆಸೆಗಾಗಿ ಸ್ವಪ್ನದಲ್ಲಿ ಗಮಿಸೆ ಶೀಘ್ರದಲ್ಲಿ ಮೃತ್ಯು. ಸ್ವಪ್ನದಲ್ಲಿ ತನ್ನನು ಕೃಷ್ಣಾಂಬರಧರನಾಗಿ ನೀಲಛತ್ರವಿಡಿದು ದಿಗಂಬರನಾಗಾದರೂ ಕಂಡೊಡೆ ಮೃತಿ ತ್ವರಿತವಹುದು ಪಗಲಲ್ಲಿ ಬಹುನಕ್ಷತ್ರಂಗಳು, ರಾತ್ರಿಯೊಳಿಂದ್ರ ಚಾಪಮಂ, ರಕ್ತವರ್ಣಮಾಗಿ ಚಂದ್ರಮನಂ, ಕೃಷ್ಣವರ್ಣಮಾಗಿ ಸೂರ್ಯನಂ ಕಂಡೊಡೆ ಮೃತ್ಯುಸಮೀಪವಹದು. ಸ್ವಪ್ನದಲ್ಲಿ ಕೃಷ್ಣವರ್ಣದ ಬೋಳುದಲೆಯ ಪುರುಷರಿಂ ಕಲ್ಗುಂಡುಗಳಿಂ ತಾನು ಬಾಧೆವಡುವುದಂ ಕಂಡೊಡೆ ಮರಣಂ ತ್ವರಿತವಹುದು. ಸೂರ್ಯೋದಯದಲ್ಲಿ ತನ್ನನು ಜಂಬುಕಂ ಧ್ವನಿಗೆಯ್ಯುತ್ತೆ ಬಂದಡಸೆ ಶ್ರೀಘ್ರದಲ್ಲಿಯೇ ಮೃತ್ಯು. ಸ್ವಪ್ನದಲ್ಲಿ ತಾನು ಮುಕ್ತಕೇಶನಾಗಿ ಪಾಡುತ್ತಾಡುತ್ತೆ ದಕ್ಷಿಣ ದಿಕ್ಕಿಗೆಯ್ಯುತ್ತಿಹುದಂ ಕಂಡೊಡೆ ಮೃತ್ಯುಸಮೀಪವಹುದು. ಕನಸಿನಲ್ಲಿ ಶ್ವೇತವರ್ಣದ ಗಜಾದಿಗಳಂ ತೆಂಕದಿಕ್ಕಿನಲ್ಲಿ ಕಂಡೊಡೆ ಮರಣಂ ತಳುವದಹುದು. ಒಂಟೆ ಗಾರ್ದಭಂಗಳೊಡಗೂಡಿ ರಥಾರೂಢನಾಗಿ ಕನಸಿನಲ್ಲಿ ತಾನು ತೆಂಕದೆಸೆಗೆ ಪೋಪುದಂ ಕಂಡೊಡೆ ಶೀಘ್ರದಲ್ಲಿ ತನುಕ್ಷಯುವಹುದು. ಸ್ವಪ್ನದಲ್ಲಿ ಕುಳಿಯಲ್ಲಿ ಅಗ್ನಿಯಲ್ಲಿ ತಾನು ಬೀಳ್ವುದಂ ಕಂಡೊಡೆ ಸಾವು ತಳುವಿಲ್ಲವೆಂ (ಬುದಾಯಾ ಭಾವನಾರೂಪಗತಿಗಳಪ್ಪವೆಂದರಿದು) ಬಿವುವೊದಲಾದ ಮರಣ ಸೂಚನೆಗಳಂ ಸೂತಸಂಹಿತೆ ಮೊದಲಾದವರಲ್ಲಿ ಪೇಳಲ್ಪಟ್ಟಿರ್ಕುಂ. ೪೨೪

ಬಳಿಕ ಸ್ವರಭೇದದಿಂದಾಯುಷ್ಯ ಪ್ರಮಾಣವನರಿವಕ್ರಮ :

ಈಡ ಪಿಂಗಳವೆಂಬೆರಡುನಾಳಂಗಳು,ಆ ಒಂದೊಂದು ನಾಳದಲ್ಲಿ ಪೃಥ್ವಿಸ್ವರ,ಅಪ್ಪುಸ್ವರ ತೇಜಸ್ವರ, ವಾಯುಸ್ವರ, ಆಕಾಶಸ್ವರ ಇಂತೀ ಪಂಚಸ್ವರಂಗಳುಒಂದೊಂದು ನಾಳದಲ್ಲಿ ಐದೈದು ಘಳಿಗೆ ಚರಿಸುತ್ತಿಹವು. ಇದು ಶತವರುಷದ ಆಯುಷ್ಯಪ್ರಮಾಣುವಿನ ಕಟ್ಟಳೆ. ಒಂದೊಂದು ನಾಳದಲ್ಲಿ ಈ ಸ್ವರವು ವಿಶೇಷವಾಗಿ ನಡೆಯಲು ಆಯುಷ್ಯವು ಕ್ಷಯುವಾಗಿಬರ್ಪುದು ಅದು ಹೇಗೆಂದೊಡೆ: ಐದುಘಳಿಗೆ ನಡೆದೊಡೆ ನೂರಯಿಪ್ಪತ್ತು ವರ್ಷದಾಯುಷ್ಯ. ಆರುಘಳಿಗೆ ನಡೆದೊಡೆ ನೂರುವರ್ಷದಾಯುಷ್ಯ, ಏಳುಘಳಿಗೆ ನಡೆದೊಡೆ ಎಂಭತ್ತುವರ್ಷದಾಯುಷ್ಯ ಎಂಟುಘಳಿಗೆ ನಡೆದೊಡೆ ಅರವತ್ತುವರ್ಷದಾಯುಷ್ಯ. ಹತ್ತುಘಳಿಗೆ ನಡೆದೊಡೆ ಐವತ್ತುವರ್ಷದಾಯುಷ್ಯ. ಹದಿನೈದುಘಳಿಗೆ ನಡೆದೊಡೆ ನಾಲ್ವತ್ತುವರ್ಷದಾಯುಷ್ಯ. ಇಪ್ಪತ್ತುಘಳಿಗೆ ನಡೆದೊಡೆ ಮೂವತ್ತು ವರ್ಷದಾಯುಷ್ಯ, ಮೂವತ್ತು ಘಳಿಗೆ ನಡೆದೊಡೆ ಹದಿನೈದು ವರ್ಷದಾಯುಷ್ಯ, ನಾಲ್ವತ್ತು ಘಳಿಗೆ ನಡೆದೊಡೆ ಹತ್ತುವರ್ಷದಾಯುಷ್ಯ. ಐವತ್ತುಘಳಿಗೆ ನಡೆದೊಡೆ ಐದುವರ್ಷದಾಯುಷ್ಯ. ದಿವರಾತ್ರಿ ಒಂದೇ ನಾಳದಲ್ಲಿ ನಡೆದೊಡೆ ಆರುತಿಂಗಳ ಆಯುಷ್ಯ. ಈಯೋಪಾದಿಯಲ್ಲಿ ಆಯುಷ್ಯಕ್ಷಯುವೆಂದರಿವುದು. ೪೨೫

## ಸ್ವರಭೇದದಿಂ ವ್ಯಾಧಿ ಮರಣ ಸೂಚನೆ :

ಸೂರ್ಯನಾಡಿ ಅಹೋರಾತ್ರಿ ಐದುದಿನ ನಡೆದೊಡೆ ಮೂರುತಿಂಗಳ ರೋಗ ಹಾನಿ,ಮರಣ. ಹತ್ತುದಿನ ಅಡಸಿ ನಡೆದೊಡೆ ತಿಂಗಳಿಗೆ ಹಿಂದೆ ಹೇಳಿದಹಾಗೆ ಅದೀ ತೆಂದರಿವುದು. ಹದಿನಾಲ್ಕು ದಿನ ಅಡಸಿ ನಡೆದೊಡೆ ಹದಿನೈದುದಿನಕ್ಕೆ ಹೊಲ್ಲಹಂ ತೋರಿತ್ತೆಂದರಿವುದು. ಇಂತು ಸೂರ್ಯನಾಡಿ ಪ್ರಕರಣಂ ಸಮಾಪ್ತಂ.

ಬಳಿಕ ಚಂದ್ರನಾಡಿ ಐದುದಿನ ನಡೆದೊಡೆ ಒಂದುವರ್ಷಕ್ಕೆ ಹಾನಿ, ರೋಗ ಹುಟ್ಟಿತ್ತೆಂದರಿವುದು. ಹದಿನೈದುದಿನ ಅಡಸಿ ನಡೆದೊಡೆ ಆರು ತಿಂಗಳಿಗೆ ವಿಘ್ನ ಬಂದಿತ್ತೆಂದರಿವುದು. ಇಪ್ಪತ್ತುದಿನ ಅಡಸಿ ನಡೆದೊಡೆ ತಿಂಗಳು ಮೂರಕ್ಕೆ ವಿಘ್ನ ಬಂದಿತ್ತೆಂದರಿವುದು. ತಿಂಗಳು ಅಡಸಿ ನಡೆದೊಡೆ ಕಡೆಯ ದಿನ ಪ್ರಾಪ್ತವಾಯಿತ್ತೆಂ ದರಿವುದು (ಇಂತು ಚಂದ್ರನಾಡಿ ಪ್ರಕರಣಂ ಸಮಾಪ್ತಂ) ೪೨೬

## ಧನಂಜಯ ವಾಯುಗತಿ ಸೂಚನೆ :

ಧನಂಜಯವಾಯು ಬ್ರಹ್ಮರಂಧ್ರ ಸ್ಥಾನದಲ್ಲಿರ್ದು ಕರ್ಣದಲ್ಲಿ ಸಮುದ್ರ ಘೋಷಮಂ ಘೋಷಿಸಿ, ಮರಣಕಾಲಕ್ಕೆ ನಿರ್ಘೋಷಮಪ್ಪುದು. ೪೨೭

## ಮರಣಕ್ಕೆ ಸಾಧಾರಣ ನಿಮಿತ್ತಗಳು :

ರೋಗ ಸಂಭವಿಸಿದೊಡೆ,ಅರಸು ಕೋಪಿಸಿದೊಡೆ, ವ್ಯವಹಾರ ನಷ್ಟವಾಗುತ್ತಂ ಬಂದೊಡೆ, ಬಂಧುಗಳ ಕೂಡೆ ಕದನ ಹುಟ್ಟಿದೊಡೆ ಕಾಲಬಂದಿತ್ತೆಂದರಿವುದು. ೪೨೮

## ಮರಣಕಾಲ ಸೂಚನೆ :

ದೇಹ ಕಾಂತಿಗುಂದಿದೊಡಂ, ಇಂದ್ರಿಯಂಗಳು ಕೆಟ್ಟೊಡಂ, ಕೆಂಪುಳ್ಳವಂ ಕೆಂಪುಗೆಟ್ಟಡಂ, ರೂಪಿಲ್ಲದವ ರೂಪಾದೊಡಂ, ಉಗ್ರಂ ಶಾಂತನಾದೊಡಂ, ತ್ಯಾಗಿ ಭೋಗಿಯಾದೊಡಂ, ಭೋಗಿ ತ್ಯಾಗಿಯಾದೊಡಂ, ನೆಳಲು ಶ್ವೇತ ಪೀತ ವರ್ಣವಾದೊಡಂ, ಬಯಲು ಕಣ್ಣಿಂಗೆ ರೂಪಾಗಿತೋರ್ದಡಂ, ನೆಲನು ಚದುರಂಗದಂತೆ ತೋರ್ಪೊಡಂ, ಉದಯಂಗೆಯ್ದಿರ್ದ ಆದಿತ್ಯ ಚಂದ್ರನಾಗಿ ತೋರ್ಪಡಂ, ಚಂದ್ರಮಂಡಲ ರವಿಯಾಗಿ ತೋರ್ಪಡಂ, ನಂದಿದ ಸೊಡರವಾಸನೆ ಅರಿಯ ಬಾರದೆಯಿರ್ದಡಂ, ಅರುಂಧತಿ ಧ್ರುವ ಎರಡು ನಕ್ಷತ್ರಂ ಕಾಣಬಾರದಿರ್ದೊಡಂ, ಮೃದುವಸ್ತು ದಟ್ಟಿತ್ತಾದೊಡಂ ಇಂತಪ್ಪ ವಿಪರೀತ ಸಂಜ್ಞೆಗಳಂ ಅನರ್ಥಂಗಳಂ ಕಂಡೊಡಂ ಅನಿಷ್ಟಮುಕ್ಕುಂ ೪೨೯

ಕನ್ನಡಿಯೊಳು ರೂಹಂ ಕಾಣಬಾರದಿರ್ದಡಂ. ಪಗಲಂ ಇರುಳೆಂಬರಂ, ಇರುಳಂ ಪಗಲೆಂಬರಂ, ತನ್ನ ಹುಬ್ಬು ತನಗೆ ಕಾಣಬಾರದಿರ್ದಡಂ ಒಂಬತ್ತುದಿವಸ ಸಮುದ್ರಘೋಷವಿಲ್ಲದೆ ಇರ್ದಡಂ, ಏಳು ದಿವಸ ಚಕ್ಷು ಜ್ಯೋತಿಯಂ ಕಾಣಬಾರ

ದಿರ್ದಡಂ, ಐದುದಿವಸ ಮೂಗಿನ ಕೊನೆಯಂ ಕಾಣಬಾರದಿರ್ದಡಂ, ಮೂರುದಿವಸ ನಾಲಿಗೆಯ ಕೊನೆಯ ಕಾಣಬಾರದಿರ್ದೊಡಂ ಅರಿಷ್ಟಮಕ್ಕುಂ ೪೩೦

ಪ್ರಕೃತಿ ವಿಕೃತಿಯಪ್ಪೊಡಂ ಅರಿಷ್ಟಂ. ಕನಸಿನಲ್ಲಿ ಪಂಚಲೋಹದ ಪಿಡಿವುದಂ, ಹತ್ತಿಯಪಿಡಿವುದಂ, ಮದುವೆಯಪ್ಪುದಂ, ಎಣ್ಣೆಯ ಮಂಡೆಗೆಪೂಸಿ ಬರುವಂಡೆಯ ಪ್ಪುದಂ. ಕುಣಿವುದಂ, ಲಿಂಗಿಯಪ್ಪುದಂ, ಹಲ್ಲುಹೋಹುದಂ, ತನ್ನಕಟ್ಟುವುದಂ, ಕೆಸರಪೋಗುವುದಂ, ಕೆಚ್ಚನೆಯ ಸೀರೆಯನುಟ್ಟು ಕೆಚ್ಚನೆಯಮಾಲೆಯಹಾಕಿ ತೆಂಕ ಮುಖವಾಗಿ ಹೋಹುದಂ, ಬಂಡಿ, ಎಮ್ಮೆ, ಹೋರಿ, ಕತ್ತೆ, ಒಂಟಿಯೆಂಬವಂ ಏರಿ ಪಯಣಪೋವುದಂ, ಮಾಡವನೇರಿ ಬೀಳ್ವುದಂ, ಕಣ್ಣಂ ಕಾಗೆ ಕುತ್ತಿರಿವುದಂ, ನೀಲಿಯಸೀರೆಯನುಡುವರಂ, ಇಟ್ಟಿಮೊದಲಾದ ಕಂಟಕ ವೃಕ್ಷಂಗಳಂ, ಹೊಸ ಮಡಿಕೆಗಳಂ, ಅಡಗತಿಂಬವರಂ (ಅಡಗಲುಂಬವರಂ?), ಆಕಾಶಗಮನಂಗೆಯ್ವರಂ, ಪೇಲೂದಂ ಇಂತಪ್ಪ ದುಃಸ್ವಪ್ನಂಗಳಂ ಕಂಡೊಡೆ ಸಾವರು ೪೩೧

## ನರಕ ನಿವೃತ್ತಿಗುಪಾಯ :

ಪ್ರತ್ಯಕ್ಷಮಾಗಿ ಕಂಡಾದರೂ ಮನುಷ್ಯರುಗಳು ಪಾಪಕರ್ಮವನುಳಿದು. ಶೋಕಮೋಹಾದಿಗಳಂಬಿಟ್ಟು, ದೃಢಚಿತ್ತರಪ್ಪುದೇಕೆಂದೊಡೆ: ದೇಹಾವಸಾನ ಸಮಯದೊಳಾವಂತಂಗಾವಾವ ಭಾವನೆ ದೊರಕೊಂಬುದಾಯಾಯ ಭಾವನಾರೂಪ ಗತಿಗಳಪ್ಪವೆಂದರಿದು, ಬಳಿಕ ವಾರಣಾಸಿ, ಶ್ರೀಶೈಲ ಪೊನ್ನಾಂಬಲಾದಿ ಶಿವಕ್ಷೇತ್ರಂ ಗಳನಾಶ್ರೈಸಿ, ಅಲ್ಲಮತ್ತೆ ತಮ್ಮ ತಮ್ಮ ಆಶ್ರಯಂಗಳಲ್ಲಾದಡಂ, ಶಿರವೇ ಶ್ರೀ ಪರ್ವತ, ಲಲಾಟವೇ ಕೇತಾರ, ಭ್ರೂಮಧ್ಯವೇ ವಾರಣಾಸಿ, ಕುಚಸ್ಥಾನವೇ ಕುರುಕ್ಷೇತ್ರ, ಹೃದಯವೇ ಪ್ರಯಾಗವೆಂಬ ಭಾವನಾಯುಕ್ತರಾಗಿ. ಅನ್ನ ವಸ್ತ್ರ ಸುವರ್ಣಾದಿ ದಾನಧರ್ಮಯುತರಾಗಿ, ಭಸ್ಮರುದ್ರಾಕ್ಷಧಾರಣ ನಿಷ್ಠರಾಗಿ, ಪಾದೋದಕ ಪ್ರಸಾದ ಸ್ವೀಕಾರಿಗಳಾಗಿ, ನರಕಭಾದೆಗಳಂ ಜಯಿಸಿ ಪರಭೋಗ ಮೋಕ್ಷಂಗಳನೆ ಸರ್ವಥಾ ಪಡೆಯ ಬೇಕೆಂಬುದೇ ಹಿತೋಪದೇಶಮಕ್ಕುಂ ೪೩೨

## ಕೂಷ್ಮಾಂಡರುದ್ರ ಲೋಕ:

ಮತ್ತಮಾ ನರಕಲೋಕದತ್ತಣಿಂ ಮೂವತ್ತುಸಾವಿರದ ಯೋಜನಾಂತರದ ಮೇಲೆ ನವಲಕ್ಷಯೋಜನ ಪ್ರಮಾಣಿನ ಭೂಮಿಯಿರ್ಪುದಾದೊಡೆ: ನಾಲ್ಕುವರೆ ಲಕ್ಷಯೋಜನವೆ ಸುವರ್ಣಮಯ ಘಟ, ಉಳಿದನಾಲ್ಕುವರೆ ಲಕ್ಷಯೋಜನಮುಳ್ಳ ಅಧೋಘಟವೆ ಸಮಭಾಗದಿಂ ಮೃಣ್ಮಯ ಲೋಹಮಯವಾಗಿಹುದಲ್ಲಿ, ಪೂರ್ವೋಕ್ತ ನರಕಂಗಳಗಧಿಪತಿಯಾದ ಯಮರಾಜನ ಮೇಲಿದ್ದು ಅದಕಧಿಕಾರಿ ಯಾದ ಕೂಷ್ಮಾಂಡನೆಂಬ ರುದ್ರನತ್ಯಂತ ಭೀಕರಾಕಾರದಿಂ, ಕಾಲಾನಲ ಪ್ರತಿ ಪ್ರಕಾಶದಿಂ, ಚಾಪ ಬಾಣ ಫಲಕ ಖಡ್ಗವಾಂತಕರಚತುಷ್ಟಯದಿಂ ತನಗೆ ಸಮಾನ ಭೂತಗಣ ಕೋಟಿಗಳೊಡಗೂಡಿರ್ಪಂ, ೪೩೩

## ಸಪ್ತ ಪಾತಾಳ ಲೋಕಂಗಳು :

ಬಳಿಕಲ್ಲಿಂದಂ ಮೇಲೊಂದು ಸಾವಿರಯೋಜನದಿಂದುತ್ತರೋತ್ತರವಾಗಿ, ಪ್ರತ್ಯೇಕ ನವಸಹಸ್ರ ಯೋಜನೋನ್ನತವಾದ ಇಪ್ಪತ್ತುಸಾವಿರಯೋಜನದಗಲಂ ಗಳೆನಿಸಿ ಪಾತಾಳ, ಮಹಾತಳ, ರಸಾತಳ, ತಳಾತಳ, ಸುತಳ, ವಿತಳ, ಅತಳಂ ಗಳೆಂಬ ಸಪ್ತಪಾತಾಳಂಗಳ್ಕ್ರಮದಿಂ; ಸುವರ್ಣ, ರಜತ, ತಾಮ್ರ, ಕಾಂಸ್ಯ, ಲೋಹ, ವಾಲುಕ, ಮೃಣ್ಮಯುವಾದ ಭೂಮಿಗಳಪ್ಪುವಾಗಿ; ಪ್ರಾಕಾರ, ಪುರ, ಗೋಪು ರಾದಿ ವಿಚಿತ್ರ ರಚನೆಗಳಿಂ; ಸಕಲಭೋಗ ಸಾಧನಂಗಳಿಂ ಸಂಪನ್ನಮಾಗಿ, ಸ್ವರ್ಗಲೋಕ ಸಮಾನಮಾಗಿರ್ಪವವಕೆ: ಬಲ, ಅತಿಬಲ, ಬಲವಾನ್ ಬಲವಿಕ್ರಮ ಬಲೇಶ, ಬಲಶಾಲಿ, ಬಲಾಧ್ಯಕ್ಷರೆಂಬರೆ ಕ್ರಮದಿಂ ಕರ್ತೃಗಳಾ ಗಿರ್ಪರ್. ೪೩೪

## ಪಾತಾಳಾಧಿಪತಿಗಳು :

ಬಳಿಕ್ಕವಾದೊಡೊಂದೊಂದು ಮೂರು ಮೂರು ಖಂಡಮಾಗಿ ದೈತ್ಯರು, ಭುಜಂಗರು, ರಾಕ್ಷಸರುಗಳಿಗಾಶ್ರಯಂಗಳಾಗಿರ್ಪವವರಲ್ಲಿ; ಶಂಖುಕರ್ಣ ಪ್ರಹ್ಲಾದ ಶಿಶುಪಾಲ, ಕಕುಂದಕ, ಹಿರಣ್ಯಾಕ್ಷ, ಬೃಹದ್ಗರ್ಭ, ಬಲಿಗಳೆಂಬವರೆ ಆ ಸಪ್ತ ಲೋಕಕ್ರಮದಿಂದಲ್ಲಲ್ಲಿಯ ದೈತ್ಯಪತಿಗಳಕ್ಕುಂ. ಕುಟಿಲಕ, ವಾಸುಕಿ, ಕಂಬಲ, ಕರ್ಕೋಟಕ, ಕಾಳಾಂಗ, ದುರ್ದಶ, ತಕ್ಷಕರೆಂಬವರೆ ತರುವಾಯಿಂದಲ್ಲಲ್ಲಿಯ ಭುಜಂಗ ಪತಿಗಳಕ್ಕುಂ ವಿಕಟ, ಲೋಹಿತಾಕ್ಷ, ಯಮ, ಶಕಟಾನನ, ಭೀಮನಿರ್ಹ್ರಾದ, ಪಿಂಗ ಲರೆಂಬವರೆ ಪರಿಪಿಡಿದಲ್ಲಲ್ಲಿಯ ರಾಕ್ಷಸಪತಿಗಳಕ್ಕುಂ ಬಳಿಕೀ ಸಪ್ತಪಾತಳಂಗಳಲ್ಲಿಯ ದೈತ್ಯ, ಭುಜಂಗ, ರಾಕ್ಷಸರೆಲ್ಲಂ ತಮ್ಮ ತಮ್ಮ ಲೋಕಂಗಳಲ್ಲಿ ಕ್ರಮದಿಂದಿರ್ಪ ಶಿವ ಶಂಭು ಶಂಕರ ನೀಲಕಂಠ ಉಮಾಪತಿ ಸರ್ವೇಶ್ವರ ಶ್ರೀನೀಲಕಂಠ ನಾಮಧೇಯದ ಲಿಂಗಂಗಳಂ ಮಹಾಭಕ್ತಿಯಿಂ ಭಜಿಸುತ್ತಮಿರ್ಪರ್. ೪೩೫

## ಪಾಟಕೇಶ್ವರ ರುದ್ರಭುವನ :

ಬಳಕಲ್ಲಿಂದಂ ಮೇಲೆ ಭೂಪೃಷ್ಠಾಂತಮಾಗಿ ಎಂಭತ್ತೆಂಟು ಲಕ್ಷಾದಿಕಮಾದ ಎರಡು ಕೋಟಿಯೋಜನ ಪ್ರಮಾಣದಲ್ಲಿ ಸಪ್ತಪಾತಾಳಂಗಳಿಗಧಿಪತಿಯೊದ ಪಾಟ ಕೇಶ್ವರನೆಂಬ ರುದ್ರನಾದೊಡೆ ಸಹಸ್ರಯೋಜನ ವಿಸ್ತಾರಮಾದ ಮಣಿಖಚಿತ ದಿವ್ಯಸಿಂಹಾಸನದ ಮೇಲೆ ಕೋಟಿಕಂದರ್ಪ ಲಾವಣ್ಯದಿಂದೆಸೆದು ಸಮಸ್ತಸುರ ಸಿದ್ಧರುಗಳಿಂದೋಲೈಸಿಕೊಳುತ್ತಿರ್ಪಂ. ೪೩೬

## ಪಾತಾಳ ಪ್ರಕಾಶ

ಮತ್ತಮಾ ಕಾಲಾಗ್ನಿ ಮೊದಲು ಪಾಟಕೇಶ್ವರಾಂತಮಾದ ಸಪ್ತಪಾತಾಳಂಗಳಲ್ಲಿ ಆಯಾಯಾ ಭುವನ ನಿವಾಸಿಗಳ ಕಾಯಕಾಂತಿ ರತ್ನಾಭರಣಂಗಳ ಪ್ರಕಾಶಂಗಳೇ ಸಕಲ ವಿಷಯಂಗಳಂ ಬೆಳಗುವವಲ್ಲದೆ ಚಂದ್ರಾರ್ಕರನಪೇಕ್ಷಿಸಲಿಲ್ಲೆಂದರಿಯಲ್ವೇಳ್ಕುಂ ೪೩೭

## ಅಧಃ ಕಟಾಹ ಯೋಜನ ಪ್ರಮಾಣ :

ಬಳಿಕಿಂತು ನೋಡಲಾ ಬ್ರಹ್ಮಾಂಡದಡಿಯಣ ಖರ್ಪರದೊಳವಳಯದ ಕಾಲಾಗ್ನಿರುದ್ರ ಭುವನವೊಂದು ಕೋಟಿಯೋಜನವಾತನ ಜ್ವಾಲೆ ದಶಕೋಟಿ ಯೋಜನವದರ ಧೂಮುವೈದು ಕೋಟಿ ಯೋಜನವದರಮೇಲೆ ನರಕಲೋಕವೆರಡು ಲಕ್ಷಾಧಿಕಮಾದ ಮೂವತ್ತೆರಡುಕೋಟಿ ಯೋಜನವದರ ಮೇಲೆ ಕೂಷ್ಮಾಂಡ ರುದ್ರಭುವನ ಒಂಭತ್ತುಲಕ್ಷಮುಂ ಮೂವತ್ತುಸಾವಿರಯೋಜನಂ. ಅದರಮೇಲೆ ಸಪ್ತಪಾತಾಳಂಗಳಂತರಾಳ ಸಹಿತಮಾಗಿ ಎಪ್ಪತ್ತು ಸಾವಿರಯೋಜನವದರ ಮೇಲೆ ಪಾಟಕೇಶ್ವರ ರುದ್ರಭುವನಂ ಭೂಪೃಷ್ಠಾಂತಮಾಗಿ ಎಂಭತ್ತೆಂಟುಲಕ್ಷಾಧಿಕ ಮಾದೆರಡು ಕೋಟಿಯೋಜನ. ಅದರ ಮೇಲೆ ಮುಂದೆ ಪೇಳ್ವ ಭೂಮಿ ಒಂದು ಕೋಟಿಯೋಜನವಂತು ಬ್ರಹ್ಮಾಂಡದಧಃ ಕಟಾಹದಿಂ ಭೂಮ್ಯಾಂತಮಾಗಿ ಪಂಚಾಶತ್ಕೋಟಿ ಯೋಜನೋನ್ನತವೆಂದು ನಿರ್ಧರಿಸಲ್ವೇಳ್ಕುಂ. ೪೩೮

ಇತಿ ನಾಗಲೋಕ ಸ್ಥಿತಿವರ್ಣನಂ ತೃತೀಯ ಪರಿಚ್ಛೇದ.

# ಚತುರ್ಥ ಪರಿಚ್ಛೇದ

ಕಂದ॥ ಗಣಿಸಿದೆನಜಾಂಡದೊಳಗಡಿ
ಯಣ ಖರ್ಪರದಲ್ಲಿ ಮೆರೆವ ಭುವನಂಗಳನಿಂ
ತಣಿಯರದೊಳೀಗಳೀ ಧಾ
ರುಣಿಯ ವಿಚಿತ್ರತೆಯನೊಲಿದು ಪೇಳ್ವೆನನೂನಂ ।

ಅದೆಂತೆಂದೊಡೆ,

ಭೂಲೋಕ :

ಪೂರ್ವೋಕ್ತ ಪಾಟಕೇಶ್ವರ ರುದ್ರಭುವನದಿಂ ಮೇಲೊಂದು ಕೋಟಿ ಯೋಜನದಳತೆಯ ದಟ್ಟವುಳ್ಳ ಜಂಬೂದ್ವೀಪಂ ಮೊದಲಾದ ಸಪ್ತದ್ವೀಪ, ಸಪ್ತ ಸಮುದ್ರಂಗಳಿಂದನೇಕ ಗಿರಿ ನದಿ ನಂದನಾದಿಗಳಿಂ, ವಿಚಿತ್ರ ರಚನೆಯುಳ್ಳ ಭೂಲೋಕ ವತಿರಮ್ಯವೆನಿಸಿ ರಂಜಿಸುತ್ತಿಹುದದಕ್ಕೆ. ೪೩೯

ಚತುರ್ದಶ ಮನುಗಳು :

ಪೂರ್ವದಲ್ಲಿ ಸ್ವಯಂಭು, ಸ್ವರೋಚಿಷ, ರೈವತ, ಚಾಕ್ಷುಷ, ಉತ್ತಮ, ಮಧ್ಯಮ, ವೈವಸ್ವತ, ಬ್ರಹ್ಮಸಾವರ್ಣಿಕ, ವಿಷ್ಣುಸಾವರ್ಣಿತ, ರುದ್ರಸಾವರ್ಣಿತ, ಸೂರ್ಯಸಾವರ್ಣಿತ, ತ್ರೈಜ ಸಾವರ್ಣಿತ, ವೇದ ಸಾವರ್ಣಿತ, ಧರ್ಮಸಾವರ್ಣಿತ ರೆಂಬ ಹದಿನಾಲ್ಕು ಮನುಗಳೊಳಗೆ ೪೪೦

ಭರತ ಖಂಡ

ಮೊದಲು ಸ್ವಯಂಭುಮನುವಿಂಗೆ ಉತ್ತಾನಪಾದಿಯೆಂದು, ಪ್ರಿಯವ್ರತನೆಂದೀರ್ವರು ಮಕ್ಕಳು, ಮತ್ತವರೊಳಾ ಉತ್ತಾನಪಾದಿಯೆಂಬಾತಂಗೆ ಧ್ರುವನೆಂಬವನೊಬ್ಬನೇ ಮಗನಾತನು ನಕ್ಷತ್ರಮಂಡಲಕ್ಕಾಧಾರಕತ್ವದಿಂದಖಿಳೈಶ್ವರ್ಯ ಸಂಪನ್ನನಾಗಿ, ಮುಂದೆಪೇಳ್ವ ಭುವರ್ಲೋಕಾಗ್ರಸ್ಥಿತನಾಗಿರ್ಪಂ. ಬಳಿಕಾ ಪ್ರಿಯವ್ರತನೆಂಬಾತಂಗೆ ಅಗ್ನಿರಿಧ್ರ, ಮೇಧಾತಿಥಿ, ವಪುಷ್ಮಂತ, ಜೋತಿಷ್ಮಂತ, ದ್ಯುತಿಮಂತ, ಭವ್ಯ, ಸವರೆಂಬವರೇಳು ಮಕ್ಕಳುಗಳವರಿಗಾ ಪ್ರಿಯವ್ರತನಾ ಜಂಬೂದ್ವೀಪ ಮೊದಲಾದೇಳು ದ್ವಿಪಂಗಳಂ ಹಂಚಿಕೊಟ್ಟನು. ಬಳಿಕವರೊಳಾ ಕಿ(ಹಿ)ರಿಯ ಮಗನಾದ ಅಗ್ನಿರಿಧ್ರನಿಗೆ ನಾಭಿ, ಕಿಂಪುರುಷ, ಹರಿ, ಇಳಾವೃತ, ರಮ್ಯಕ, ಹಿರಣ್ಯಕ, ಉತ್ತರ ಕುರು, ಭದ್ರಾಶ್ವ ಕೇತುಮಾಲರೆಂಬ ಒಂಭತ್ತು ಮಕ್ಕಳುಗಳವರಿಗಾ ಅಗ್ನಿರಿಧ್ರನು ತನ್ನದಾದ ಜಂಬೂದ್ವೀಪಮಂ ನ್ನವಖಂಡಂ ಮಾಡಿಕೊಡಲು, ಅವರವರ ಪೆಸರಿನಲ್ಲಿ ಆಯಾಯಾ ಖಂಡಂಗಳಿರ್ಪವವರೊಳಾ ಮೊದಲ ನಾಭಿಯ ಮಗನೆ ವೃಷಭ. ಆ ವೃಷಭನ ಮಗನೆ ಭರತ. ಆ ಭರತನ ಹೆಸರಿನಲ್ಲಿ ಈ ಭರತಖಂಡವಾಯಿತ್ತು. ಆ ಸಕಲ ಪ್ರಪಂಚವೆಂತೆನೆ. ೪೪೧

## ಜಂಬೂ ದ್ವೀಪ

ಪೂರ್ವೋಕ್ತ ಭೂಮಿಯ ನಟ್ಟನಡುವೆ ವೃತ್ತಾಕಾರವೆನಿಸಿಕೊಂಡು ಲಕ್ಷ ಯೋಜನ ವಿಶಾಲವಾದ ವಿಚಿತ್ರ ವರ್ಣದ ಭೂಮಿಯನುಳ್ಳ ಜಂಬೂದ್ವೀಪವು ಆ ಭೂಕಾಂತೆಯ ನಾಭೀಮಂಡಲದಂತೆ ಪರಿಶೋಭೆವಡೆದು ವಿಚಿತ್ರ ವಿಷಯಂಗಳುಳ್ಳುದೆನಿಸಿಹುದು. ಅದರ ನಟ್ಟ ನಡುವೆ. ೪೪೨

## ಮಹಾಮೇರು ವರ್ಣನೆ:

ಸುವರ್ಣಮಯ ಮೇರು ಪರ್ವತವು ಆ ಭೂಕಾಂತೆಯ ಹೃದಯಕಮಲ ಕರ್ಣಿಕಾಕೃತಿಯಂ ಪಡೆದೆಸೆವ ವೃತ್ತಮೆನಿಸಿ ಪದಿನಾಲ್ಕು ಸಾವಿರ ಯೋಜನ ಭೂಮಿಯೊಳ್ನಟ್ಟು, ಎಂಬತ್ತನಾಲ್ಕು ಸಾವಿರಯೋಜನೋನ್ನತವಪ್ಪುದರಿಂದೊಂದು ಲಕ್ಷಯೋಜನ ಪ್ರಮಾಣ ಮುಳ್ಳುದಾಗಿ, ಮೂಲದೊಳ್ಪದಿನಾರು ಸಾವಿರಯೋಜನದ ಪೀನತ್ವಮನ್, ಅಗ್ರದಲ್ಲಿ ಮೂವತ್ತೆರಡು ಸಾವಿರಯೋಜನ ವಿಸ್ತಾರಮಂ ತಾಳ್ದು, ತೊಂಭತ್ತಾರುಸಾವಿರ ಯೋಜನದ ಬಳಸುಳ್ಳುದಾಗಿರ್ಕುಂ. ೪೪೩

## ಬ್ರಹ್ಮಾದಿದೇವಸ್ಥಲ ವಿಶೇಷ:

ಬಳಿಕಾ ಮೇರುವಿನಗ್ರದಲ್ಲಿ ಬ್ರಹ್ಮಂಗೆ ಮಾನವತಿಯೆಂಬ ಪೆಸರಿನ ಚತುರ್ದಶ ಸಹಸ್ರಯೋಜನದಗಲದ ರತ್ನಕೋಂಟೆ, ಮೌಕ್ತಿಕದ ತೆನೆಗಳುಳ್ಳುದಾಗಿ, ಸಕಲದೇವತೆಗಳಿಂದಲಕೃತಮಾದ ಸರ್ವಸುಖಭೋಗ ಪರಿಕರಂಗಳಿಂದಾಢ್ಯಮಪ್ಪ ಪಟ್ಟಣವೊಂದತಿ ರಮ್ಯಮೆನಿಸಿ ರಂಜಿಸುತ್ತಿಹುದು. ಅದರ ಪಶ್ಚಿಮ ದಿಕ್ಕಿನಲ್ಲಿ ನಾರಾಯಣಂಗೆ ನಿವಾಸಮಾದ ಬೆಳ್ಳಿಯ ಕೋಟೆರಂಜಿಸುತಿರ್ಕುಂ. ಮತ್ತಮಾ ಮಾನವತಿಯ ದಕ್ಷಿಣದಿಕ್ಕಿನೊಳ್ಪಿತಾಮಹಂಗೆ ಸುಖಾಶ್ರಯಮಾದ ಸುವರ್ಣಮಯ ಶಿಖರವಿರ್ಕುಂ. ಮತ್ತಮಾ ಪುರದೀಶಾನ್ಯದಿಕ್ಕಿನೊಳ್ ಸರ್ವೇಶ್ವರಂಗೆ ನೆಲೆವನೆಯಾದ ರತ್ನಮಯ ಶೃಂಗನೆ ಜೋತಿಷ್ಮವತಿಯೆಂಬ ನಾಮಧೇಯದಿಂದಿರ್ಪುದದರ ಕ್ಷಿನಿತಂಬಗಳಲ್ಲಿ ಸ್ಕಂದ, ನಂದಿ, ಮಹಾಕಾಳ, ಗಣೇಶಾದಿಗಳ ರಮ್ಯಾಶ್ರಯಂಗಳನೇಕಂಗಳುಂಟದೇ ಬ್ರಹ್ಮೇಂದ್ರೋಪೇಂದ್ರಾದಿ ಮುಖ್ಯ ದೇವತೆಯರಿಂ ವಂದ್ಯಮಾನಮಾಗಿರ್ಕುಂ. ಮತ್ತಮಾ ಪುರದಗಳುಗಳೆಂಬಂತೆ ಸಿತೆ, ಅಳಕನಂದೆ, ಚಕ್ಷು, ಭದ್ರೆಗಳೆಂಬ ನಾಲ್ಕುದೇವನದಿಗಳಿರ್ಕುಂ. ೪೪೪

## ಮೇರು ಕಂಕಣತ್ರಯ:

ಬಳಿಕಾ ಮೇರುವಿನಂತರದಲ್ಲಿ ಸಲಕ ರತ್ನೋಜ್ವಲಿತಮಾದ ನೇಮಿಗಳೆನಿಸಿ ವಲಯಾಕಾರಮಪ್ಪ ಕಂಕಣತ್ರಯಮೊಂದೊಂದು ಮೂರು ಮೂರು ಸಾವಿರಯೋಜನದಳತೆಯ ದಟ್ಟಮುಳ್ಳವಾಗಿ ಇಪ್ಪತ್ತೈದು ಸಾವಿರಯೋಜನಕ್ಕೊಂದೊಂದಂತರ ಮಾಗಿರ್ಕುಂ. ೪೪೫

ಲೋಕಪಾಲಾಷ್ಟಕ ಪುರವರ್ಣನೆ:

ಮತ್ತಮವರೊಳೂರ್ಧ್ವ ಕಂಕಣದ ಪೂರ್ವಾದ್ಯಷ್ಟದಿಕ್ಕಿನ ಮಿಸುನಿಯ ಕೋಡುಗಳೆಂಟರಗ್ರದಲ್ಲಿ ಇಂದ್ರಂಗೆ ಸುವರ್ಣದಕೋಂಟೆ, ನೀಲದತೆನೆಗಳಿಂದೊಪ್ಪುವಮರಾವತಿ,
ಅಗ್ನಿಗೆ ಕಮಲ ಲೋಹಿತ ವರ್ಣದ ಕೋಂಟೆ, ವಜ್ರದತೆನೆಗಳಿಂದೆಸೆವ ತೇಜೋವತಿ,
ಯಮಂಗೆ ಅಂಜನವರ್ಣದ ಕೋಂಟೆ, ಪುಷ್ಯರಾಗದ ತೆನೆಗಳಿಂ ಮೆರೆವ ಸಂಯಮಿನಿ,
ನೈರುತ್ಯಂಗೆ ಕೃಷ್ಣಲೋಹಿತ ವರ್ಣದ ಕೋಂಟೆ, ಮೌಕ್ತಿಕದ ತೆನೆಗಳಿಂ ರಂಜಿಸುವ ರಕ್ಷಾವತಿ,
ವರುಣಂಗೆ ಸುಧಾಕರ ವರ್ಣದಕೋಂಟೆ, ಮಿಸುನಿಯ ತೆನೆಗಳಿಂ ಕಂಗೊಳಿಪ ಶುದ್ಧವತಿ,
ವಾಯುವ್ಯಂಗೆ ಪಚ್ಚೆಯಕೋಂಟೆ, ವೈಢೂರ್ಯದ ತೆನೆಗಳಿಂ ವಿರಾಜಿಪ ಗಂಧವತಿ·
ಕುಬೇರಂಗೆ ನಾನಾವರ್ಣದ ಕೋಂಟೆ, ಮುತ್ತಿನ ತೆನೆಗಳಿಂ ತೋರ್ಪ ಮಹೋದಯೆ,
ಈಶಾನ್ಯಂಗೆ ಶುಭ್ರವರ್ಣದ ಕೋಂಟೆ, ರತ್ನದ ತೆನೆಗಳಿಂದಲಂಕೃತಮಾದ ಯಶೋವತಿಯೆಂಬ ಪೆಸರಿನ ಪುರಂಗಳುಂಟವೆಂಟು ಪುರಂಗಳು ಪ್ರತ್ಯೇಕಮಾಗಿ ಆರಾರುಸಾವಿರ ಯೋಜನದಗಲಂಗಳಕ್ಕುಂ. ೪೪೬

ಉಪದೇವ ನಗರಂಗಳು:

ಮತ್ತಂ ಮೇಘವಿಘ್ನಾವತಿ, ಸುಂದರಕಾಮಾವತಿ, ಸೌವರ್ಣ, ಸುಮತಿ, ಕುಸುಮಾವತಿ, ಎಂಬೈದು ಇಂದ್ರನಪುರಾವತಿಯ, ವಳಿತದ ಪಟ್ಟಣಂಗಳವರಲ್ಲಿ ಕ್ರಮದಿಂ ಸುರ, ಅಪ್ಸರ, ಸಿದ್ಧ ದ್ವಾದಶಾದಿತ್ಯರು, ಸಾಧ್ಯರುಗಳಿರ್ಕುಂ.
ಬಳಿಕ ತದ್ವಹ್ನಿ, ರೈವತಿಯೆಂಬೆರಡೂ ಅಗ್ನಿಯ ತೇಜೋವತಿಯ ವಳಿತದ ಪಟ್ಟಣಂಗಳವರಲ್ಲಿ ಕ್ರಮದಿಂ ಮಯಣ, ವಿಶ್ವಕರ್ಮಾದಿ ದೇವಶಿಲ್ಪಿಗಳಿರ್ಕುಂ.
ಬಳಿಕ ಮಾತೃನಂದೆ ರೋಹಿತೆ ಗುಣಾವತಿಯೆಂಬ ಮೂರು ಯಮನ ಸಂಯಮಿನಿಯ ವಳಿತದ ಪಟ್ಟಣಂಗಳವರಲ್ಲಿ ಕ್ರಮದಿಂ ಪಿತೃಗಳು, ರುದ್ರರುಗಳು, ಏಕಾದಶರುದ್ರಗಳಿರ್ಕುಂ.
ಬಳಿಕ ಪಿಂಗಳೆ, ಕೃಷ್ಣವತಿ, ಸುಖಾವತಿ, ಗಾಂಧಾರಿಯೆಂಬ ನಾಲ್ಕು ನೈರುತ್ಯನ ರಕ್ಷೋವತಿಯ ಪಟ್ಟಣಂಗಳವರಲ್ಲಿ ಕ್ರಮದಿಂ ಕರ್ಮದೇವತೆಗಳು, ಪಿಶಾಚಾದಿಗಳಿರ್ಕುಂ.
ಬಳಿಕ ಸಿದ್ಧಸೇನೆ, ಹೇಮಸಂಜ್ಞೆ, ಸಿದ್ಧಾವತಿ ಎಂಬ ಮೂರು ವರುಣನ ಶುದ್ಧಾವತಿಯ ವಳಿತದ ಪಟ್ಟಾಣಂಗಳವದಲ್ಲಿ ಕ್ರಮದಿಂ ಭೂತರು, ವಸುಗಳು, ವಿದ್ಯಾಧರರುಗಳಿರ್ಕುಂ.

ಬಳಿಕ ಸಿದ್ಧಿಯೆಂಬುದೊಂದೇ ವಾಯುವಿನ ಗಂಧವತಿಯ ವಳಿತದ ಪಟ್ಟಣ. ಅದರಲ್ಲಿ ಕಿನ್ನರರಿರ್ಕುಂ.

ಬಳಿಕ ಗಂಧರ್ವೆ, ಚಿತ್ರೆ, ಶುಭೆ, ಪ್ರಮದೆ, ಚಿತ್ರವತಿಯೆಂಬವೈದು ಕುಬೇರನ ಮಹೋದಯೆಯ ವಳಿತದ ಪಟ್ಟಣಂಗಳವರಲ್ಲಿ ಕ್ರಮದಿಂ ಚಿತ್ರರಥನು, ಶಾರದೆ ತುಂಬುರರು, ಕರ್ಮದೇವತೆಗಳು ಗುಹ್ಯಕರಿರ್ಕುಂ.

ಬಳಿಕ ವೈಕುಂಠ, ಪದ್ಮಾವತಿ, ಕಾಮಶೋಭೆಯೆಂಬ ಮೂರು, ಈಶಾನ್ಯನ ಯಶೋವತಿಯ ವಳಿತದ ಪಟ್ಟಣಂಗಳವರಲ್ಲಿ ಕ್ರಮದಿಂ, ವಿಷ್ಣು, ಬ್ರಹ್ಮ ಧನ್ವಂತರಿಗಳಿರ್ಕುಂ. ೪೪೭

## ದಿಕ್ಪಾಲಕರ ಸ್ವರೂಪ:

ಅನಂತರದೊಳಾ ಇಂದ್ರಾದಿ ಲೋಕಪಾಲಾಷ್ಟಕರಾದೊಡೆ ಪೀತ, ರಕ್ತ, ಕೃಷ್ಣ, ಧೂಮ್ರ, ಶುಕ್ಲ, ಧೂಮ, ಶುಭ್ರವರ್ಣಂಗಳಿಂ; ಕರಿ, ತಗರು, ಕೋಣ ನರ, ಮಕರ ಯರಳೆ ಹಯ ವೃಷಭವೆಂಬ ವಾಹನಂಗಳಿಂ; ವಜ್ರ ಶಕ್ತಿ ದಂಡ ಖಡ್ಗ, ಪಾಶ, ಅಂಕುಶ, ಗದೆ,ಶೂಲವೆಂಬ ಆಯುಧಂಗಳಿಂ ಪರಿವಿಡಿದೊಪ್ಪುತ್ತಿರ್ಕುಂ ೪೪೮

## ನವ ನಿಧಿಗಳು:

ಬಳಿಕ ದಿಕ್ಪಾಲಕರೊಳಾ ಕುಬೇರನೆ ಪದ್ಮ ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ಚರ್ಚಂಗಳೆಂಬ ನವನಿಧಿಗೊಡೆಯನಾಗಿ ಈಶ್ವರಂಗೆ ಸಖನಾಗಿರ್ಪಂ. ೪೪೯

## ನಂದಿಕೇಶ್ವರ ಸ್ಥಾನ:

ಮತ್ತಮಾ ಈಶಾನ್ಯ ದಿಕ್ಕಿನೊಳೀಶ್ವರಕ್ಷೇತ್ರಮೆಂಬುದೊಂದು ಸ್ಥಾನ ಮುಂಟಲ್ಲಿ ನಂದೀಶ್ವರನಾದೊಡೆ ಕನಕವರ್ಣಮಯ ಶರೀರದಿಂ; ಏಕಮುಖ ತ್ರಿನೇತ್ರ, ಚತುರ್ಭುಜಂಗಳಿಂ; ಶ್ವೇತವಸ್ತ್ರ ದಿವ್ಯಾಭರಣ ಗಂಧಪುಷ್ಪಾದಿಗಳಿಂದಲ ಕೃತನಾಗಿ; ಶೂಲಾಯುಧವಿಡಿದು, ಸನತ್ಕುಮಾರಾದಿ ಸಕಲ ಶಿಷ್ಯರೊಡಗೂಡಿ ಶಿವಾರಾಧನಾ ತತ್ಪರನಾಗಿರ್ಕುಂ. ೪೫೦

## ಸಿದ್ಧಾದಿ ಸ್ಥಾನಗಳು :

ಮತ್ತಮಾ ಮೇರುವಿನ ಮಧ್ಯಕಂಕಣದಲ್ಲಿ ಸಿದ್ಧ, ಮನು, ಮುನಿಗಳು ಮಹಾ ಸುಖದಿಂದಿಹರು, ಬಳಿಕ್ಕದಃಕಂಕಣದಲ್ಲಿ ದನುಜ, ದಿವಿಜ, ಗಂಧರ್ವಾದಿ ಗಳಿಹರು. ಬಳಿಕಾ ಮೇರುವಿನ ಮೂಲದ ಗುಹಾಂತರಂಗಳಲ್ಲಿ ಮರುದ್ಗಣಂಗಳಿ ರ್ಪರೆಂಬುದೇ ಸಿದ್ಧಮಕ್ಕುಂ. ೪೫೧

**ಕೀಲಕ ಪರ್ವತಗಳು**

ಅನಂತರದೊಳಾ ಮೇರುವಿನ ದೃಢತ್ವಕ್ಕೋಸುಗ ಅಜನಿಂ ಕಲ್ಪಿತವುಪ್ಪ ಕೀಲಕ ಪರ್ವತಂಗಳೊಂದೊಂದ್ಯೆವತ್ತು ಸಾವಿರ ಯೋಜನೋನ್ನತವೆನಿಸಿರ್ಪವವರಲ್ಲಿ ಶ್ವೇತವರ್ಣದ ಮಂದರ ಪರ್ವತವೆ ಮೇರುವಿಗೆ ಮೂಡಲಿಹುದು. ನೀಲವರ್ಣ ಮಾದ ವಿಪುಲನಗವೇ ಪಡುವಲಿಹುದು. ಪೀತವರ್ಣಮಾದ ಗಂಧಮಾದನ ಶೈಲವೇ ತೆಂಕಲಿಹುದು. ಅರುಣವರ್ಣಮಾದ ಸುಪಾರ್ಶ್ವ ಶಿಖರಿಯೆ ಬಡಗಲಿ ಹುದು. ಈ ನಾಲ್ಕು ಗಿರಿಗಳ ಮೇಲೆಯು ಸದಾಶಿವನಾಮಧೇಯದ ಲಿಂಗಂಗಳಂ ದೇವತೆಗಳಾರಾಧಿಸುತ್ತಿರ್ಕುಂ. ಮತ್ತಮಾ ಮಂದರಾದಿ ಕೀಲಕ ಪರ್ವತಂಗಳಗ್ರದಲ್ಲಿ ಕ್ರಮದಿಂ ಕದಂಬ ಜಂಬು ಅಶ್ವತ್ಥ, ವಟ ಸಂಜ್ಞಿತಂಗಳಾದ ಕಲ್ಪವೃಕ್ಷಂಗಳೊಂ ದೊಂದು ಸಾವಿರ ಸಾವಿರಯೋಜನದುದ್ದದಿಂ, ಸಹಸ್ರಯೋಜನ ವಿಸ್ತಾರಂಗಳಿಂ ದಿರ್ಕುಂ. ೪೫೨

ಜಂಬೂವೃಕ್ಷ :

ಮತ್ತಮವರೊಳಾ ದಕ್ಷಿಣ ದಿಕ್ಕಿನ ಗಂಧಮಾದನವೆಂಬ ಕೀಲಕ ಪರ್ವತದ ಮೇಲಿರ್ಪ ಜಂಬೂ ವೃಕ್ಷದಲ್ಲಿ ಮಹಾಗಜ ಪ್ರಮಾಣಿನ ಫಲಂಗಳಸಂಖ್ಯಾತಂ ಗಳುಂಟಲ್ಲಿ. ಮಹಾಗಜ ಪ್ರಮಾಣವೆಂತೆಂದೊಡೆ "ನರರ ನಾನೂರು ಮೊಳದುದ್ದವ ಹುದು". ಆ ಪ್ರಕಾರಮಾದ ಪಲಂಗಳು ಆ ಗಿರಿಯ ಮೇಲುದಿರ್ದು ಕಳಿದುಕ್ಕಿದ ರಸವೇ ತೆರೆಮಸಗಿ ಜಂಬೂನದಿಯೆನಿಸಿ ವಿಶಾಲಮಾಗಿ ಮೇರುವಿನ ಮೂಲಮಂ ಬಳಸಿ, ಪರಿದಾಮೇರುವನಾವರಿಸಿರ್ದು ಇಳಾವೃತ ವರ್ಷ ಭೂಮಿಯಂ ಪದಿನಾರು ಬಣ್ಣದ ಕನಕಮಯಮಂ ಮಾಡಿ, ತನ್ನನಾಶ್ರೈಯಿಸಿದ ಸಕಲ ಪ್ರಾಣಿಗಳ ಶರೀರಂ ಗಳಂ ಸುವರ್ಣಕಾಂತಿಮಯಂ ಮಾಡುತ್ತಿಹುದಾ ನದಿಯಿಂದಾದ ಚಿನ್ನವೇ ದೇವತೆ ಗಳಾಭರಣಕ್ಕೆ ಯೋಗ್ಯಮಾಗಿರ್ಕುಂ, ೪೫೩

ಮಂದರಗಿರಿಯ ಮೂಲದಲ್ಲಿ ನದ್ಯಾದಿಕ್ಷೇತ್ರ :

ಮತ್ತಮಾ ಮಂದರಗಿರಿಯ ಮೂಲದಲ್ಲಿ ನಂದೆಯೆಂಬ ನದಿಯು ಕುಬೇರಾ ದಿಗಳ ಕ್ರೀಡಾರ್ಥಮಪ್ಪ ಚೈತ್ರರಥಮೆಂಬ ವನಮುಂ, ಹೇಮಾಬ್ಜಮಂಡಿತ ಮಾದರು ಣೋದಕಮೆಂಬ ಕಾಸಾರಮುಂ, ಸುರಾರ್ಚಿತಮಾದ ತತ್ಪುರುಷನಾಮ ಲಿಂಗ ಕ್ಷೇತ್ರಮುಂ ಕಣ್ಗೊಳಿಸುತಿರ್ಕುಂ. ೪೫೪

ಗಂಧಮಾಧನ ಪರ್ವತದಡಿಯಲ್ಲಿ ಭದ್ರಾನದಿಕ್ಷೇತ್ರ

ಮತ್ತಮಾ ಗಂಧಮಾದನ ಪರ್ವತದಡಿಯಲ್ಲಿ ಭದ್ರೆಯೆಂಬ ನದಿಯು ಗಂಧರ್ವಾ ದಿಗಳಿಂದಾವೃತಮಾದ ನಂದನವೆಂಬೀವನಮುಂ, ಮನೋಹರಮಾದ ಮಾನಸ ಕೆಂಬ ಸರಸಿಯುಂ, ಅಮರಾರ್ಚಿತಮಾದ ಅಘೋರನಾಮ ಲಿಂಗಕ್ಷೇತ್ರಮುಂ ಮೆರೆದಿರ್ಕುಂ. ೪೫೫

## ಸುರಭಿ ನದಿ ಕ್ಷೇತ್ರ

ಮತ್ತಮಾ ವಿಪುಲಾದ್ರಿಯಧೋಭಾಗದಲ್ಲಿ ಸುರಭಿಯೆಂಬ ನದಿಯುಂ, ಸುರ ಸಂತತಿಗಾಸ್ಪದವಾದ ವೈಭ್ರಾಜವೆಂಬ ವನವುಂ, ರವಿಕಿರಣಕಾಂತಿ ಮಯವಾದ ಕಂಜರಂಜಿತಮಪ್ಪ ಶೀತೋದಕವೆಂಬ ಸರೋವರವುಂ, ದೇವಾರ್ಚಿತಮಾದ ಸದ್ಯೋಜಾತ ನಾಮ ಲಿಂಗ ಕ್ಷೇತ್ರವುಂ ಪರಿಶೋಭಿಸುತಿರ್ಕುಂ. ೪೫೬

## ಸುಮನೋನದಿ ಮತ್ತು ಕ್ಷೇತ್ರ

ಮತ್ತಮಾ ಸುಪಾರ್ಶ್ವ ಶಿಖರಿಯ ಮೊದಲಲ್ಲಿ ಸುಮನೆಯೆಂಬ ನದಿಯುಂ, ಪಿತೃಗಳಿಂ ಸೇವ್ಯಮಾದ ಧೃತಿಮತ್ತೆಂಬ ವನವುಂ, ಸುಗಂಧ ಕಮಲಾಲಂಕೃತ ಮಪ್ಪ ಭದ್ರಕವೆಂಬ ಕೊಳವುಂ, ವಿಬುಧಾರ್ಚಿತವಾದ ವಾಮದೇವನಾಮ ಲಿಂಗ ಕ್ಷೇತ್ರವುಂ ವಿರಾಜಿಸುತಿರ್ಕುಂ. ೪೫೭

## ದೇವ ವನಾದಿಗಳು :

ಅನಂತರದೊಳಾ ಚೈತ್ರರಥಾದಿ ನಾಲ್ಕು ವನಂಗಳ ಮಧ್ಯದಲ್ಲೊಂದೊಂದು ನಾನಾರತ್ನಮಯವಾದ ಮಾಡುವೆಟ್ಟವುಂ; ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನವೆಂಬವೈದು ಸುರತರುಗಳುಂ; ಕಾಮಧೇನು, ಚಿಂತಾಮಣಿ, ಮರುಜವಣಿ, ಪರುಷದ ಕಣಿ, ಸಿದ್ಧರಸಾದಿ ವಸ್ತುಗಳುಂ; ಅಮೃತಮಯವಾದ ವಾಪಿ, ಕೂಪ, ತಟಾಕ, ನದಿ, ಪರಿವ ಕಾಲುವೆಗಳುಂ; ಕಮಲ, ಕುಮುದ, ಕಲ್ಹಾರಾದಿ ಕಂಜಕುಸುಮಂಗಳುಂ; ಚಕೋರ, ಚಕ್ರವಾಕ, ಹಂಸ, ರಾಜಹಂಸಾದಿ ನೀರ್ವಕ್ಕಿಗಳುಂ; ಜಾಜಿ, ಮೊಲ್ಲೆ, ಮಲ್ಲಿಗೆ, ಮಾಧವಿ, ಮಧುದೂತಿ ಮೊದಲಾದ ಕಲ್ಪಲತಾವಿತಾನಂಗಳುಂ; ಇಕ್ಷು, ಪುಂಡ್ರೇಕ್ಷು, ಬಾಳೆ, ಕರ್ಪುರಬಾಳೆ, ತೆಂಗು, ಚೆಂದೆಂಗು, ಪಲಸು, ಬಕ್ಕೆವಲಸು, ಮಾವು, ಇಮ್ಮಾವು, ನೇರಿಲು, ಅರಸುನೇರಿಲು ಬದರಿ, ರಾಯಭೋರೆ, ಪೂಗ, ಪುನ್ನಾಗ, ಕರ್ಜೂರ, ಕದಂಬ, ಕೇಸರ, ಮಧು, ಮಲಯಜ, ಮಂದಾರ, ಪಾದರಿ, ಪಾರಿಜಾತ, ಜಾಲ, ಸಾಲಾಶ, ದಾಡಿಮಾದಿ ಸಕಲ ಸುಖಮಯ ಸರ್ವ ಕರ್ತೃಕಮಾದ ತರುನಿಕರಂಗಳುಂ. ೪೫೮

## ದೋಹದ ವೃಕ್ಷಾದಿಗಳು :

ವನಿತೆಯರೊದೆದೊಡೆ, ಮೇಲುಗುಳಿದೊಡೆ, ಸೋಂಕಿದೊಡೆ, ನಕ್ಕೊಡೆ, ನೋಡಿದೊಡೆ, ಆಲಿಂಗಿಸಿದೊಡೆ, ನುಡಿದೊಡೆ, ಉಸಿರು ಸೋಂಕಿದೊಡೆ, ಪಾಡಿದೊಡೆ, ಮುಖಪ್ರಸನ್ನತೆಗೊಂಡೊಡೆ ಕ್ರಮದಿಂ ಕುಸುಮಿತಂಗಳಪ್ಪ ಅಶೋಕೆ, ಬಕುಳ, ಚೂತ, ಹೊನ್ನೆತಿಲಕ, ಕುರವಕ, ಕರ್ಣಿಕಾರ, ಸಿಂದುವಾರ, ಪ್ರಿಯಾಳು, ಚಂಪಕಂಗಳೆಂಬ ದಶದೋಹಳ ವೃಕ್ಷ ಜಾತಿಗಳುಂ. ಅಂಕುರ,ಪಲ್ಲವ, ದಳ, ಕೋರಕ ಕುಸುಮ, ಫಳ, ಪಕ್ವಫಳ ಪಙ್ತಿಗಳುಂ. ೪೫೯

ಪಕ್ಷಿ ಮೃಗ ವಿಶೇಷಂಗಳು :

ಶುಕ, ಪಿಕ, ಮಧುಕರ, ಮಯೂರ, ಕಪೋತ, ಪಾರಿವ, ಪುರುಳಿ ಮೊದಲಾದ ವಿಚಿತ್ರ ಪಕ್ಷಿ ಪ್ರಕರಂಗಳುಂ; ಮೃಗ, ಕಸ್ತೂರಿಮೃಗ, ಪುರುಷಾಮೃಗಾದಿ ಸಾಧು ಮೃಗ ಸಮೂಹಂಗಳುಂ; ಶೈತ್ಯ, ಸೌರಭ್ಯ, ಮಾಂದ್ಯಮಯ ಮಲಯ ಮಾರುತದಿಂ ಮನೋಹರಮಾಗಿರ್ಕುಂ. ೪೬೦

ದೇವವಿಟರು–ಗಣಿಕೆಯರು :

ಮತ್ತಮಾ ವನಂಗಳಲ್ಲಿಯು ಚಿತ್ರ ಶಾಲೆ, ಚಂದ್ರಶಾಲೆ, ಶಿಶಿರಶಾಲೆ, ಸುರಭಿ ಶಾಲೆ, ಲತಾಮಂಟಪಗಳಲ್ಲಿ, ತರುಗಳ ತಣ್ಣೆಳಲ್ಗಳಲ್ಲಿ, ಪಳುಕಿನ ಪಾಸರೆಗಳಲ್ಲಿ, ಶಶಿಕಾಂತ ವೇದಿಕೆಗಳಲ್ಲಿ, ಹೂವಿನ ಹಾಸಿಕೆಗಳಲ್ಲಿ ಪುಳಿನ ಸ್ಥಳಗಳಲ್ಲಿ, ತಿಳಿಗೊಳನ ತೀರಂಗಳಲ್ಲಿ, ಕೃತಕಾಚಲಂಗಳಲ್ಲಿ ನೆರೆದು ಪರೆದು, ಬೇರೆ ಬೇರೆ ವಸ್ತ್ರಾಭರಣ ಗಂಧ ಮಾಲ್ಯಾದಿಗಳಿಂದಲಂಕೃತರಾಗಿ, ಗಾಡಿಯಿಂ ಗಮಕಂಬೆತ್ತು ಸಂಚರಿಪ ವಿದ್ಯಾಧರ, ಅಪ್ಸರ, ಯಕ್ಷ, ರಕ್ಷ, ಗಂಧರ್ವ, ಕಿನ್ನರ, ಪಿಶಾಚ, ಗುಹ್ಯಕ, ಸಿದ್ಧ, ಭೂತ ಬೇತಾಳರೆಂಬ ದೇವತಾ ಭೇದಂಗಳಲ್ಲಿ, ಸಕಲ ಸುರಶ್ರೇಷ್ಠರುಗಳಲ್ಲಿ ಕೊನಬುಗಳಾದ ಮಕರಧ್ವಜ, ನಳಕೂಬರ, ಜಯಂತ, ಅನಿರುದ್ಧ, ಕೂಚಿಮಾರ, ಪಾಂಚಾಲ, ಪಲ್ಲವ, ಪ್ರವೀಣಾದಿ ದೇವತಾವಿಟರುಂ; ರಂಭೆ, ಊರ್ವಶಿ, ತಿಲೋತ್ತಮೆ ಚಿತ್ತಲೇಖೆ, ಮಂಜುಘೋಷೆ ಸುಕೇಶಿ ಮೊದಲಾದ ದೇವಗಣಿಕೆಯರುಂ; ಸಂಗೀತ ಸಾಹಿತ್ಯಾದಿ ವಿದ್ಯಾಗೋಷ್ಠಿಗಳಿಂ; ಮಲ್ಲ ಮಹಿಷಾದಿ ಯುದ್ಧಂಗಳಿಂ; ನೆತ್ತ ಚದುರಂಗಾದಿ ದ್ಯೂತವ್ಯಸನಂಗಳಿಂ; ನಾನಾವಿನೋದಿಗಳಾಗಿ ವಿರಾಜಿಸುತ್ತಿರ್ಕುಂ. ೪೬೧

ಕೇಸರಾಚಲಂಗಳು:

ಅನಂತರದೊಳಾ ಮೇರುವಿನ ಪೂರ್ವಾದಿ ನಾಲ್ಕುದಿಕ್ಕಿನಲ್ಲಿರ್ದ ಮಂದರಾದಿ ಕೀಲಕ ಪರ್ವತಂಗಳ ಮಧ್ಯದಲ್ಲಿ ಕೇಸರಾಚಲಂಗಳಿರ್ಪವಾವಾವೆಂತೆಂದೊಡೆ: ಸಿತಾಂತ, ಚಾರುಕುಂದ, ಕುರರಿ, ಮಾಲ್ಯಾವಾನ್ನು, ವೈಕಂಕ ವೆಂಬವೈದುಶ್ಶೈನಗಂಗಳೇ ಮೂಡಣ ಮಂದರಗಿರಿಯ ತೆಂಕಣ ಗಂಧಮಾದನ ಶೈಲದ ನಡುವಿಹವು. ತ್ರಿಕೂಟ, ಕುರುವಿಂದ, ಪತಂಗ, ಖಚರ, ನಿಷಧವೆಂಬವೈದು ಗಿರಿಗಳೆ ತೆಂಕಣ ಗಂಧಮಾದನ ಶೈಲದ ಪಡುವಣ ವಿಪುಲಾದ್ರಿಯಲ್ಲಿಹವು, ಶಿಖಿವಾಸ ವೈಡೂರ್ಯ ಕಪಿಲ, ಗಂಧಮಾದನ ಚಾರುದಿಯೆಂಬವೈದು ಮಹೀಧರಂಗಳೆ ಪಶ್ಚಿಮ ವಿಪುಲದ ಉತ್ತರದ ಸುಪಾರ್ಶ್ವದಂತರಾಳದಲ್ಲಿಹವು. ಶಂಖ ಕೂಟ ವೃಷಭ ಹಂಸ ಕಾಳಾಂಜನ ಶಿಖರಿಗಳೆಂಬವೈದು ಗಿರಿಗಳೆ ಉತ್ತರದ ಸುಪಾರ್ಶ್ವದ ಮೂಡಣ ಮಂದರದ ನಡುವಿಹವಿಂತಿಪ್ಪತ್ತು ಕೇಸರಾಚಲಂಗಳೊಂದೊಂದು ಆರಾರುಸಾವಿರ ಯೋಜನದುದ್ದಂಗಳೆನಿಸಿ ಸಮಸ್ತ ಸುರಸಂತತಿಗಾಶ್ರಯಂಗಳಾಗಿರ್ಕುಂ. ೪೬೨

## ನವಖಂಡ ವಿಚಾರ: ಸೀಮಾಗಿರಿ ತ್ರಯಂಗಳು :

ಅನಂತರದೊಳ್ ಪ್ರಕಾರಮಾದ ವಿಚಿತ್ರರಚನೆಯುಳ್ಳ ಮಹಾಮೇರುವಂ ಬಳಸಿರ್ದ ನವಖಂಡ ವಿಚಾರವೆಂತೆಂದೊಡೆ:ಮೇರುವಿನುತ್ತರದಿಕ್ಕಿನಲ್ಲಿ,ನೀಲ, ಶ್ವೇತ, ಶೃಂಗಂಗಳೆಂಬ ಸೀಮಾಗಿರಿತ್ರಯಂಗಳೊಂದೊಂದು ದ್ವಿಸಹಸ್ರಯೋಜನ ವಿಶಾಲಂಗಳುಂ ದಶಸಹಸ್ರ ಯೋಜನೋನ್ನತಂಗಳುಂ, ನವಸಹಸ್ರ ಯೋಜನವಂತರಾಳಂಗಳನುಳ್ಳವೆನಿಸಿ, ಪೂರ್ವ ಪಶ್ಚಿಮ ಲವಣಾಬ್ಧಿಪರಿಯಂತರಂ ನೀಳವಾಗಿರ್ಪವಾ ಗಿರಿತ್ರಯಗಳಂ ಮೇಲೆ ನಾನಾ ವರ್ಣದ ವೃಕ್ಷಂಗಳುಂಟಲ್ಲಿ ಕ್ರಮದಿಂ ದೇವ,ಮಹೇಶ್ವರ, ರುದ್ರ ನಾಮಧೇಯದ ಲಿಂಗಂಗಳಂ ನಿರ್ಜರರೋಲೈಸುತ್ತಿರ್ಕುಂ. ೪೬೩

## ದಕ್ಷಿಣ ಸೀಮಾಗಿರಿತ್ರಯಂಗಳು :

ಮತ್ತಮಾ ಮೇರುವಿನ ದಕ್ಷಿಣಭಾಗದಲ್ಲಿ ನಿಷಧ, ಹೇಮಕೂಟ, ಹಿಮಾದ್ರಿಗಳೆಂಬ ಸೀಮಾಪರ್ವತತ್ರಯಂಗಳಾ ನೀಲಾದಿ ಗಿರಿಗಳ ಯೋಜನ ಪ್ರಮಾಣದ ವಿಶಾಲ, ಉನ್ನತ ಅಂತರಾಳ, ಆಯತಂಗಳನುಳ್ಳವಾಗಿಹವಾ ಗಿರಿತ್ರಯಂಗಳ ಮೇಲೆ ವಿಚಿತ್ರವರ್ಣದ ವೃಕ್ಷಂಗಳುಂಟಲ್ಲಿ ಕ್ರಮದಿಂ ಈಶಾನ, ಈಶ್ವರ, ಪಾರ್ವತೀಪತಿ, ಯೆಂಬ ನಾಮಧೇಯದ ಲಿಂಗಂಗಳಂ ದೇವತೆಗಳಾರಾಧಿಸುತಿರ್ಕುಂ. ೪೬೪

## ಪಶ್ಚಿಮ ಸೀಮಾನಗ ದ್ವಯಂಗಳು :

ಮತ್ತಮಾ ಮೇರುವಿನ ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಕ್ರಮದಿಂದೊಂದೊಂದು ನವಸಹಸ್ರ ಯೋಜನಾಂತರದಲ್ಲಿ ಮಾಲ್ಯವಂತ ಗಂಧಮಾದನವೆಂಬ ಸೀಮಾನಗ ದ್ವಯಮೊಂದೊಂದು ಸಾವಿರ ಯೋಜನದಗಲದಿಂದೈದು ಸಾವಿರ ಯೋಜನ ದುದ್ದದಿಂ, ದಕ್ಷಿಣೋತ್ತರಮಾಗಿ ಪೂರ್ವೋಕ್ತ ನೀಲ ನಿಷಧಂಗಳೆಂಬುತ್ತರ ದಕ್ಷಿಣ ಸೀಮಾಗಿರಿಯುಗಂಗಳನ್ನವಲಂಬಿಸಿಹವಾ ಗಿರಿದ್ವಯಂಗಳಮೇಲೆ ಬಹುವರ್ಣದ ವೃಕ್ಷಂಗಳುಂಟಲ್ಲಿ ಕ್ರಮದಿಂ ಮಹಾದೇವ ಮಹೇಶ್ವರ ನಾಮಧೇಯದ ಲಿಂಗಂಗಳಂ ಸಮಸ್ತ ಸುರರರ್ಚಿಸುತಿರ್ಕುಂ. ೪೬೫

## ಇಳಾವೃತ ದೇಶಂಗಳು :

ಬಳಿಕೀ ವಿಭಾಗ ಶೈಲಾಷ್ಟಕಂಗಳಂತರಾಳ ದೇಶಂಗಳ್ಗೆ ವರ್ಷಂಗಳೆಂಬ ಪೆಸರಕ್ಕುಂ. ಅವಕ್ಕೆ ಪೂರ್ವೋಕ್ತಮಾದಿಳಾವೃತಾದಿ ನಾಮಧೇಯಮುಳ್ಳವರೆ ಕರ್ತೃಗಳಪ್ಪರವರ ವಿಚಾರವೆಂತೆಂದೊಡೆ: ಮೇರುವಿನ ಉತ್ತರ ದಕ್ಷಿಣ ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಕ್ರಮವಿಡಿದಿರ್ದ ನೀಲ ನಿಷಧ ಮಾಲ್ಯವಂತ ಗಂಧಮಾದನ ಮೆಂಬ ಸೀಮಾಗಿರಿ ಚತುಷ್ಟಯದೊಳವಳಯವೇ ಇಳಾವೃತವರ್ಷ. ಅದೇ ನವ ಸಹಸ್ರಯೋಜನದಗಲದ ಚತುರಸ್ರಪಹುದದರಲ್ಲಿ,ಸಿತಾಂತ, ಚಾರುಕುಂದ, ಕುಸುರಿ, ಅಚಲೋತ್ತಮ, ಮಣಿಶಿಲಾದ್ರಿ, ವೃಕ್ಷವಾನ್ಮ ಖುಚಕ ಬಿಂದುಮಾನ್ಮ ಮಂದರ,

ವೇಣುಮಾನ್, ಮೇಘಗಿರಿ, ನಿಷಧ ದೇವನಗವೆಂಬ ಹದಿಮೂರು ಕುಲಶೈಲಂಗಳ್ ಪೂರ್ವೋಕ್ತ ಮಂದರಮೆಂಬ ಕೀಲಕ ಪರ್ವತಕ್ಕೆ ಮೂಡಣದಿಕ್ಕಿನಲ್ಲಿಹುದು. ಬಳಿಕ ಶೈಲೆ,ದ್ವಿಶಿಖರಿ,ತ್ರಿಶಿಖರಿ, ಏಕಶೃಂಗಿ, ಮಹಾಶೈಲ, ಗಜಶೈಲ, ಪಿಶಾಚ ಶೈಲ, ಪಂಚ ಶೈಲ, ಕೈಲಾಸ, ಹೇಮವಾನ್ನುಗಳೆಂಬ ದಶಕುಲ ಪರ್ವತಂಗಳೇ ಪೂರ್ವೋಕ್ತ ಗಂಧ ಮಾದನವೆಂಬ ಕೀಲಕ ಪರ್ವತಕ್ಕೆ ತೆಂಕದಿಕ್ಕಿನಲ್ಲಿಹುದು. ಮತ್ತಂ ಸುಗಂಧಿ. ಶಿಖಿ ತ್ರಿಶೃಂಗಿ ಪುಸ್ಪಕ, ಸುಪಕ್ಷ, ಕಂಕುಶೈಲ, ವೈಡೂರ್ಯ, ಕಪಿಲ, ಭದ್ರ, ಕುಮುದ, ಮಧುಮಾನ್, ಅಂಜನ, ಮಕುಟ, ಪಾಂಡುರ ಸಹಸ್ರಶಿಖರಿ, ಪಾರಿಜಾತವೆಂಬ ಹದಿನಾರು ಕುಲಾಚಲಂಗಳ್ ಪೂರ್ವೋಕ್ತ ವಿಘುಲನೆಂಬ ಕೀಲಕ ಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು. ಬಳಿಕ ಶಂಖಕೂಟ, ಮಹಾನಗ ಹಂಸಗಿರಿ, ನಾಕಶೈಲ, ಕಪಿಲಾದ್ರಿ, ಇಂದ್ರಗಿರಿ, ಸಾನುಮಾನ್, ಚಾರುಧಿ, ಹೇಮಕೂಟ, ನೀಲಭದ್ರ, ಕಟುಶೃಂಗ, ಪುಷ್ಪರಾಗ, ಮೇಘಪರ್ವತ, ಹೇಮಪ್ರಭ, ವಹಗಿರಿ, ಮಯೂರನಗ ಚಾರುಧಿಶೈಲೇಂದ್ರಮೆಂಬ ಹದಿನೇಳು ಕುಲಗೋತ್ರಂಗಳ್ ಪೂರ್ವೋಕ್ತ ಸುಪಾರ್ಶ್ವ ಮೆಂಬ ಕೀಲಕ ಪರ್ವತಕ್ಕೆ ಬಡಗದಿಕ್ಕಿನಲ್ಲಿಹವಿಂತೈವತ್ತಾರು ಕುಲಾದ್ರಿಗಳುಂ ಸುರ ಸಿದ್ಧ ಸಂತತಿಗಾಶ್ರಯಂಗಳಾಗಿರ್ಕುಂ. ೪೬೬

## ಇಳಾವೃತ ನಗರಂಗಳು :

ಅನಂತರದೊಳ್ ಇಳಾವೃತ ವಿಷಯದಲ್ಲಿಯು ಬೇರೆಬೇರೆ ಎರಡೆರಡು ಸಾವಿರ ಯೋಜನೋನ್ನತವಾಗಿ ತೊರುವಿಪ್ಪತ್ತನಾಲ್ಕು ಗಿರಿಗಳ ಮೇಲೆ ಮಹಾಪಟ್ಟಣಂ ಗಳುಂಟು.ಅವಾವೆಂತೆಂದೊಡೆ: ಚಂದ್ರಕಾಂತ,ಶುಕ್ರಪಾರಿಜಾತ, ಕುಮುದವತಿಯೆಂಬ ನಗರತ್ರಂಗಳಲ್ಲಿ, ದಾನವರಿಗೆಂಟುನೂರು ಪುರಂಗಳು, ತ್ರಿಕೂಟಚಾರುಧಿಯ ಸಹಸ್ರ ಶಿಖರಿಯಲ್ಲಿ ನಮುಚಿ, ಮಹಾನಟ, ಮಹಾದಂಭ, ಅಗ್ನಿಮುಖ, ಕಾಲನೇಮಿ, ವಿರೋಚನ, ಸುಪರ್ವ, ಚಪಲ, ಮುಚುಕುಂದ, ಸುಕುಂದರೆಯೆಂಬವರ್ಮೊದಲಾದ ದೈತ್ಯರುಗಳಿಗನಂತ ಪಟ್ಟಣಂಗಳು, ಶತಶೃಂಗ ಪರ್ವತದಲ್ಲಿ ಕ್ರವ್ಯಾದ ಮೊದಲಾದ ರಾಕ್ಷಸರುಗಳಿಗೆರಡು ಲಕ್ಷ ಪುರಂಗಳು, ಸುವ್ರತಮೆಂಬಗಿರಿಯಲ್ಲಿ ನೀಲಾದಿ ಹಯ ಗ್ರೀವರಿಗೆ ತೊಂಭತ್ತಾರು ಪುರಂಗಳು. ಮಹಾನೀಲಗಿರಿಯಲ್ಲಿ ಕಿನ್ನರರಿಗೈನೂರು ಪುರಂಗಳು, ಶ್ವೇತೋದಕ ಪರ್ವತದಲ್ಲಿ ಹಳಚಿ, ಅಶ್ವಸ್ಕಂಧ, ರೇಣುಕ, ಉಲೂಕ, ಸ್ವಸನರೆಂಬವರ್ಮೊದಲಾದ ಸುಪರ್ಣರಿಗೈದು ಸಾವಿರ ಪುರಂಗಳು ವೇಣುಸಾನು ಗಿರಿಯಲ್ಲಿ ವಿದ್ಯಾಧರಿಗೇಳುನೂರು ಪುರಂಗಳು, ಕರಂಜ ಪರ್ವತದಲ್ಲಿ ಗಂಧರ್ವರಿಗ ನಂತ ಪುರಂಗಳು, ವಸುಧಾರ ಪರ್ವತದಲ್ಲಿ ವಸುಗಳಿಗೆಂಟುಪುರಂಗಳು, ರತ್ನಧಾರಾ ಪರ್ವತದಲ್ಲಿ ಸಿದ್ಧಚಾರಣರರ್ಗಸಂಖ್ಯಾತ ಪುರಂಗಳು. ೪೬೭

ಋಷಿ ಸ್ಥಾನಗಳು :

ಸುಮೇಘಪರ್ವತದಲ್ಲಿ ಅತ್ರಿ,ಅಂಗೀರಸ, ಅಗಸ್ತ್ಯ, ಭಾರ್ಗವ, ಭಾರದ್ವಾಜ, ಭೃಗು,ವ್ಯಾಸ, ವಿಶ್ವಾಮಿತ್ರ, ವಶಿಷ್ಠ, ಉದಂಕ, ಶುಕ, ಶಾಕಲ್ಯ, ಸಾಲಂಕಾಯನ ಸೂತ, ಶೌನಕ, ಗಾಲವ,ಗಾಧ, ಗೌತಮ, ಗಾರ್ಗ್ಯ,ಮರೀಚಿ. ಮತಂಗ,ಮೃಕಂಡು ಮಾಂಡೂಕ್ಯ, ಕಣ್ವ, ಕೌಶಿಕ, ಕಪಿಲ, ಕಾಸ್ಯಪ. ಕಾತ್ಯಾಯನ, ಕವೇರ, ದೇವಲ ದಧೀಚಿ, ದೂರ್ವಾಸ, ಧತ್ರಾತ್ರೇಯ ಜಮದಗ್ನಿ, ಜೈಮಿನಿ, ಜಹ್ನು, ಜಾಬಾಲ, ರೋಮಜ, ಮತಂಗ, ಪತಂಗ ಪತಂಜಲಿ ಪರಾಶರ ಪುಲಸ್ತ್ಯ ಸಾನಂದ ಶ್ವೇತಕೇತು ಉಪಮನ್ಯುಮೊದಲಾದಷ್ಟಾಶೀತಿ ಸಹಸ್ರ ಋಷೀಶ್ವರರ್ಗನಾಂತಾಶ್ರಮಂಗಳುಂ ೪೬೮

ನಾರದಮೊದಲಾದವರ ಸ್ಥಾನಂಗಳು :

ಪುಷ್ಪಕೇತು ಪರ್ವತದಲ್ಲಿ ನಾರದ,ತುಂಬುರ, ಭರತ, ಕೋಲಾಹಲಾದಿ ದೇವ ಮುನಿಗಳ ಮಹಾಮಂದಿರಂಗಳು,ಹೇಮಕೂಟ ಪರ್ವತದಲ್ಲಿ ದ್ವಾದಶಾದಿತ್ಯರ ನಗರಂ ಗಳು, ಪಂಚಕೂಟ ಪರ್ವತದಲ್ಲಿ ಮಣಿಭದ್ರ, ಸುವೀರ ಪಾಂಚಿಕ ವಿಭಾಂಡಕ ಧೃತ ರಾಷ್ಟ್ರ, ಪೂರ್ಣಭದ್ರ, ವಿರೂಪಾಕ್ಷರೆಂಬಿವರ್ ಮೊದಲಾದ್ವೈದು ಕೋಟಿ ಯಕ್ಷರ ಪಟ್ಟಣಂಗಳು, ಕುಮುದ ಪರ್ವತದಲ್ಲಿ ಪದ್ಮ, ಮಹಾಪದ್ಮ, ಶಂಖ, ಕುಳಿಕಾದಿ ನಾಗರ್ಕಳ ನಿಕೇತನಂಗಳು, ಪಾರಿಯಾತ್ರ ಪರ್ವತದಲ್ಲಿಕುಬೇರನಗರಿ, ಮಯಾರ್ದಾ ಪರ್ವತದಲ್ಲಿ ವಿಘ್ನೇಶ್ವರನಗರಿ, ಗಜೋತ್ತುಂಗ ಪರ್ವತದಲ್ಲಿ ದುರ್ಗಿಯನಗಿರಿ, ಏಕ ಶೃಂಗ ಪರ್ವತದಲ್ಲಿ ಬ್ರಹ್ಮನಗಿರಿ; ಗಿರಿಕೂಟ ಪರ್ವತದಲ್ಲಿ ವಿಷ್ಣುನಗರಿ; ಶ್ರೀಕಂಠ ಪರ್ವತದಲ್ಲಿಈಶ್ವರನ ರಾಜಧಾನಿ ರಂಜಿಸುತ್ತಿರ್ಕುಂ. ೪೬೯

ಸಿದ್ಧವಟವೃಕ್ಷ :

ಮತ್ತಮಾ ಶ್ರೀಕಂಠಗಿರಿಯ ಸಮೀಪದ ಹೇಮಕೂಟವೆಂಬ ಗಿರಿಯೊಳಗೆ, ವಜ್ರ ವೈಡೂರ್ಯ, ಗೋಮೇದ, ಪುಷ್ಯರಾಗ, ಪದ್ಮರಾಗ. ನೀಲ, ವಿದ್ರುಮ, ಮೌಕ್ತಿಕ, ಮರಕತಂಗಳೆಂಬ ನವರತ್ನಮಯವಾದ ಕೋಡುಗಲ್ಲಗಳುಂಟವರ ಮಧ್ಯ ದಲ್ಲಿ ಪ್ರಣವವೇ ಮೂಲ, ಛಂದಸಾದಿಗಳೇಶಾಖೆ, ಋಗ್ವೇದವೇ ದಳ, ಯಜುರ್ವೇ ದವೇ ಪುಷ್ಪ, ಸಾಮವೇದವೇ ಫಲ, ಅಥರ್ವಣವೇದವೇ ಫಲರಸ, ಯಜ್ಞವೇ ಶೀತಳ ಛಾಯೆಗಳಾಗಿ, ಮೆರೆವ ವಟ ಸಂಜ್ಞಿಕವಾದ ಮಹಾಕಲ್ಪ ವೃಕ್ಷಮಿರ್ಪು ದೆಂತೆಂದೊಡೆ. ೪೭೦

ಶ್ರೀ ಗುರು ದಕ್ಷಿಣಾಮೂರ್ತಿ :

ಸಹಸ್ರ ಯೋಜನ ವಿಶಾಲೋನ್ನತಮಪ್ಪುದದರ ಮೂಲದಲ್ಲಿ, ಕನಕಮಣಿ ಖಚಿತ, ದಿವ್ಯ ಸಿಂಹಾಸನದ ಮೇಲೆ ದಕ್ಷಿಣಾಮೂರ್ತಿಯಾದೊಡೆ: ಅಮೃತಮಯ ಶರೀರದಿಂ, ಜಟಾಬಂಧ, ಚಂದ್ರಕಲೆ, ಏಕಮುಖ, ತ್ರಿನೇತ್ರ, ಫಣಿಕುಂಡಲ, ನೀಲ

ಗ್ರೀವ, ಸರ್ಪಯಜ್ಞೋಪವೀತ, ನಾಗಯೋಗಪಟ್ಟಂಗಳಿಂ; ಪೊದೆದುಟ್ಟ ವ್ಯಾಘ್ರ ಗಜಾಜಿನಂಗಳಿಂ, ವಿದ್ಯಾಮುದ್ರೆ, ಅಕ್ಷಸೂತ್ರ ಸುಧಾಕಲಶ, ಪುಸ್ತಕಂಗಳಾಂತ ದಕ್ಷಿಣವಾಮಕರಚತುಷ್ಟಯದಿಂ; ಗಂಧ, ಮಾಲ್ಯಾಭರಣಂಗಳಿಂದಲಂಕೃತನಾಗಿ, ವೀರಾಸನದಲ್ಲಿ ಕುಳ್ಳಿರ್ದು ಮೋಹಾಪಸ್ಮಾರನ ಮೇಲಿರಿಸಲ್ಪಟ್ಟ ದಕ್ಷಿಣ ಪಾದ ಕಮಲದಿಂದೆಸೆದು, ವಿಚಿತ್ರ ವೇಷಧಾರಿಗಳಾದ ಗಜಾನನ ಷಣ್ಮುಖಾದಿ ಗಣೇಶ್ವರರ್ಗೆ ನಾರದಾದಿ ಮುನಿಜನಂಗಳಿಗೆ ಸಾಂಖ್ಯಾದಿ ನಾನಾ ಸಮಯ ಸಾಧಕರ್ಗೆ, ವೇದಾದಿ ಸಮಸ್ತ ಶಾಸ್ತ್ರಂಗಳನುಪನ್ಯಾಸಂಗೆಯ್ದು ಕೃತಾರ್ಥರಂ ಮಾಡುತ್ತಿರ್ಪಂ. ೪೭೧

ಇಳಾ ವೃತದಲ್ಲಿ ಜನರು :

ಬಳಿಕಿಂತು ಸಕಲದೇವತೆಗಳಿಗೆ ಸುಖಾಸ್ಪದಮಾದಿಳಾವೃತ ವರ್ಷದಲ್ಲಿಯು ದಿವ್ಯ ದೇಹಾನ್ವಿತರಾದ ಜನರು ಸಾವಿರಬಣ್ಣಮಪ್ಪುದರಿಂ, ಮಹಾಪ್ರಕಾಶಮಯ್ಯ ವಾದ ಮೇರುವಿನ ದೀಪ್ತಿಯಿಂದವೆ ಕಾಣಲ್ಪಟ್ಟ ವಿಷಯವಿಸರಂಗಳನುಳ್ಳವರಾಗಿ, ಜಂಬುವೆಂಬ ಕಲ್ಪವೃಕ್ಷಫಲಾಹಾರದಿಂ ಪದಿಮೂರು ಸಾವಿರ ವರ್ಷದಾಯುಷ್ಯವಂತರೆ ನಿಸಿ, ಈಶ್ವರನಾಮ ಲಿಂಗಪೂಜಕರಾಗಿ ನಿತ್ಯಸುಖಿಗಳಾಗಿರ್ಕ್ಪರ್ಪಂ. ೪೭೨

ಭದ್ರಾಶ್ವವರ್ಷ :

ಅನಂತರದೊಳಾ ಮೇರುವಿನ ಮೂಡಲೊಂಭತ್ತು ಸಾವಿರ ಯೋಜನಾಂತರ ದಲ್ಲಿರ್ದ, ಮಾಲ್ಯವಂತೆಂಬ ಸೀಮಾಗಿರಿವಿಡಿದು, ಪೂರ್ವ ಲವಣಸಮುದ್ರಾವಧಿಯಾಗಿ ಚಂದ್ರಕಾಂತ ವರ್ಣದ ಭೂಮಿಯುಳ್ಳುದೇ ಭದ್ರಾಶ್ವವರ್ಷವದು ಮೂವತ್ತೆರಡು ಸಾವಿರ ಯೋಜನದಳತೆಯು ಚತುರಶ್ರವಹುದದರಲ್ಲಿ ಸಪ್ತಕುಲಪರ್ವತಂಗಳಲ್ಲಲ್ಲಿ ಪುಟ್ಟಿದ ಪುಣ್ಯನದಿಗಳುಂಟಾ ವರ್ಷದಲ್ಲಿಯು ಶಶಿಕಾಂತಮಯ ಜನರು ನೀಲಾಬ್ಜ ಮೆಂಬ ಕಲ್ಪಲತಾ ಫಲಾಶನದಿಂದಿಪ್ಪತ್ತು ಸಾವಿರವರ್ಷ ಜೀವಿಗಳಾಗಿ ಮಹಾದೇವ ನಾಮಲಿಂಗ ಪೂಜಕರಾಗಿ ದುಃಖವರ್ಜಿತರೆನಿಸಿರ್ಪರ್. ೪೭೩

ಕೇತುಮಾಲಾವರ್ಷ :

ಮತ್ತಮಾ ಮೇರುವಿನ ಪಡುವಣ ಒಂಭತ್ತು ಸಾವಿರ ಯೋಜನಾಂತರದಲ್ಲಿರ್ದ ಗಂಧಮಾದನವೆಂಬ ಸೀಮಾಶೈಲತೊಡಗಿ ಪಶ್ಚಿಮ ಲವಣಸಾಗರಂ ಕಡೆಯಾಗಿ, ಕನ್ನೆಯ್ದಿಲ ಕಾಂತಿಮಯ ಭೂಮಿಯನುಳ್ಳುದೇ ಕೇತುಮಾಲ್ಯವರ್ಷವದೆ ಮೂವತ್ತೆ ರಡುಸಾವಿರ ಯೋಜನದಳತೆಯು ಚತುರಶ್ರವಹುದದರಲ್ಲಿ, ಸಪ್ತಕುಲಗಿರಿಗಳಲ್ಲಲ್ಲಿ ಜನಿಸಿದ ಮಹಾನದಿಗಳನಂತಂಗಳುಂಟಾ ವರ್ಷದಲ್ಲಿಯು ನೀಲಾಬ್ಜಚ್ಛವಿಯ ಜನರು ಪನಸವೆಂಬ ಕಲ್ಪವೃಕ್ಷ ಫಲಾನ್ನದಿಂದಿಪ್ಪತ್ತು ಸಾವಿರ ವರ್ಷದಾಯುಷ್ಯವಂತರೆನಿಸಿ ಮಹಾದೇವನಾಮಲಿಂಗ ಪೂಜಕರಾಗಿ ಬಲವಾನ್ನುಗಳಾಗಿರ್ಪರ್. ೪೭೪

ರಮ್ಯಕವರ್ಷ :

ಮತ್ತಮಾ ಮೇರುವಿನ ಉತ್ತರದಲ್ಲಿ ನೀಲ ಶ್ವೇತವೆಂಬ ಸೀಮಾಗಿರಿಯುಗಳದಂತರಾಳದ ನವಸಹಸ್ರಯೋಜನ ಪ್ರದೇಶವೇ ನೀಲವರ್ಣದ ಭೂಮಿಯನುಳ್ಳ ರಮ್ಯಕವರ್ಷವದೆ, ಪೂರ್ವಪಶ್ಚಿಮ ಲವಣಾಬ್ಧಿ ಪರ್ಯಂತರಂ ನೀಳವಹುದದರಲ್ಲಿ, ಸಪ್ತಕುಲ ಪರ್ವತಂಗಳಲ್ಲಲ್ಲಿ ಪುಟ್ಟಿದ ವಿಶಾಲನದಿಗಳುಂಟಾ ವರ್ಷದಲ್ಲಿಯ ನೀಲಾಬ್ಜ ಛವಿಯ ಜನರು ಇಕ್ಷುವೆಂಬ ಕಲ್ಪವೃಕ್ಷ ರಸಾನ್ನದಿಂ ಪನ್ನೆರಡುಸಾವಿರವರ್ಷದಾಯುಷ್ಯಂದಳೆದು ದೇವನಾಮಲಿಂಗ ಪೂಜಕರಾಗಿ ಸದಾನಂದದಿಂದಿರ್ಪರ್. ೪೭೫

ಹಿರಣ್ಯಕವರ್ಷ :

ಮತ್ತಮಾ ಶ್ವೇತಶೃಂಗವೆಂಬ ಸೀಮಾ ಪರ್ವತದ್ವಯಂಗಳನಡುವಣೊಂಭತ್ತು ಸಾವಿರಯೋಜನಸ್ಥಲವೆ ಧವಲವರ್ಣದ ಭೂಮಿಯನುಳ್ಳ ಹಿರಣ್ಯಕವರ್ಷವದೆ ಮೂಡಲ್ಪಡುವಲ್ನೀಳವಾಗಿ ಲವಣಸಾಗರಾವಧಿಯಾಗಿರ್ಪುದದರಲ್ಲಿ, ಸಪ್ತಕುಲಗಿರಿಗಳಲ್ಲಿ ಸಂಜನಿತ ಮನೋಹರವಾದ ನದಿಗಳುಂಟಾ ವರ್ಷದಲ್ಲಿಯ ಚಂದ್ರಪ್ರಭಾಮಯ ಜನರು ಲಾಕುಳವೆಂಬ ಕಲ್ಪವೃಕ್ಷ ಫಲಾಹಾರದಿಂ ಪನ್ನಿಚ್ಛಾಸಿರವರ್ಷದಾಯುಷ್ಯಂ ಬಡೆದು ಮಹೇಶ್ವರನಾಮಲಿಂಗ ಪೂಜಕರಾಗಿ ಸುಕ್ಷೇಮದಿಂದಿರ್ಪರ್. ೪೭೬

ಕುರುವರ್ಷ :

ಮತ್ತಮಾ ಶೃಂಗವಿಡಿದುತ್ತರ ಕ್ಷಾರೋದಧಿ ಕಡೆಯಾಗಿ ನವಸಹಸ್ರಯೋಜನ ಸ್ಥಲವೆ ಲೋಯಿಸರದ ಪೂವಣ್ಣದ ಭೂಮಿಯನುಳ್ಳುದೇ ಕುರುವರ್ಷವದೆ ಅರ್ಧ ಚಂದ್ರಾಕಾರವದರಲ್ಲಿ ಸಪ್ತಕುಲಾದ್ರಿಗಳಲ್ಲಲ್ಲಿ ಪ್ರಾದುರ್ಭವಿಸಿದ ಮನೋರಮ್ಯ ನದಿಗಳುಂಟಾ ವರ್ಷದಲ್ಲಿ ಪ್ರಿಯಂಗುಲತಾಕುಸುಮದ್ಯುತಿಯ ಜನರು ಇಚ್ಛಾಕಲ್ಪವೃಕ್ಷ ಫಲಾಹಾರದಿಂ ಮೂವತ್ತುಸಾವಿರ ವರ್ಷದಾಯುಷ್ಯ ಸಮೇತರೆನಿಸಿ, ರುದ್ರನಾಮ ಲಿಂಗ ಪೂಜಕರಾಗಿರ್ಪರಲ್ಲಿಯ ಸ್ತ್ರೀಯರೊಂದೇ ಸಮಯದಲ್ಲಿ ಕನ್ಯಾ ಕುಮಾರರಂ ಪಡೆಯುವಲವರೇ ದಂಪತಿಗಳೆನಿಸಿ ನಿಷೇಧವಿಲ್ಲದೆ ನಿಜಾನಂದಿಗಳಾಗಿರ್ಪರ್. ಮತ್ತಮಾ ಕುರುವರ್ಷದೊಳಾ ಸಮುದ್ರ ಸಮೀಪದಲ್ಲಿ, ನಾಲ್ವತ್ತುಸಾವಿರಯೋಜನ ದಳತೆಯೊಳುತ್ತರದಿಕ್ಕು, ವಾಯುವ್ಯದಿಕ್ಕುಗಳಲ್ಲಿ ಸಿದ್ಧಮುನಿಮುಖ್ಯಗಾಸ್ಪದವಪ್ಪ ಕನ್ನೆಯಿದ್ದ ಲವರ್ಣದ ಭೂಮಿಯನುಳ್ಳ ಚಂದ್ರಾಕಾರಭದ್ರಾಕಾರವೆಂಬ ದ್ವೀಪದ್ವಯಂ ಕೂಡಿವರ್ತಿಸುತ್ತಿರ್ಪವವರಲ್ಲಿ; ಕ್ರಮದಿಂ ಶಶಿದ್ಯುತಿ ಲೀಲಾಬ್ಜಕಾಂತಿಯ ಜನರು ಜಂಬುವೆಂಬ ಕಲ್ಪವೃಕ್ಷ ಫಲಾಹಾರಿಗಳಾಗಿ ಪದಿಮೂರುಸಾವಿರ ವರ್ಷದಾಯುಷ್ಯಂ ಬಡೆದು ರುದ್ರನಾಮಲಿಂಗ ಪೂಜಕರಾಗಿ ಸಂತೋಷಿಗಳಾಗಿರ್ಪರ್; ೪೭೭

ಹರಿವರ್ಷ :

ಬಳಿಕಾ ಮೇರುವಿನ ದಕ್ಷಿಣ ದಿಕ್ಕಿನಲ್ಲಿ ನಿಷಧ ಹೇಮಕೂಟಮೆಂಬ ಸೀಮಾ ನಗಯುಗಂಗಳಂತರಾಳದ ನವಸಹಸ್ರಯೋಜನ ಪ್ರದೇಶವೇ ರಜತವರ್ಣದ ಭೂಮಿಯುಳ್ಳ ಹರಿವರ್ಷವದೆ ಪೂರ್ವಪಶ್ಚಿಮಲವಣಾಬ್ಧಿ ಪರ್ಯಂತಮಾಗಿ ನೀಳವಹುದದರೊಳೇಳು ಕುಲಗಿರಿಗಳಲ್ಲಲ್ಲಿ ಜನಿಸಿದ ದಿವ್ಯನದಿಗಳುಂಟಾವರ್ಷದಲ್ಲಿಯು ರಜತಪ್ರಭಾಮಯ ಜನರು ಇಕ್ಷುವೆಂಬ ಕಲ್ಪವೃಕ್ಷ ರಸಾಸ್ವಾದನದಿಂ ಪನ್ನೆರಡುಸಾವಿರವರ್ಷದಾಯುಷ್ಯಂಬೆತ್ತು ಈಶಾನ್ಯನಾಮಲಿಂಗ ಪೂಜಕರಾಗಿ ಚಿರಸುಖಿಗಳಾಗಿರ್ಪರ್. ೪೭೮

ಕಿಂಪುರುಷ ವರ್ಷ :

ಬಳಿಕಾ ಹೇಮಕೂಟ ಹಿಮವತ್ಪರ್ವತದಂತರಾಳದೊಂಭತ್ತು ಸಾವಿರಯೋಜನ ಸ್ಥಲಮೆ ಸುವರ್ಣಮಯ ಭೂಮಿಯನುಳ್ಳ ಕಿಂಪುರುಷವರ್ಷವದೆ, ಮೂಡಲ್ಪಡುವಲ್ನೀಳಮೆನಿಸಿ, ಲವಣಸಮುದ್ರಾವಧಿಯಾಗಿಹುದದರೊಳೇಳು ಕುಲಗಿರಿಗಳಲ್ಲಲ್ಲಿ ಪುಟ್ಟಿದ ಸುರುಚಿರನದಿಗಳುಂಟಾ ವರ್ಷದಲ್ಲಿಯು ಹೇಮವರ್ಣದ ಜನರು ಪ್ಲಕ್ಷವೆಂಬ ಕಲ್ಪವೃಕ್ಷ ಫಲಾಹಾರದಿಂದಿಪ್ಪತ್ತುಸಾವಿರ ವರ್ಷದಾಯುಷ್ಯದಿಂದೀಶಾನನಾಮಲಿಂಗ ಪೂಜಕರಾಗಿ ಸುಖಜೀವಿಗಳಾಗಿರ್ಪರ್.

ಬಳಿಕೀ ಪ್ರಕಾರಮಾದ ವರ್ಷಾಷ್ಟಕದೊಳಿರ್ದ ಜನರ್ಗೆ ಕೃತಾದಿಯುಗಾನುಕ್ರಮದಿಂ ಜ್ಞಾನಾಯುಸ್ತೇಜೋಬಲ ಸಂಪದಾದಿಗಳಿಗೆ ವೃದ್ಧಿಕ್ಷಯಮಿಲ್ಲದೊಂದೇ ತೆರದಿಂದಿರ್ಪರ್. ೪೭೯

ಭಾರತ ವರ್ಷ :

ಮತ್ತಮಾ ಹಿಮವತ್ಪರ್ವತದಿಂದ ದಕ್ಷಿಣ ಸಾಗರ ಪರ್ಯಂತಮಾಗಿ ನವಸಹಸ್ರಯೋಜನ ಪ್ರದೇಶಮೆ ನಾನಾವರ್ಣದ ಭೂಮಿಯನುಳ್ಳ ಭಾರತವರ್ಷವದೆ ಹೆದೆಯೇರಿಸಿದ ಬಿಲ್ಲಿನಾಕಾರವಹುದು. ಆ ಭರತವರ್ಷಮೊಂದೇ ಬಹುಖಂಡಮಾಗಿ ರ್ಪುದಮೆಂತೆನೆ ! ೪೮೦

ಷಟ್‌ಚಕ್ರವರ್ತಿಗಳು :

ಪೂರ್ವದಲ್ಲಿ ಹರಿಶ್ಚಂದ್ರ, ನಳ, ಪುರುಪುಷ್ಕ, ಪುರೂರವ. ಸಗರ, ಕಾರ್ತ್ಯವೀರರೆಂಬ ಷಟ್‌ಚಕ್ರವರ್ತಿಗಳುಂ; ಗಯ, ಅಂಬರೀಶ, ಶಶಿಬಿಂದು, ರಂತಿ, ಪೃಥು, ಮರುತ್ವಾನ್ ಭರತ, ಸುಹೋತ್ರ, ರಾಮ, ದಿಲೀಪ, ರಘು, ರಂತಿದೇವ, ಯಯಾತಿ, ಮಾಂಧಾತೃ, (ನೃಗ), ಭಗೀರಥರೆಂಬ ಷೋಡಶ ಮಹಾರಾಯರುಗಳುಂ; ತಮ್ಮ ತಮ್ಮ ಸ್ಥಿತಿ ಕಾಲಂಗಳಲ್ಲಿ ದಾಸಿ, ಭೃತ್ಯ, ಪುತ್ರ, ಬಂಧು, ವಸ್ತ್ರ, ವಾಹನ, ಧನ, ಧಾನ್ಯವೆಂಬಷ್ಟೈಶ್ವರ್ಯಯುಕ್ತರಾಗಿ; ಸತಿ, ಸ್ನಾನ, ಭೋಜನ, ವಸ್ತ್ರ, ಗಂಧ, ಪುಷ್ಪ, ತಾಂಬೂಲ, ಶಯ್ಯಂಗಳೆಂಬಷ್ಟಭೋಗ ಸಂಪನ್ನರೆನಿಸಿ; ತಟಾಕ, ಧನನಿಕ್ಷೇಪ, ಬ್ರಹ್ಮಸ್ಥಾನ, ಸುರಾಲಯ, ವನ, ಸತ್ಕೃತಿ, ಪುತ್ರರೆಂಬ ಸಪ್ತಸಂತಾನಾನ್ವಿತರಾಗಿ, ೪೮೧

ರಾಜ ಲಕ್ಷಣ :

ಸಾಮ, ಭೇದ, ದಾನ, ದಂಡವೆಂಬ ಚತುರೋಪಾಯಗಳುಳ್ಳವರೆನಿಸಿ; ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಆಶ್ರಯವೆಂಬ ಷಡ್ಗುಣಸಮೇತರಾಗಿ; ಭೇದತಂತ್ರ, ಪರೀಕ್ಷಾತಂತ್ರ, ವಿಶ್ವಾಸತಂತ್ರ, ವಂಚನಾತಂತ್ರ, ಮಿತ್ರಕಾರ್ಯತಂತ್ರ ವೆಂಬ ಪಂಚತಂತ್ರ ಪ್ರವೀಣರೆನಿಸಿ; ಪ್ರಭಾಪಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿ ಯೆಂಬ ಶಕ್ತಿತ್ರಯ ಸಹಿತರಾಗಿ; ಕ್ಷಯ, ಸ್ಥಾನ, ವೃದ್ಧಿ,-ಯಜ ತೇಜ ಸುಪ್ರಭಾವ ಪ್ರತಾಪ. ಆಕ್ರೋಶ. ದಂಡಜವೆಂಬ ವರ್ಗತ್ರಯ ವಿಶಿಷ್ಟರೆನಿಸಿ; ಹಸ್ತ್ಯಶ್ವರಥ ಪದಾತಿಯೆಂಬ ಚತುರಂಗಬಲಸಮಗ್ರತೆಯಿಂದಲಕೃತರಾಗಿ; ವಿದ್ವಾಂಸರು, ಕವಿಗಳು. ಭಟ್ಟರು. ಗಾಯಕರು, ಪರಿಹಾಸಕರು, ಇತಿಹಾಸಜ್ಞರು. ಪುರಾಣಿಕರೆಂಬ ಸಭಾ ಸಪ್ತಾಂಗ ಪರಿವೇಷ್ಟಿತರೆನಿಸಿರ್ಪರ್ಂ. ಮತ್ತಮಾ ಸಭಾಮಧ್ಯಸ್ಥಿತ ದಿವ್ಯ ಸಿಂಹಾ ಸನದಿಕ್ಕೆಲದೋಲಗದಲ್ಲಿ ಕಿಕ್ಕಿರಿದಿರ್ದು ಕುಳ್ಳಿರ್ದ ಮಂತ್ರಿ ಮನ್ನೆಯ ಸಂಧಿವಿಗ್ರಹಿ ಸಾಮಂತ ಮೊದಲಾದ ಸಕಲನಿಯೋಗಿ ನಿಕರಂಗಳಿಂ. ೪೮೨

ಛಂದಸ್ಸು :

ಮತ್ತಮಲ್ಲಿ ಉಕ್ತ, ಅತ್ಯುಕ್ತ, ಮಧ್ಯಮೆ, ಪ್ರತಿಷ್ಠೆ, ಸುಪ್ರತಿಷ್ಠೆ ಗಾಯತ್ರಿ, ಉಷ್ಣಿಕ್ಕು, ಅನುಷ್ಟುಪ್, ಬೃಹತಿ, ಪಙ್ಕ್ತಿ ತ್ರಿಷ್ಟುಪ್, ಜಗತಿ, ಅತಿಜಗತಿ ಶಕ್ವರಿ ಅತಿಶಕ್ವರಿ ಅಷ್ಟಿ ಅತ್ಯಷ್ಟಿ ಧೃತಿ ಅತಿಧೃತಿ ಕೃತಿ ಪ್ರಕೃತಿ ಅತಿಕೃತಿ ವಿಕೃತಿ ಸಂಸ್ಕೃತಿ ಆಕೃತಿ ಉತ್ಕೃತಿಯೆಂಬ ಇಪ್ಪತ್ತಾರು ಛಂದಸ್ಸುಗಳನರಿದು ೪೮೩

ಅಲಂಕಾರಗಳು :

ಸಮಾಸೋಕ್ತಿ ಪರ್ಯಾಯೋಕ್ತಿ ಆಕ್ಷೇಪ ವ್ಯಾಜಸ್ತುತಿ ಉಪಮೇ ಯೋಪಮೆ ಅನನ್ವಯ ಅತಿಶಯೋಕ್ತಿ ಪರಿಕರ ಅಪ್ರಸ್ತುತಪ್ರಶಂಸೆ ರೂಪಕ ಪರಿಣಾಮ ಸಂದೇಹ ಭ್ರಾಂತಿಮತ್ತ ಉಲ್ಲೇಖನ ಅಪಹ್ನವ ಉತ್ಪ್ರೇಕ್ಷೆ ಸ್ಮೃತಿಸಾಮ್ಯಯೋಗಿತೆ ದೀಪಕ ಪ್ರತಿವಸ್ತೂಪಮೆ ದೃಷ್ಟಾಂತ ಸಹೋಕ್ತಿ ವ್ಯತಿರೇಕ ನಿದರ್ಶನ ಶ್ಲೇಷ ಉಪಮೆ ವಿನೋಕ್ತಿ ವಿರೋಧ ವಿಭಾವನೆ ವಿಶೇಷೋಕ್ತಿ ವಿಷಮ ಅರ್ಥಾಂತರನ್ಯಾಸ ಉದ್ಯೋಗ ಅಧಿಕ ಅನ್ಯೋನ್ಯ ಕಾರಣಮಾಲೆ ಏಕಾವಲಿ ವ್ಯಾಘಾತ ಸೂಕ್ಷ್ಮ ಉತ್ತರ ಮಾಲಾದೀಪಕ ವಾಚ್ಯಲಿಂಗ ಅನುಮಾನ ಸಾರ ಅರ್ಥಾಪತ್ತಿ ಯಥಾಸಂಖ್ಯಾ ಪರ್ಯಾಯ ಪರಿವೃತ್ತಿ ವಿಕಲ್ಪ ಪರಿಸಂಖ್ಯೆ ಸಮುಚ್ಚಯ ಸಮಾಧಿ ಪ್ರತ್ಯಾನೀಕ ಪ್ರತೀಪ ಸಮಾನ್ಯ ಸತ್ಯಸಂಗತಿ ತದ್ಗುಣ ಅತದ್ಗುಣ ವಿಶೇಷಮಿಲನ ವಾಚ್ಯೋಕ್ತಿ ವಕ್ರೋಕ್ತಿ ಸ್ವಭಾವೋಕ್ತಿ ಭಾವಿಕ ಉದಾತ್ತಮೆಂಬ ಅರವತ್ತೈದಲಂಕಾರಗ ಳೊಡಗೂಡಿ. ೪೮೪

ಮಹಾಕಾವ್ಯ ವರ್ಣನಾದಿಗಳು :

ಪುರ, ಗಿರಿ, ಋತು, ನಂದನ, ಸೋಮೋದಯ, ಸೂರ್ಯೋದಯ, ಸಮುದ್ರ, ಜಲಕೇಳಿ, ಮಧುಪಾನಗೋಷ್ಠಿ ಸಂಭೋಗ, ವಿಪ್ರಲಂಭ, ವಿವಾಹ, ಪುತ್ರೋತ್ಸಾಹ, ಮಿತ್ರೋತ್ಸಾಹ, ಮಂತ್ರ, ನೃಪತಿ, ದ್ಯೂತ, ಮೃಗಯಾನವೆಂಬ ಹದಿನೆಂಟು ವರ್ಣನೆ ಸಹಿತಮಾಗಿ; ಶ್ಲೇಷ ಪ್ರಸಾದ ಸಮತೆ ಮಾಧುರ್ಯ ಸುಕುಮಾರತೆ ಅರ್ಥವ್ಯಕ್ತಿ ಉದಾರತ್ವ ಓಜಸ್ಸು ಕಾಂತಿ ಸಮಾಧಿಗಳೆಂಬ ದಶಗುಣಪ್ರಾಣವಿಡಿದು. ೪೮೫

ಕಾವ್ಯರೀತ್ಯಾದಿಗಳು :

ಗೌಡರೀತಿ, ವೈದರ್ಭರೀತಿ, ಪಾಂಚಾಲರೀತಿಯೆಂಬ ರೀತಿತ್ರಯ ಸಮೇತ ಮಾಗಿ; ರಸ, ಭಾವ ಚಿತ್ರ ಚಮತ್ಕಾರಂದೋರಿ; ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯಮೆಂಬಷ್ಟಪ್ರಕಾರಮಂ ಪ್ರಪಂಚಿಸುವ ವ್ಯಾಕರಣದೊಪ್ಪಂದಪ್ಪದೆ; ಅನರ್ಥಕ ಶ್ರುತಿಕಠೋರ ವ್ಯಾಹತಾರ್ಥ ಅಲಕ್ಷಣ ಸ್ವಸಂಕೇತ ಪ್ರಕ್ಲ್ಪಪಾರ್ಥ ಅಸಮ್ಮತ ಅಪಕ್ರಮವೆಂಬವೆಂಟು ಪದದೋಷಂ ಪೊರ್ದದೆ; ಖಂಡಿತ ವ್ಯಸ್ತಸಂಬಂಧ ಅಸಮ್ಮತ ಅಪಕ್ರಮ ಛಂದೋನೀತಿ ಯತಿಭ್ರಷ್ಟ ದುಷ್ಟ ಅಪಕ್ರಿಯೆಯೆಂಬೆಂಟು ವಾಕ್ಯದೋಷಮಿಲ್ಲದೆ; ಶಬ್ದಪುನರುಕ್ತಿ ಅರ್ಥಪುನರುಕ್ತಿ ಅರ್ಥಶೂನ್ಯ ವಿರುದ್ಧಾರ್ಥ ಚ್ಯುತಕ್ರಮ ವ್ಯವಹಿತ ವಿಸಂಧಿ ನೇಯಾರ್ಥವೆಂಬೆಂಟು ಶಬ್ದದೋಷಂ ಸಮನಿಸದೆ; ಗದ್ಯ ಪದ್ಯ ಚಂಪುವೆಂಬ ತ್ರಿವಿಧಕಾವ್ಯ ಪ್ರಬಂಧಮಂ; ಸಂಸ್ಕೃತ ಪ್ರಾಕೃತ ಅಪಭ್ರಂಶ ಪೈಶಾಚಿಕಾದಿ ಭಾಷಾಭೇದದಿಂ ಪೇಳ್ವ ಲಾಕ್ಷಣಿಕರಪ್ಪ ಕವೀಶ್ವರರಿಂ. ೪೮೬

ಗಮಕಿಗಳು :

ಮತ್ತಂ ತಾನಮಾನಂದೋರಿ ವಿಶ್ರಮಣಮರಿದು, ಪದನಂ ವ್ಯಕ್ತಿಗೆಯ್ದು, ಕೇಳ್ವರಂ ಕಿವಿಗೊಳಿಸಿ, ಮೃದು ಮಧುರ ವರ್ಣೋಚ್ಚಾರಣಂ ಮಾಳ್ಪಗಮಕಿಗಳಿಂ; ೪೮೭

ವಾದಿಗಳು :

ಮತ್ತಂ ನ್ಯಾಯ ವೈಶೇಷಿಕ ಖಂಡನ ಚಿಂತಾಮಣ್ಯಾದಿ ಶಾಸ್ತ್ರಕೋವಿದರಪ್ಪ ವಾದಿಗಳಿಂ ೪೮೮

ವಾಗ್ಮಿಗಳು :

ಮತ್ತಂ ಮಧುರ ರಸಪೊಸರ್ವ ನವೀನ ವಚನರಚನೆಗಳಿಂ ಕೇಳ್ವರ ಕರ್ಣ ರಸಾಯನಮಾಗೆ ವಾಗ್ವಿಭವಂದೋರ್ಪ ವಾಗ್ಮಿಗಳಿಂ ೪೮೯

## ನವರಸ ವ್ಯಾಪಾರ ಪಾರಂಗತರು :

ಬಳಿಕ ರತಿ, ಹಾಸ, ಶೋಕ, ಕ್ರೋಧ, ಉತ್ಸಾಹ, ಭಯ, ಜಿಗುಪ್ಸೆ, ವಿಸ್ಮಯ, ಶಮೆಯೆಂಬ ಕ್ರಮದಿಂ ಶೃಂಗಾರಾದಿ ನವರಸಕ್ಕೆ ಬೀಜಭೂತಂಗಳಾದ ಸ್ಥಾಯೀಭಾವಂಗಳ್ಗೆ ದಕ್ಷಿಣಾದಿ ನಾಯಕ ಹೃದಯದಲ್ಲಿ ಸ್ಥಾಯಿಯಾಗಿರ್ದು; ಬಳಿಕ ಸ್ವಕೀಯೆ ಮೊದಲಾದ ನಾಯಕಿಯರೆಂಬಾಲಂಬನ ವಿಭಾವಂಗಳಿಂದಂಕುರಿಸಿ; ಬಳಿಕ ಇಂದು ಮಂದಾನಿಲಾದಿ ಉದ್ದೀಪನ ವಿಭಾವಂಗಳಿಂ ಪ್ರಕಟಿಸಿ; ಮೇಲೆ ಪರ ಶರೀರಗತಂಗಳಾಗಿ ಆಯಾ ರಸಕಾರ್ಯಮಪ್ಪುದರಿಂ, ರಸಾನಂತರಭಾವಿಗಳಾದ ಸ್ತಂಭ, ಸ್ವೇದ, ರೋಮಾಂಚ, ಸ್ವರಭೇದ, ಕಂಪನ, ವಿವರ್ಣ, ಅಶ್ರು, ಪ್ರಳಯ ಮೆಂಬಷ್ಟ ಸಾತ್ವಿಕಂಗಳಿಂ; ದರಹಸನ, ಕಟಾಕ್ಷೇಕ್ಷಣ, ಭ್ರೂವಿಕ್ಷೇಪಣಾದಿ ಚೇಷ್ಟಾ ವಿಶೇಷಂಗಳೆಂಬ ಅನುಭಾವಂಗಳಿಂ; ಮತಿ,ಲಜ್ಜೆ, ಆವೇಗ,ಶಂಕೆ, ಮರಣ,ಚಪಲತೆ, ಹರ್ಷ, ನಿರ್ವೇಗ, ದೈನ್ಯ, ಸ್ಮೃತಿ, ಮೋಹ, ಆಲಸ್ಯ, ಗರ್ವ, ಶ್ರಮ, ಮದ, ಜಡತೆ, ಜ್ಞಾನ, ಸುಪ್ತಿ, ನಿದ್ರೆ,ಧೃತಿ, ತರ್ಕ,ಉನ್ಮಾದ,ಬೋಧ, ಆಮಯ, ಭಯ, ವಿಷಾದ, ಔತ್ಸುಕ್ಯ, ಅಮರ್ಷ ಚಿಂತೆ ಅಸೂಯೆ ಅವಹಿತ್ಥ ಉಗ್ರ ಅಪಸ್ಮಾರ ಮೆಂಬ ಮೂವತ್ತಮೂರು ಸಂಚಾರಿ ಭಾವಂಗಳಿಂ ಪರಿವರ್ಧಿಸಿ; ಬಳಿಕ ಶೃಂಗಾರ ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತಂಗಳೆಂಬ ನವರಸಾವಸ್ಥೆಯಂ ಪಡೆವುತ್ತಿರ್ಪವೆಂದು ಲೌಕಿಕವಾದ ನವರಸವ್ಯಾಪಾರ ಪಾರಂಗತರಿಂ. ೪೯೦

## ರತ್ಯಾತ್ಮಕ ಮನೋವೃತ್ತಿವೈಕಲ್ಯ:

ಬಳಿಕ ಪರಮಾರ್ಥದಲ್ಲಿಯಾಮೊಡೆ, ರತಿಯೊಂದೇ ಆಯಾಯ ಉಪಾಧಿ ವಿಷಯಭೇದದಿಂದಾಯಾಯ ಸ್ಥಾಯೀಭಾವಾಂತರ ಸಂಜ್ಞೆಯಂ ಪಡೆದು, ಆಯಾಯ ವಿಭಾವ, ಅನುಭಾವ, ಸಾತ್ವಿಕಸಂಚಾರಿ ಭಾವಂಗಳಿಂದಾಯಾಯ ಶೃಂಗಾರಾದಿ ರಸಸಂಜ್ಞೆಯಂ ಪಡೆವುತ್ತಿರ್ಪುದದೇತೆಂದೊಡೆ: ರತಿಯೊಂದೇ ಕಾಂತಾ ದಿಗಳ ವಿಷಯಮಾಗಿ ರಾಗಮಯಮಹತನದಿಂ ಶೃಂಗಾರಸಂಜ್ಞೆಯಂ, ಪುತ್ರಾದಿಗಳ ವಿಷಯಮಾಗಿ ಭಕ್ತಿವಾತ್ಸಲ್ಯನಾಮಧೇಯಮುಮಂ, ಮಿತ್ರಾದಿಗಳ ವಿಷಯ ಮಾಗಿ ಸ್ನೇಹನಾಮಮುಮಂ, ಬಂಧುವಿಷಯಮಾಗಿ ಪ್ರೇಮಾಹ್ವಯಮುಮಂ, ನೃಪ ಗುರು ದೇವತಾವಿಷಯಮಾಗಿ ಭಕ್ತಿವಾಚಕಮಂ, ಆತ್ಮವಿಷಯಮಾಗಿ ಪರಮಪ್ರೀತಿವೆಸರಂ, ಅಪ್ರಾಪ್ತವಸ್ತು ವಿಷಯಮಾಗಿ ಇಚ್ಛಾಭಿಧಾನಮಂ ಪಡೆದು. ಬಳಿಕ ಹಸಿತವ್ಯ ಶೋಚ್ಯ ದ್ವೇಷ್ಯ ಪ್ರತಿಭಟ ಭೀಷಣ ಜಿಗುಪ್ಸನೀಯ ಆಶ್ಚರ್ಯ ಸೌಮ್ಯಾಸ್ಪದಂಗಳೆಂಬೆಂಟು ಆಲಂಬನ ವಿಭಾವಂಗಳಿಂ; ಕ್ರಮದಿಂ ಹಾಸ್ಯ ಕರುಣ ರೌದ್ರ ವೀರ ಭಯಾನಕ ಜಿಗುಪ್ಸೆ ವಿಸ್ಮಯ ಶಾಂತಂಗಳೆಂಬಷ್ಟರಸಂಗಳಹ ವೆಂದು ಅಲೌಕಿಕವಾದ ನವರಸಸ್ಥಿತಿ ವಿಪಶ್ಚಿತರಿಂ.

೪೯೧

ನಾಯಕಾದಿ ಭೇದಗಳು :

ಬಳಿಕ ಧೀರೋದಾತ್ತ, ಧೀರೋದ್ಧತ, ಧೀರಲಲಿತ, ಧೀರಶಾಂತರೆಂಬ ಚತುರ್ವಿಧ ಮಹಾನಾಯಕರಿಂ; ಅನುಕೂಲ, ದಕ್ಷ, ಶಠ, ದುಷ್ಟರೆಂಬ ನಾಲ್ಕು ತೆರೆದ ಶೃಂಗಾರನಾಯಕರಿಂ; ಶಶ, ವೃಷ, ಹಯರೆಂಬ ಪ್ರಮಾಣ ಪುರುಷರಿಂ, ಮಂದವೇಗ ಮಧ್ಯವೇಗ ಚಂಡವೇಗರೆಂಬ ರತಿಪರಿಣತರಿಂ; ಬಳಿಕ ವಿಟ ವಿದೂಷ ಪೀಠಮರ್ದನ ನಾಗರಿಕರೆಂಬ ಚತುರ್ವಿಧ ಭೋಗಸಖರಿಂ. ೪೯೨

ನಾಯಕ್ಯಾದಿಗಳು:

ಬಳಿಕ ಸ್ವಕೀಯೆ, ಪರಕೀಯೆ, ಪಣ್ಯೆಯರೆಂಬ ತ್ರಿವಿಧನಾಯಕಿಯರಿಂ; ಜೇಷ್ಠೆ ಕನಿಷ್ಠೆಯರೆಂಬ ದ್ವಿವಿಧ ಗುಣವಿಶೇಷ ವನಿತೆಯರಿಂ; ಎಂಟು, ಒಂಭತ್ತು ಹನ್ನೆರಡು, ಇಪ್ಪತ್ತು, ಮೂವತ್ತು, ನಾಲ್ವತ್ತು, ಐವತ್ತುವರ್ಷಾನುಕ್ರಮದಿಂ ಮೊಳೆಜವ್ವನ, ಎಳೆಜವ್ವನ, ನೆರೆಜವ್ವನ, ತುಂಬುಜವ್ವನ, ಮೊಟುಜವ್ವನ, ಬಲು ಜವ್ವನ, ಬಿಡುಜವ್ವನಂಗಳಿಂ; ಗೌರಿ, ಕನ್ನಿಕೆ, ಬಾಲೆ, ಮುಗ್ಧೆ, ವಿದಗ್ಧೆ, ಪ್ರಗಲ್ಭೆ ಇಚ್ಛೆಗಾರ್ತಿಯರೆಂದು ಪೆಸರ್ವಡೆದ ಸಪ್ತವಯೋವಿಶಿಷ್ಟಕಾಂತೆಯರಿಂ; ಶ್ಲೀಥೆ ಮಧ್ಯೆ ಘನಯರೆಂಬ ಆಕಾರಯುಕ್ತ ಸೀಮಂತಿನಿಯರಿಂ; ಉತ್ತಮೆ ಮಧ್ಯಮೆ ಜಘನೆಯರೆಂಬತ್ರಿವಿಧಕೋಪಪ್ರಸಾದ ಲಕ್ಷಣ ಲಕ್ಷಿತ ಲಲನೆಯರಿಂ, ಧೀರೆ ಅಧೀರೆಯರೆಂಬ ದ್ವಿವಿಧ ಪ್ರೌಢಾಂಗದೆಯರಿಂ; ಕನ್ಯೆ, ಊಢೆಯರೆಂಬೆರಡು ಪ್ರಕಾರದ ಪರಕೀಯ ಭೇದನಾರಿಯರಿಂ. ೪೯೩

ನಾಯಿಕಾ ವಿಶೇಷಗಳು:

ಸ್ವಾಧೀನಪತಿಕೆ, ಖಂಡಿತೆ, ವಿಪ್ರಲಂಭೆ, ಅಭಿಸಾರಿಕೆ, ವಾಸಕಸಜ್ಜಿಕೆ ಗತಭರ್ತಾರಿಕೆ ಅಭಿಸಂಧಿಕೆ ಸಮುತ್ಕೆಯರೆಂಬೆಂಟುತೆರದವಸ್ಥಾಕಾಮಿನಿಯರಿಂ; ಮೋಟ್ಟಾಯಿತೆ, ಬಿಬ್ಬೋಕೆ, ಲಲಿತೆ, ಲೀಲೆ ಕಿಲಕಿಂಚಿತೆ, ವಿಚ್ಛಿತೆ,ವಿಳಾಸೆ, ವಿಹೃತೆ ವಿಭ್ರಮೆ, ಕುಟ್ಟಮಿತೆಯರೆಂಬ ದಶಕೇಳಿಭಾವ ವಿಳಾಸಿನಿಯರಿಂ; ಹಸ್ತಿನಿ ಶಂಕನಿ ಚಿತ್ತನಿ ಪದ್ಮಿನಿಯರೆಂಬ ನಾಲ್ಕು ಜಾತಕ ಸ್ತ್ರೀಯರಿಂ; ಹರಿಣಿ ಅಶ್ವಿ ಇಭಕಿಯರೆಂಬ ಪ್ರಮಾಣಪರಿಮಿತ ಪ್ರಮದೆಯರಿಂ: ಮಂದವೇಗಿ ಮಧ್ಯವೇಗಿ ಚಂಡವೇಗಿಯರೆಂಬ ರತಿಭೇದ ಕಾಂತೆಯರಿಂ; ದೇವಸತ್ವ, ಯಕ್ಷಸತ್ವ ಗಂಧರ್ವಸತ್ವ ನರಸತ್ವ, ನಾಗಸತ್ವ, ಕಾಕಸತ್ವ,ವಾನರಸತ್ವ, ಮುನಿಸತ್ವ, ಪಿಶಾಚಸತ್ವ, ರಾಕ್ಷಸಸತ್ವ ಕಿನ್ನರಸತ್ವ, ಖರಸತ್ವಮೆಂಬ ದ್ವಾದಶ ಸತ್ವಸತಿಯರಿಂ. ೪೯೪

ಸಖೀಪ್ರಮುಖರು:

ಬಳಿಕ ಸಾರಿಕೆ, ಚತುರಿಕೆ ಸಹಸಂಚಾರಿಕೆ ದೂತಿಕೆಯರೆಂಬ ಚತುರ್ವಿಧ ಸಖಿಯರಿಂ; ಅಭಿಮಾನಪ್ರೀತಿ, ವಿಭವಪ್ರೀತಿ, ಸದೃಶಪ್ರೀತಿ, ವಿಷಯಪ್ರೀತಿಯೆಂಬ ನಾಲ್ಕುತೆರದಪ್ರೀತಿ ತತ್ಪರರಿಂ; ಲಜ್ಜಾಮೋಹ, ವಿಭವಮೋಹ, ಕರುಣಮೋಹ,

ನಿಜಮೋಹವೆಂಬ ಮೋಹ ಚತುಷ್ಟಯ ವಿಶಿಷ್ಟರಿಂ; ಕೂರ್ಮಮೋಹ, ಮತ್ಸ್ಯ ಮೋಹ, ಮೃಗಮೋಹವೆಂಬುತ್ತಮ ಮಧ್ಯಮ ಅಧಮ ಮೋಹಮಯರಿಂ; ಬಳಿಕ ಬೊಟ್ಟು, ಅಡಿ, ಪರಡು, ಮೊಳಕಾಲು, ಜಘನ, ಪೊಕ್ಕಳು, ಎದೆ, ಕುಚ, ಕಕ್ಷ, ಕೊರಲು, ಕದಪು, ತುಟಿ, ಕಣ್ಣು, ಪಣೆ, ನೆತ್ತಿಗಳೆಂಬ ಪಂಚದಶಕಲಾಸ್ಥಾನ ಶುಕ್ಲಪಕ್ಷಾದಿ ತಿಥಿಯೋಗ ಕ್ರಮವಿಚಕ್ಷಣರಿಂ. ೪೯೫

ಆಲಿಂಗನ ಚುಂಬನಾದಿಗಳು;

ಪುಷ್ಕರ, ವಿವಿಧಕ, ದೃಷ್ಟಕ, ಪೀಡಿನ, ವೃಕ್ಷಾರೋಹಣ, ಲತಾವೇಷ್ಟನ, ತಿಲತಂಡುಲಾಖ್ಯ, ಕ್ಷೀರನೀರ, ಊರೂಪಗೂಡ, ಜಘನೋಪಗೂಡ, ಸ್ತನಾಶ್ಲೇಷೆ, ಲಲಾಟಕವೆಂಬ ದ್ವಾದಶಾಲಿಂಗಿಗಳಿಂ; ನಿಮಿತ್ತಿಕ, ಸದ್ವಟಕ, ಸ್ಫುರಿತಕ, ಭ್ರಾಂತಕ ತಿರ್ಯಕ್ಕು, ಅತಿತೃಷ್ಯಕ, ಉತ್ತರ ಸಂಘಟಕ, ಜಿಹ್ವಾಮೇಳನ, ಪ್ರತಿಭೋಧ ಜಿಹ್ವಿಕೆ ಮಾದು ಜಿಹ್ವಾಯೋಗವೆಂಬ ದ್ವಾದಶಚುಂಬನ ಸಂಭ್ರಮಿಗಳಿಂ ೪೯೬

ದಂತಕ್ಷತ ನಖಕ್ಷತಾದಿಗಳು :

ಗೋಪಗೂಢ ಅಂಕುಲಯಾನಕ, ಪ್ರವಾಳಮಣಿ, ಮಣಿಮಾಲೆ, ಖಂಡಾಭ್ರಕ, ಮಂಡಲಾಕೃತಿ, ಕ್ರೋಡಚರ್ವಿತ ವರಾಹಚರ್ವಿತವೆಂಬಷ್ಟ ವಿಧರಾದ ದಶನಕ್ಷತಾ ಲಾಕ್ಷಣಿಕರಿಂ; ಪಂಚನಖಯೋಗ ದ್ವಂದ್ವಯೋಗ ಅರ್ಧಚಂದ್ರಕ ಮಂಡಲಕ ಮಯೂರಪಥ ಶಶಪ್ಲುತ ಉತ್ಪಳವೆಂಬ ಸಪ್ತವಿಧ ನಖರೋಪಹತಿ ವಿಹಿತರಿಂ; ಮದನಾಂದೋಳನ, ಮದನಛತ್ರ ಪೂರ್ಣಚಂದ್ರಾದಿ ನಾಡೀ ಮರ್ಮಜ್ಞರಿಂ; ೪೯೭

ರತಿಚತುರರು :

ಶಯ್ಯಾತೋರುಕರಣ, ವಿಕೃತೋರುಕರಣ, ತಿರ್ಯಕ್ಕರಣ, ಸ್ಥಿರಿಕರಣ, ಉದಾನಕಾದ್ಯನೇಕ ಕರಣ ಪರಿಣತರಿಂ; ಪ್ರಚ್ಛನ್ನ ಸಂಭೋಗ, ಪ್ರಕಾಶಸಂಭೋಗ ವೆಂಬ ರತಿಕಲಾಕುಶಲರಿಂ; ಆದಿ, ಮಧ್ಯ, ಅಂತ್ಯವೆಂಬ ರತಿತಂತ್ರ ಚಾತುರ್ಯರಿಂ; ಪೂರ್ವಾನುರಾಗ, ಮಾನಾಖ್ಯ, ಪ್ರವಾಸ, ಕರುಣಾತ್ಮಕವೆಂಬ ವಿಯೋಗಚತುಷ್ಟಯ ವಿಶಿಷ್ಟರಿಂ; ಪ್ರಚ್ಛನ್ನ, ಪ್ರಕಾಶ, ವಿಪ್ರಲಂಭವಿದರಿಂ; ಕಾರ್ಶ್ಯ, ಜಾಗರಣ, ಸಂತಾಪನವೆಂಬ ಅವಸ್ಥಾತ್ರಯ ಪರೀಕ್ಷಕರಿಂ; ಉನ್ಮಾದನ, ಮದನ, ಮೋಹನ ಸಂತಾಪನ, ವಶೀಕರಣವೆಂಬ ಪಂಚಮಂತ್ರಬಾಣ ಪ್ರತಾಪ ಪ್ರವೀಣರಿಂ ಅಶೋಕೆ, ಅರವಿಂದ ಚೂತ ಮಲ್ಲಿಗೆ ನೈದಿಲೆಯೆಂಬ ಪಂಚಕುಸುಮಾಸ್ತ್ರ ರೋವಿದರಿಂ. ೪೯೮

ದಶಕಾಮಾವಸ್ಥೆಗಳು :

ಬಳಿಕಾ ಪಂಚಬಾಣಂಗಳಿಗೆ ಲಕ್ಷ್ಯಸ್ಥಾನಮಾದ ಮಸ್ತಕ, ಮುಖ, ವಕ್ಷ ಪೃಷ್ಠ, ಹೃದಯವೆಂಬ ಪಂಚಾವಯವಂಗಳಿಂ; ಕ್ರಮದಿಂದೊಂದಕ್ಕೆ ಎರಡೆರಡಾಗಿ ಪುಟ್ಟುವ ಅಭಿಲಾಶೆ, ಚಿಂತೆ, ಸಂಸ್ಮೃತಿ, ವಿಭುಗುಣನುತಿ ಸಂತಾಪನ ಕ್ರಿಯಾದ್ವೇಷ ವಿಕಳ, ಮೌನ, ಮೂರ್ಛೆ, ಮರಣವೆಂಬ ದಶಾವಸ್ಥಾ ವಿಚಾರಪರರಿಂ ೪೯೯

# ಸಂಗೀತ ವಿಚಾರ

## ಸ್ವರೋತ್ಪತ್ತ್ಯಾದಿಕ್ರಮ :

ಅನಂತರದಲ್ಲಿ ಅಕಾರ ಉಕಾರ ಮಕಾರವೆಂಬ ಮೂರುಬೀಜಾಕ್ಷರಂಗಳು, ಅಕಾರವೇ ರಜೋಗುಣಾತ್ಮಕ ಬ್ರಹ್ಮನು. ಉಕಾರವೇ ಸತ್ವಗುಣಾತ್ಮಕ ವಿಷ್ಣು ಮಕಾರವೇ ತಮೋಗುಣಾತ್ಮಕ ರುದ್ರನು. ಮತ್ತಮಾ ಅಕಾರವೇ ವಾಮನಾಸಪುಟದ ಈಡೆಯೆಂಬ ಚಂದ್ರನು. ಉಕಾರವೇ ದಕ್ಷಿಣನಾಸಾಪುಟದ ಪಿಂಗಲೆಯೆಂಬಸೂರ್ಯನು ಮಕಾರವೇ ತನ್ಮಧ್ಯದ ಸುಷುಮ್ನೆಯೆಂಬಗ್ನಿ. ಬಳಿಕ ಅಕ್ಷರತ್ರಯದೊಂದುಗೂಟದಿಂ ಸಕಲ ದೇವತಾ ಮಂತ್ರಾತ್ಮಕಮಾದೋಂಕಾರವಾಯಿತ್ತು. ೫೦೦

## ದಶವಿಧ ನಾದಗಳು :

ಮತ್ತಮಾ ಓಂಕಾರವೆಂಬ ನಾದದಿಂ ಸ್ವರ,ನಿರ್ಘೋಷ, ನಿರ್ಣಯಧ್ವನಿ,ವಾಸ ಧ್ವನಿ, ಕಹಳಧ್ವನಿ, ಶಂಖಧ್ವನಿ, ಮೇಘಧ್ವನಿ, ಮೃದಂಗಧ್ವನಿ, ಭೇರಿಧ್ವನಿ, ಮಂದ್ರ ಧ್ವನಿಯೆಂಬ ದಶನಾದಂಗಳಾದವವರಲ್ಲಿ ಮೊದಲಸ್ವರವೇ ನಾಭಿ, ಉರ, ಕಂಠವೆಂಬ ತ್ರಿಸ್ಥಾನದಿಂ ಪುಟ್ಟುಗುಂ, ಅದೇ ಜೀವನಿಷ್ಟಮಾದ ಮಾರುತೋದ್ಗತಿಯಿಂದಭಿ ವ್ಯಕ್ತವಾಗಿ ಹೃದಯ, ಕಂಠ, ಶಿರಸ್ಸೆಂಬ ಸ್ಥಾನತ್ರಯದಲ್ಲಿ ಕ್ರಮದಿಂ ಮಾಧುರ, ಮಂದ್ರ,ತಾರವೆಂಬ ತ್ರಿವಿಧಸ್ವರ ಭೇದಾತ್ಮಕತ್ವಮಂ ಪಡೆಯಿತ್ತು. ಆ ಸ್ವರಂಗಳಿಂದವೆ ಷಡ್ಜಾದಿ ಸಪ್ತಸ್ವರಂಗಳಾದವೆಂದು ಪರಿಭಾವಿಸಿ. ೫೦೧

## ಸಪ್ತ ಸ್ವರೋತ್ಪತ್ತಿ ಸ್ಥಾನ ಮುಂತಾದ ಗಾನಶಾಸ್ತ್ರ :

ಬಳಿಕಾ ಸಪ್ತಸ್ವರಂಗಳುತ್ಪತ್ತಿ ಕ್ರಮದಲ್ಲಿ ಪರಶಿವನ ಈಶ್ವರ, ಸದ್ಯೋಜಾತ, ವಾಮದೇವ,ಅಘೋರ,ತತ್ಪುರುಷ,ಈಶಾನ,ನಿರಂಗವೆಂಬೇಳುಮುಖ ಕ್ರಮವಿಡಿದು ಷಡ್ಜ, ಋಷಭ,ಗಾಂಧಾರ, ಮಧ್ಯಮ, ಪಂಚಮ, ಧೈವತ,ನಿಷಾದವೆಂಬ ಸಪ್ತಸರ್ವಂ ಗಳಾದವು. ಬಳಿಕ ಕಂಠ, ಶಿರಸ್ಸು, ನಾಸಿಕ, ಹೃದಯ, ಮುಖ, ತಾಲುಗೆ, ಪೂರ್ವಾಂಗವೆಂಬವೆ ಪರಿವಿಡಿದು ಆ ಷಡ್ಜಾದಿ ಸ್ವರ ಜನನಸ್ಥಾನಂಗಳು. ೫೦೨

## ಸ್ವರಕಾಲ ಧ್ವನಿ ನಕ್ಷತ್ರಾದಿಗಳು :

ಉದಯ, ಮಧ್ಯಾಹ್ನ, ಅಪರಾಹ್ನ, ಅಸ್ತಮಯ,ಪೂರ್ವರಾತ್ರ, ಮಧ್ಯರಾತ್ರ, ನಿಶಾವಸಾನವೆಂಬವೆ ತರುವಾಯಿಂದಾ ಷಡ್ಜಾದಿ ಸ್ವರೋತ್ಪತ್ತಿ ಕಾಲಂಗಳು. ಮಯೂರಧ್ವನಿ, ವೃಷಭಧ್ವನಿ, ಅಜಧ್ವನಿ, ಸಿಂಹಧ್ವನಿ, ಕೋಕಿಲಧ್ವನಿ, ಜಾತ್ಯಶ್ವ ಧ್ವನಿ, ಮದಗಜಧ್ವನಿಯೆಂಬವೆ ಪರಿಪಾಟಿಯಿಂದಾ ಷಡ್ಜಾದಿ ಸ್ವರಧ್ವನಿಭೇದಂಗಳು. ಆರ್ದ್ರ, ಪೂರ್ವಾಷಾಡ, ರೇವತಿ, ವಿಶಾಖ, ಮೂಲ, ಅನೂರಾಧ, ಮಖಾಯೆಂಬವೆ ಪರಿಕ್ರಮದಿಂದಾ ಷಡ್ಜಾದಿ ಸ್ವರಜನನ ನಕ್ಷತ್ರಂಗಳು. ಅಮಾವಾಸ್ಯೆ, ತ್ರಯೋದಶಿ, ಪಂಚಮಿ, ಅಷ್ಟಮಿ, ಸಪ್ತಮಿ, ತದಿಗೆ, ನವಮಿಯೆಂಬವೆ ತರುವಾಯಿಂದಾ ಷಡ್ಜಾದಿ

ಸ್ವರತಿಥಿಗಳು. ಅಂಗೀರಸ, ಭೃಗು, ಕಶ್ಯಪ, ವಶಿಷ್ಠ, ನಾರದ, ಅತ್ರಿ, ಕಪಿಲರೆಂಬವರೆ ಕ್ರಮದಿಂ ಷಡ್ಜಾದಿ ಸ್ವರಋಷಿಗಳು. ಚಾಮುಂಡಿ, ಬ್ರಾಹ್ಮಿ ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಮಾಹೇಂದ್ರಿಯರೆಂಬವರೆ ಕ್ರಮದಿಂದಾ ಷಡ್ಜಾದಿ ಸ್ವರದಧಿದೇವತೆಗಳು. ಅರುಣಾಬ್ಜ, ಕಪಿಲ, ಹೇಮ, ನೀಲೋತ್ಪಲ, ಕೃಷ್ಣ, ಶ್ವೇತ, ಬಹುವರ್ಣವೆಂಬವೆ ಅನುಕ್ರಮದಿಂದ ಷಡ್ಜಾದಿ ಸ್ವರವರ್ಣಂಗಳು. ಷಡ್ಜ, ಮಧ್ಯಮ, ಪಂಚಮವೆಂಬ ಮೂರು ಬ್ರಾಹ್ಮಣಜಾತಿ. ಋಷಭ, ಧೈವತವೆಂಬೆರಡೆ ಕ್ಷತ್ರಿಯ ಜಾತಿ. ಗಾಂಧಾರ, ನಿಷಾದವೆಂಬೆರಡೆ ವೈಶ್ಯಜಾತಿಗಳು ಬೇರೆ ಬೇರೆ ಅಂತರ ಕಾಕುಳಿಯೆಂಬೆರಡು ಸ್ವರಂಗಳೇ ಶೂದ್ರಜಾತಿಗಳು. ಶೃಂಗಾರ ಹಾಸ್ಯ ಕರುಣ ರೌದ್ರ ವೀರ ಭಯಾನಕ ಬೀಭತ್ಸಂಗಳೆಂಬವೆ ಕ್ರಮದಿಂ ಷಡ್ಜಾದಿ ಸ್ವರ ರಸಂಗಳು. ಆಯುರ್ವೃದ್ಧಿ, ಸೌಭಾಗ್ಯ ಶೋಭನ, ಸುವರ್ಣಲಾಭ, ಪಾಪಕ್ಷಯ, ಐಶ್ವರ್ಯ, ಕಾರ್ಯಸಿದ್ಧಿ ಗಳೆಂಬವೆ ಪಿರಿವಿಡಿದಾ ಷಡ್ಜಾದಿ ಸ್ವರಫಲಂಗಳೆಂದು ನಿಶ್ಚೈಸಿ. ೫೦೩

## ಸ್ವರದಿಂ ಶ್ರುತಿ ಸಮುತ್ಪತ್ತಿ :

ಬಳಿಕ ಗಹ್ವತಿ, ನಿಷ್ಕಳೆ, ಗೂಢೆ, ಸರಳೆಯೆಂಬ ನಾಲ್ಕು ಶ್ರುತಿಗಳೆ ಷಡ್ಜಸ್ವರದಿಂ ಪುಟ್ಟಿದವು. ಮಧುರೆ, ಯಾಮಳೆ, ಏಕಾಕ್ಷರಿಯೆಂಬ ಮೂರು ಶ್ರುತಿಗಳೆ ಋಷಭಸ್ವರದಿಂ ಜನಿಸಿದವು. ಭೃಂಗಜಾತಿ, ಪರಂಗೀತೆಯೆಂಬೆರಡು ಶ್ರುತಿಗಳೆ ಗಾಂಧಾರಸ್ವರದಿಂದುದಯಿಸಿದವು. ರಂಜಕಿ, ಪೂರ್ಣೆ, ಅಲಂಕಾರಿಣಿ, ವಾಂಸೆಯೆಂಬ ನಾಲ್ಕು ಶ್ರುತಿಗಳೆ ಮಧ್ಯಮ ಸ್ವರದಿಂದಾದವು. ರೇಣುಕಿ, ಲಲಿತೆ, ವಸ್ತುವಾಂಸೆ, ಸ್ವರವಾಂಸೆಯೆಂಬ ನಾಲ್ಕುಶ್ರುತಿಗಳೆ ಪಂಚಮ ಸ್ವರದಿಂದೊಗೆದವು. ಭಾಷಾಂಗಿ ವರ್ತಕಿ, ಸಂಪೂರ್ಣೆಯೆಂಬ ಮೂರು ಶ್ರುತಿಗಳೆ ಧೈವತ ಸ್ವರದಿಂದುದ್ಭವಿಸಿದವು. ಪ್ರಸನ್ನ, ಸರ್ವವ್ಯಾಪಿಯೆಂಬೆರಡು ಶ್ರುತಿಗಳೆ ನಿಷಾದಸ್ವರದಿಂದುತ್ಪತ್ತಿಯಾದವಿಂತು ಸಪ್ತ ಸ್ವರದಿಂದಿಪ್ಪತ್ತೆರಡು ಶ್ರುತಿಗಳಾದವೆಂದು ಪ್ರಮಾಣಿಸಿ. ೫೦೪

## ಶ್ರುತಿಗಮಕ ದೇಶೀಗಮಕಂಗಳು :

ಬಳಿಕ ಸ್ಫುರಿತ, ಪ್ರಮಳಿತ, ದೀರ್ಘ, ಲಲಿತೋಚ್ಛದ, ಗುರುಸ್ಮಿತ, ಉಲ್ಲಾಸಿತ, ಉಲೋಸಿತ,ಕಂಪಿತ, ಸೂಕ್ಷ್ಮಿತ. ದೀರ್ಘಿತ,ದೀರ್ಘಲೋಲಿತ,ಲೀಲೋಚ್ಚರಿತ, ಲೀಲೋದೀರ್ಘ, ದೀರ್ಘಲಾಲಿತ, ಪ್ರಸ್ತುತ, ಕಾಂದಿತ,ಊರ್ಜಿತ, ಕ್ಷಿಪ್ತ, ಹತ, ಆಕ್ಷಿಪ್ತ, ಸಮುಲ್ಲಾಸಿತ, ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಂಗಳು. ಕಂಪಿತ, ಸ್ಫುರಿತ, ಕಲಿನ, ತ್ರಿಭಿನ್ನ, ಸಪ್ತದ, ಆಂದೋಳಿತ, ಆಹತವೆಂಬೇಳೂ ದೇಸೀ ಗಮಕಗಳೆಂದು ಬಗೆದು. ೫೦೫

## ರಾಗೋತ್ಪತ್ತಿ ಲಕ್ಷಣ ಗ್ರಾಮಾದಿಗಳು :

ಬಳಿಕಿಂತು ಪೇಳ್ದ ಸ್ವರ-ಶ್ರುತಿ ಗಮಕಂಗಳಿಂ ಪುಟ್ಟಿದ ಗೀತವಾದೊಡೆ : ಸ್ವರ, ಸುಸ್ವರ, ಸುರಾಗ, ಮಧುರ, ಅಕ್ಷರ, ಅಲಂಕಾರವೆಂಬಾರು ಲಕ್ಷಣಂಗಳ

ನುಳ್ಳುದಾಗಿಹುದಾಂರಾಗೋತ್ಪತ್ತಿಗೆ ಷಡ್ಜಗ್ರಾಮ, ಮಧ್ಯಗ್ರಾಮ, ಗಾಂಧಾರಗ್ರಾಮವೆಂಬ ಗ್ರಾಮತ್ರಯಂಗಳುಂಟಲ್ಲಿ; ಗಾಂಧಾರಗ್ರಾಮವೆ ದೇವಲೋಕದಲ್ಲಿಯೇ ವರ್ತಿಸೂದು, ಉಳಿದೆರೆಡು ಗ್ರಾಮವೇ ಮರ್ತ್ಯಲೋಕದಲ್ಲಿ ವರ್ತಿಸುತ್ತಿಹುದಲ್ಲಿ ಧೈವತಿ, ನಿಷಾದಿನಿ, ಷಡ್ಜಕೇಸರಿ, ಷಡ್ಜದಿವ್ಯಾವತಿ, ಷಡ್ಜಮಧ್ಯಮವೆಂಬೈದು ಷಡ್ಜಗ್ರಾಮದಿಂದಾದ ರಾಗಂಗಳು. ಗಾಂಧಾರಿ, ರಕ್ತಗಾಂಧಾರಿ ಮಧ್ಯಮಗಾಂಧಾರಿ ದಿವ್ಯಾವತಿ, ಮಧ್ಯಮದಿವ್ಯಾವತಿ, ಪಂಚಮಗಾಂಧಾರಿ, ಪಂಚಾಮೇಂಧ್ರಿ, ನಂದಯಂತಿ,ಕರ್ಮವ್ಯಭಿಚಾರಿ, ಕೌಶಿಕೆಯೆಂಬ ಹತ್ತೇ ಮಧ್ಯಮಗ್ರಾಮದಿಂದಾದರಾಗಂಗಳಂತ ಗ್ರಾಮದ್ವಯದಿಂ ಹದಿನೈದು ರಾಗಂ ಪುಟ್ಟಿದವೆಂದು ಪತಿಕರಿಸಿ. ೫೦೬

ರಾಗಜಾತಿಗಳು :

ಬಳಿಕ ಶುದ್ಧ, ಬಿನ್ನ, ಗೌಡ, ಅಷ್ಟಸಾಧಾರಣ, ಸಪ್ತಸಾಧಾರಣ, ಷಟ್ಸ್ವರವೆಂಬಾರು ಜಾತಿಗಳವರಲ್ಲಿ: ಷಡ್ಜಗ್ರಾಮ,ಮಧ್ಯಮಗ್ರಾಮ,ಗೌಡಪಂಚಮ ಕೌಶಿಕೆ, ಸಾಧಾರಣ, ಮಾಳವಕೌಶಿಕೆಯೆಂಬಾರು ಶುದ್ಧಜಾತಿಯಿಂದಾದ ರಾಗಂಗಳು. ಭಿನ್ನಷಡ್ಜ, ಭಿನ್ನತಾನ, ಭಿನ್ನಕೌಶಿಕೆ, ಮಧ್ಯಮಭಿನ್ನವೆಂಬ ನಾಲ್ಕು ಭಿನ್ನಜಾತಿಯಿಂದಾದ ರಾಗಂಗಳು. ಗೌಡಪಂಚಮ, ಗೌಡಕೌಶಿಕೆ, ಗೌಡಮಧ್ಯಮವೆಂಬ ಮೂರು ಗೌಡಜಾತಿಯಿಂದಾದ ರಾಗಂಗಳು. ಷಡಾರ, ಡಕ್ಕಾರಾಗ, ಮಾಳವಿ, ಪಂಚಮ ಮಾಳವಿ, ಕೌಶಿಕೆ, ಡಕ್ಕಕೌಶಿಕೆ, ಸೌವೀರ, ಹಿಂದೋಳವೆಂಬೆಂಟು ಅಷ್ಟಸಾಧಾರಣದಿಂದಾದ ರಾಗಂಗಳು ನರ್ತಕಿ, ಕಕುಂಭ, ಷಡ್ಜಕೌಶಿಕೆ, ಭ್ರಮಾ ಪಂಚಭ್ರಮಾಳ, ಪಂಚಮ:ಗಾಂಧಾರ ರೂಪಸಾಧಾರಣವೆಂಬೇಳು ಸಪ್ತ ಸಾಧಾರಣಜಾತಿಯಿಂದಾದ ರಾಗಂಗಳು. ಠಕ್ಕೆ ಸೈಂಧವಿ ಪಂಚಮ ಷಡಾವ ದೇವಗುಪ್ತ ಗಾಂಧಾರಗುಪ್ತ ಕೌಟಿಕಗುಪ್ತ ಉಪಾಂಗವೆಂಬೆಂಟು ಷಟ್‌ಸ್ವರ ಜಾತಿಯಿಂದಾದ ರಾಗಂಗಳು. ಇಂತಾರು ಜಾತಿಯಿಂ ಮೂವತ್ತಾರು ರಾಗಂಗಳುದಿಸಿದವೆಂದು ವಿಧಿಸಿ. ೫೦೭

ರಾಗಾಂಗಗಳು :

ಬಳಿಕ ರಾಗಾಂಗ, ಭಾಷಾಂಗ, ಕ್ರಿಯಾಂಗ, ಉಪಾಂಗವೆಂಬ ನಾಲ್ಕುಅಂಗಗಳದರಲ್ಲಿ ಮಧುಮಾಧವಿ, ಶಂಕರಾಭರಣ, ಹಿಂದೋಳ,ಬಂಗಾಳ, ಗುಂಡಕ್ರಿ,ಶ್ರೀರಾಗ, ಸಾಳಗ, ಅಭ್ರಪಂಚಮ, ದಿವಿ, ಘಂಟಾರಾಗ, ಗುಜ್ಜರಿ, ಸೋಮರಾಗ, ಧನ್ಯಾಸಿ, ದೇಶಿ, ದೇಶಾಕ್ಷಿ, ಮಾಳವಶ್ರೀ, ವರಾಳಿ, ನಾಗವರಾಳಿ, ನಾಗದೀವಿ, ಕರ್ಣಾಟಕ, ಬಂಗಾಳವೆಂಬಿಪ್ಪತ್ತು ರಾಗಾಂಗದಿಂದಾದ ರಾಗಂಗಳು.

ಕೌಶಿಕೆ, ವೇಳಾವಳಿ, ಶುದ್ಧಾವಳಿ, ಕಾಂಬೋದಿ, ನಾಟ, ಸೋಹರಿ, ಲಲಿತೆ, ಅಂದೋಳಿ, ಗೌಡಿ, ಸೈಂಧವಿ, ನಾಗಧ್ವನಿ, ಆಹರಿ, ತ್ರಾವಳಿ ಶುದ್ಧಾಹರಿ ಕಾಂಬೋಜಿ ಶ್ರೀಕಂಠ ಬೃಹಸ್ಪತಿ ದಿಕ್ಷಿಣಾದಿತ್ಯ ದೊಂಬಾಕ್ರಿ

ಗದಾಷ್ಟ್ರ ಸೈಂಧವಿ ಪೌರಾಣಿ ಭಿನ್ನಪೌರಾಣಿ ಚಮ್ರಾಳಿ ಮಧುಕರಿ ಕಾಳಿಂದಿ ಪುಳಿಂದಿ ತರಂಗಿ ಮೇಘರಂಜಿ ಕುರಂಜಿ ಶುದ್ಧವಾಹಿನಿ ಪ್ರಥಮಮಂಜರಿ ನಟನಾರಾಯಣಿ ಫಳಮಂಜರಿ ಸಯುಶೋಧರೆಯೆಂಬ ಮೂವತ್ತನಾಲ್ಕು ಭಾಷಾಂಗದಿಂದಾದ ರಾಗಂಗಳು.

ನೀಲೋತ್ಪಳಿನಿ ಏಕಚ್ಛವಿ ಜೋಹರಿ ಉತ್ಪಳಿನಿ ಕನರಿಕೆ ಗೀತೆ ರಾಯೆ ತರಂಗಿಣಿ ಗಾಂಧಾರಿ ಗೊಲ್ಲಿ ರಕ್ಕಸಿ ಸಾದೋತ್ತರಿ ವಸಂತ ಭೈರವಿ ಸಾಳಂಗ ಗಂಧಿಕಾಂಬೋದಿ ಸಿಂಹಾವಳಿ ಕಾಮೋದಿ ದೇವಾಳ ನಾದತ್ತರಿ ವಸಂತಬಂಗಾಳ ಉಪಾಂಗವೆಂಬ ಇಪ್ಪತ್ತೆರಡು ಕ್ರಿಯಾಂಗದಿಂದಾದ ರಾಗಂಗಳು.

ಸಿಂಧುವರಾಳಿ ಕನ್ನಡವರಾಳಿ ದ್ರಾವಿಡವರಾಳಿ ಪ್ರಥಮವರಾಳಿಯೆಂಬ ನಾಲ್ಕು ಉಪಾಂಗವರಾಳಿಗಳು. ಮಹಾರಾಷ್ಟ್ರಗುಜ್ಜರಿ ಸೌರಾಷ್ಟ್ರಗುಜ್ಜರಿ ದ್ರವಿಡ ಗುಜ್ಜರಿ ದಕ್ಷಿಣಗುಜ್ಜರಿಯೆಂಬ ನಾಲ್ಕು ಉಪಾಂಗ ಗುಜ್ಜರಿಗಳು.
ಕರ್ಣಾಟಕಗೌಳ ದೇಶಗೌಳ ತುರುಷ್ಕಗೌಳ ಮಾಳವಗೌಳ ಛಾಯಾಗೌಳ ಸೌರಾಷ್ಟ್ರಗೌಳ ದ್ರವಿಡಗೌಳ ವೆಂಬೇಳು ಉಪಾಂಗ ಗೌಳಂಗಳು.
ಛಾಯಾತೋಂಡೀ, ತುರುಷ್ಕತೋಂಡಿ ಎಂಬೆರಡು ತೋಂಡಿಯುಪಾಂಗಗಳು
ಮಲಹರಿ, ಭೈರವಿಯೆಂಬೆರಡು ಸಾಳಗೋಪಾಂಗಗಳು
ಗೋರಿ, ರಾಮಕರ್ನಿಯೆಂಬೆರಡು ನಾಟಿ ಉಪಾಂಗಗಳು.
ಸಾಳಗನಾಟಿ, ಭುಲ್ಲಜಕುರಂಜಿಯೆಂಬೆರಡು ಲಲಿತೆಯುಪಾಂಗರಾಗಂಗಳು.
ಕೋಳಾಹಳ, ರಾಮಕ್ರೀಯೆಂಬೆರಡು ರಾಮಕ್ರಿಯುಪಾಂಗಗಳು
ದೇವಕ್ರಿ, ತ್ರಿಣೇತ್ರಕ್ರಿ, ಭೂತಾಳಕ್ರಿಯೆಂಬ ಮೂರು ಕೋಳಾಹಳದುಪಾಂಗಗಳು.
ಇಂತು ಚತುರ್ವಿಧಾಂಗದಿಂ ನೂರಾರುರಾಗಂ ಜನಿಸಿದವು. ಈ ಪ್ರಕಾರದಿಂ ಗ್ರಾಮ, ಜಾತಿ, ಅಂಗವೆಂಬ ತ್ರಿವಿಧದಿಂದಾದ ನೂರ್ಕೈವತ್ತೇಳು ರಾಗಂಗಳಂ ಪರಾಮರ್ಶಂ ಗೆಯ್ವುದು. ೫೦೮

ಮೂವತ್ತೆರಡು ರಾಗಂಗಳು ;

ಬಳಿಕ ಈ ಸಮಸ್ತ ರಾಗಂಗಳೊಳಗೆ ರಾಮಕ್ರಿ, ಭೂಪಾಳಿ, ವಸಂತ, ನಾಟಿ, ಸಾಳಗ, ಭೌಳಿ, ಕಾಂಬೋದಿ, ಗುಜ್ಜರಿ, ಭೈರವಿ, ಗುಂಡಕ್ರಿ, ಮಲಹರಿ, ಧನ್ಯಾಸಿ, ಲಲಿತೆ, ಫಲಮಂಜರಿ, ಬಂಗಾಳ, ದೇಶಿ, ದೇವಗಾಂಧಾರಿ, ಮೇಘರಂಜಿ, ಕುರಂಜಿ, ಆಹರಿ, ಶ್ರೀರಾಗ, ಪಹಡಿ, ಗೌಳ, ಸಿಂಧುರಾಮಕ್ರಿ, ಶಂಕರಾಭರಣ, ಭುಲ್ಲರಿ, ದೇಶಾಕ್ಷಿ, ವರಾಳಿ, ದೇವಗುಪ್ತಿ, ಮಂಗಳಕೌಶಿ, ನಾರಾಯಣಿ, ಆರಭಿಯೆಂಬ ಮೂವತ್ತೆರಡು ರಾಗಂಗಳೇ ಪ್ರಸಿದ್ಧಮಾಗಿಹುದವರಲ್ಲಿ. ೫೦೯

ಮಿತ್ರರಾಗಂಗಳು :

ಮೊದಲವೆಂಟು ರಾಗಂಗಳೇ ಪುರುಷರಾಗಂಗಳು, ಮಿಕ್ಕ ಇಪ್ಪತ್ತನಾಲ್ಕು ರಾಗಂಗಳೆ ಕ್ರಮದಿಂದಾ ಒಂದೊಂದಕ್ಕೆ ಮೂರು ಮೂರು ಸ್ತ್ರೀರಾಗಂಗಳೆಂದಭ್ಯಾಸಂಗೆಯ್ವುದು.

ವಸಂತಭೈರವಿ, ಶಾಂತಮಲಹರಿ, ನಾದರಾಮಕ್ರಿಯೆಂಬವೆ ರಾಮಕ್ರಿಯ ಮಿಶ್ರರಾಗಂಗಳು.
ಮುಖಾರಿ, ಹಿಂದೋಳ, ವಸಂತವೆಂಬವೆ ವಸಂತದ ಮಿಶ್ರರಾಗಂಗಳು.
ನಾಟಿ, ಆಹರಿನಾಟಿ, ಸಾಳಗನಾಟಿ, ಹಮ್ಮೀರನಾಟಿ, ಗುಜ್ಜರಿನಾಟಿಯೆಂಬವೆ ಪಂಚವಿಧ ನಾಟಿಗಳು.
ಸೌರಾಷ್ಟ್ರಗೌಳ, ಮಾಳವಗೌಳ, ಕೇತಾರಗೌಳ, ಛಾಯಾಗೌಳ, ಕನ್ನಡಗೌಳ, ವಸಂತಗೌಳ, ಪ್ರತಾಪಗೌಳ, ಮೋಹನಗೌಳವೆಂಬ ಅಷ್ಟಗೌಳಂಗಳ್ ಸಾಳಗದ ಮಿಶ್ರರಾಗಂಗಳು.
ಮೇಚಭೌಳಿಯು ಭೌಳಿಯ ಮಿಶ್ರರಾಗವಹುದು.
ಗುಮ್ಮಗಾಂಬೋದಿ ತೆಲುಗಕಾಂಬೋದಿಯೆಂಬವೆ ಕಾಂಬೋದಿಯ ಮಿಶ್ರ ರಾಗಂಗಳು.
ಶೋಕವರಾಳಿ, ವಸಂತವರಾಳಿ, ಜೋನಿಗವರಾಳಿ, ಪತ್ರವರಾಳಿ, ಪ್ರತಾಪವರಾಳಿ, ಲಕ್ಷಣವರಾಳಿ, ನಾಗವರಾಳಿಯೆಂಬವೆ ಸಪ್ತವರಾಳಿಗಳಿವು ಮೊದಲಾದ ಸಕಲ ಮಿಶ್ರ ರಾಗಂಗಳನಾರೈದು. ೫೧೦

ಗಾನವೈಖರಿ :

ಮತ್ತಮಾ ರಾಗಂಗಳಲ್ಲಿ ಶುದ್ಧ, ಮಿಶ್ರ, ಸಂಕೀರ್ಣ ಭೇದಂಗಳಂ ವಿಭಾಗಿಸಿ; ಗ್ರಾಮವರ್ಜ್ಯಂಗಳಂ ಪರೀಕ್ಷಿಸಿ; ಜನ್ಯ, ಜನಕಂಗಳಂ ಕಂಡು ; ಕೌಟಳ, ಬೊಂಬಾಳ, ನಾರಾಟ, ಮಿಶ್ರಿತವೆಂಬ ಚತುರ್ವಿಧ ಸುಸ್ವರಂಗಳಂ ಪರುಠವಿಸಿ; ಆಳಾಪ, ಭಜಾವಣೆ ಛಾಯೆದಪ್ಪದೆ; ನಾದಾವತಿ, ನಂದಾವತಿ, ಭದ್ರಾವತಿ, ವಿನಯಾವತಿ, ಭೋಗಾವತಿ ಯೆಂಬ ಐದುತೆರದಿಂದಾಳಾಪಿಸುವ ಪದಕ್ರಮುದ; ಗೌಡಿ, ವೈದರ್ಭಿ, ಪಾಂಚಾಲಿಯೆಂಬ ರೀತಿತ್ರಯಂಗೂಡಿ; ದರು, ಹರಿ, ವಿಕೃತಿ, ಪಿಂದಾಣವೆಂಬ ಚತುರ್ವಿಧ ದಂಡಿಯುಲ್ಲಿ ರಂಗು, ರಕ್ತಿ, ರೀತಿದೋರಿ; ಕಂಪಿತ, ಚಿಂತಿತ, ಅನುನಾಸಿಕ, ಶಿರೋದ್ಗತ, ಕಂಠದೂಷಣ, ವಿಕ್ಲಿಷ್ಟ, ನೀರಸ, ನಿಷ್ಠೂರ, ನಿಃಸಾರ, ಚಿತ್ರಾಂತ, ಶ್ರುತಿವರ್ಜಿತ, ಕಾಕಸ್ವರ, ಪ್ರಯಾಣಿ, ಅಸಮಾನ, ತಾಳಹೀನವೆಂಬ ಪದಿನೈದು ಸ್ವರದೂಷಣಂ ಪೊರ್ದದೆ ಪಾಡಿ ಮೋಹಿಸುವ ಗಾಯಕರಿಂ. ೫೧೧

ವಾದ್ಯ ಭೇದಗಳು :

ಬಳಿಕ ತಂತ್ರಿಯಂ ಕಟ್ಟಿ ಬಾಜಿಸುವ ವೀಣಾದಿಕವೇ ತತವೆನಿಸೂದು.
ಚರ್ಮವಂ ಕಟ್ಟಿ ಬಾಜಿಸುವ ಆವುಜೆ ಮೊದಲಾದವೇ ಆನದ್ಧವೆನಿಸೂದು.
ಊದಿ ಬಾಜಿಸುವ ವಾಸ ಮೊದಲಾದವೇ ಸುಷಿರವೆನಿಸೂದು.
ಕಂಚಿನ ತಾಳಾದಿಕವೇ ಘನವೆನಿಸೂದು. ಇಂತು ಚತುರ್ವಿಧವಾದ್ಯಭೇದಮಾದ ಕಹಳೆ, ಪಟಹ, ಶಂಖ, ಭೇರಿ, ಜಯಗಂಟೆಯೆಂಬ ಪಂಚಮಹಾವಾದ್ಯ ವಿಚಕ್ಷಣರಿಂ ೫೧೨

ತಂತ್ರೀವಾದ್ಯಗಳು :

ಬಳಿಕ ವಿಪಂಚಿಕೆ, ಚಿತ್ರಿಕೆ, ಚಿತ್ರಘೋಷಾವಳಿ, ಲಕುಲಾಷ್ಠಿ, ಕೂರ್ವಿಕೆ, ಕುಬ್ಜಿಕೆ, ಪರಿವಾದಿನಿ, ಕಿನ್ನರಿ, ತುಂಬುರವೀಣೆ, ತಿಸತಿ, ರಾವಣಹಸ್ತ, ಚಕನ, ವಲ್ಲಕಿ, ಆಳಾವಲಿನಿ, ಅನಾವಿಥೆ, ಕಾಸ್ಯಪವೀಣೆ, ಬ್ರಹ್ಮವೀಣೆ, ಸಾರಂಗವೀಣೆ, ಸರವೀಣೆ, ಆಕಾಶವೀಣೆ, ಅಂತರವೀಣೆ, ರುದ್ರವೀಣೆಯೆಂಬ ಇಪ್ಪತ್ತೆರಡು ತೆರೆದ ತಂತ್ರಿ ವಾದ್ಯವೆಂಬುದು. ದುಕ್ಕಡಿ, ಗೀತಾನುಗಂತ, ಶ್ರುತಾನುಗಂತ, ಉಭಯಾನುಗಂತ, ವೀಣಾನುಗಂತವೆಂಬೈದು ತೆರನಾಗಿಹುದಪರಲ್ಲಿ ದಂಡ, ಜಾತಿ, ಮುಖ, ಬೈಸಣಿಗೆ ಮುಂತಾದವಂ ಪ್ರಮಾಣಿಸಿ, ಆಯಾಯ ರಾಗಾನುಗುಣ್ಯವಾಗಿವೋಳೈಸಿ ತಂತಿಗಳಂ ಕಳೆಯೇರಿಸಿ, ಸಪ್ತಸ್ವರ ಭೇದವರಿದು, ಜನ್ಯ ಜನಕ ರಾಗಂಗಳನಾಳ್ದೈದು ಬಾಜಿಸಿ ಕೇಳ್ವರಂ ಕಿವಿಗೊಳಿಸ ತಂತ್ರೀವಾದ್ಯ ವೇದ್ಯರಿಂ. ೫೧೩

ಗಾಯಕಿಯರು :

ಬಳಿಕ ಹದಿನೆಂಟಂಗುಲ, ಹದಿನೇಳಂಗುಲ, ಹದಿನಾರಂಗುಲ, ಹದಿನೈದಂಗುಲ, ಹದಿನಾಲ್ಕಂಗುಲ, ಹದಿಮೂರಂಗುಲ, ಹನ್ನೆರಡಂಗುಲ, ಹನ್ನೊಂದಂಗುಲ, ಹತ್ತಂಗುಲ, ಒಂಭತ್ತಂಗುಲ, ಎಂಟಂಗುಲ, ಏಳಂಗುಲ, ಆರಂಗುಲ, ಐದಂಗುಲ, ನಾಲ್ಕಂಗುಲ, ಮೂರಂಗುಲ, ಎರಡಂಗುಲ, ಒಂದಂಗುಲ ಪ್ರಮಾಣದ ಕ್ರಮವಿಡಿದು, ಜಾತಿವಾಸ, ಸಜಾತಿವಾಸ, ಸುಕುಮಾರವಾಸ, ಪಕ್ಷವಾಸ, ಭುವನವಾಸ, ಶ್ವೇತವಾಸ, ಆದಿತ್ಯವಾಸ, ರುದ್ರವಾಸ, ಹರಿವಾಸ, ವಿಧಿವಾಸ, ದಿಗುವಾಸ, ಋಷಿವಾಸ, ಕುಮಾರವಾಸ, ಅಘೋರವಾಸ, ಬ್ರಹ್ಮವಾಸ, ತ್ರಿಪುರವಾಸ, ಶಿವಶಕ್ತಿವಾಸ, ಭುವನಾಧಿಪತಿವಾಸವೆಂಬ ಹದಿನೆಂಟು ತರದ ವಾಸಂಗಳ ಲಕ್ಷಣವರಿದಾ ಜಾತಿ ಮುಖದ ಕಳೆಯ ಮಯಣವಂ ಸೈತುವಮಾಡಿ, ಪೂತ್ಕಾರಂ ಪೊಣ್ಮಲು; ಆಳಾಪ, ಕಾಳಾಪ, ಹೆಲ್ಲಣೆ, ವ್ಯಾಪ್ತಿ, ಮುಂತಾದ ಇಪ್ಪತ್ತನಾಲ್ಕು ತೆರದಲ್ಲಿ ಸ ರಿ ಗ ಮ ಪ ದ ನಿ ಯೆಂಬ ಸಪ್ತಸ್ವರಾಕ್ಷರಂಗಳನಾರೋಹಿ ಅವರೋಹಿ ಮುಂತಾದ ನಾಲ್ವತ್ತಾರು ಭೇದವರಿದು ಆಳಾಪಿಸಿ, ಕೇಳಿಸುವ ಭಾಸುರತರ ವಾಸವಿಲಾಸಿಗಳಿಂ. ೫೧೪

ಮರ್ದಳೆ ಕಾರರು :

ಬಳಿಕ ಶುದ್ಧ, ಸಾಳಗ, ಸಂಕೀರ್ಣ, ತವಣೆಗಳೆಂಬ ಚತುರ್ವಿಧ ಮೃದಂಗವಂ ಮೇಳೈಸಿ; ಕತ್ತರ, ಬೊಟ್ಟು ಗಡಾದಿ ಭೇದಂಗಳನನುವದಿಸಿ; ತ್ರ್ಯಂಕ್ಯ, ಆಲಿಂಗ್ಯ, ಊರ್ಧ್ವಕವೆಂಬ ತ್ರಿವಿಧ ಕ್ರಮವಿಡಿದು ನುಡಿಸುವ ಕಡುಜಾಣರಪ್ಪ ಮದ್ದಳೆಕಾರರಿಂ; ಬಳಿಕ ಕಂಥಾವುಜ, ಪಟಾವುಜ, ಕುಡುಪಾವುಜ ಅಡಾವುಜವೆಂಬ ನಾಲ್ಕುತರದ ಆವುಜಮನೋಜೆಯಿಂ ಬಾಜಿಸುವ ಆವುಜಕಾರರಿಂ. ೫೧೫

ತಾಳಪ್ರಕ್ರಿಯೆ :

ಬಳಿಕ ತಾ ಕಾರವೆ ರುದ್ರನು, ಳಕಾರವೆ ಪಾರ್ವತಿ, ಆ ಉಭಯ ಸಂಪುಟ ಮಾದ ನಾದವೇ ಈಶ್ವರನಹುದು. ಆ ತಾಳವೆರಡರ ಕೂಟವೆಂಬುದೊಂದು ಧೃವವೆನಿಸೂದು. ಆ ಧೃವವೆರಡು ಒಂದುಮಾತ್ರೆಯೆನಿಸೂದು. ಆ ಮಾತ್ರೆ ಎರಡೆಂಬುದೊಂದು ಗುರುವೆನಿಸೂದು, ಮೂರುಮಾತ್ರೆಯೆಂಬುದೊಂದು ಪ್ಲುತವೆನಿಸೂದು. ಒಂದುಪ್ಲುತ ಪ್ಲುತದರ್ಧ ನಾಲ್ಕುವರೆಮಾತ್ರೆಯೆಂಬುದೊಂದು ವಿರಾಮ ಮಾತ್ರೆಯೆನಿಸೂದು. ಇಂತೀಮಾತ್ರೆ ಹೆಚ್ಚಲು ಸೂಕ್ಷ್ಮ ನಿಮಿಷಾರ್ಧಕ್ಕೆ ವ್ಯಂಜನಕಾಲ' ಅತೀತ, ಅನಾಗತ ವರ್ತಮಾನದಿಂ ಕ್ರಿಯಾಕಾರಮನೇಕಮಾಡಿ ತಾಳೋತ್ಪತ್ತಿಯಾಯಿತ್ತೆಂದು ತಾಳೋದಯಮಂ ತಿಳಿದು, ಬಳಿಕಾ ತಾಳದ ಕಾಲ, ಮಾರ್ಗ, ಕ್ರಿಯೆ, ಅಂಗ, ಜಾತಿ, ಗ್ರಹ,ಕಳೆ, ಲಯ, ಯತಿ ಪ್ರಸ್ತಾರವೆಂಬ ದಶಪ್ರಾಣಂಗಳನಾರೈದು. ೫೧೬

ತಾಳಭೇದಗಳು :

ಬಳಿಕ ಧೃವ, ಮಠಯ, ರೂಪಕ, ಜಂಪೆ, ತಿವುಡೆ, ಅಟ, ಏಕ, ಚಚ್ಚಪುಟ, ಚಾಚಪುಟ, ಷಡ್ಗೀತ, ಪತ್ರಚ್ಛದ, ಸವ್ಯಾಚಿತೆ,ಸವ್ಯಿತ ಎಳಜೊಂಬಡೆ, ಗಾರ್ಹಡಕ್ಕೆಯಡಡಕ್ಕೆ, ಸ್ವದಕರಣ, ಪಾತಕರಣ, ಪಿಂಡಕರಣ, ಕ್ರೌಂಚಪದ, ಕಳಹಂಸೆ, ಆದಿಲಲಿತೆ, ಮತ್ತಮಾತಂಗ, ಪಳಚಕ್ರ, ಆಸ್ಥಾನಮಂಟಪ, ಮಯಮಂದರೆ, ಯಕ್ಕಸರ, ರಚ್ಚೆ, ಉತ್ತರಪಾಣಿ, ಸಂಚಪಾಣಿ, ಸಂಕ್ರಿಷ್ಟ, ಖಂಜಾಖಂಜ, ಅಖಂಡಿತ,ವಿಲಂಬಿತ, ಕುಟಿಲ, ಚತುರಾಶ್ರ, ಖಂಡ, ವೃದ್ಧ, ಉಪವೃದ್ಧ, ಸುಭದ್ರ, ಸಂಗತ, ಪ್ರಚ್ಛನ್ನಾಲಯ, ಚಾಚಲ್ಯಾಣ, ಗೋಷ್ಠಿಯಾಣ,ಧೃವಲಯ, ಜೊಂಬಾಯುರ, ಹರಿಣಿ, ವಿಷಮ; ವಿದ್ಯಾಧರ, ಮಾತಂಗ, ಬ್ರಹ್ಮನಂದನ, ಸರಸ್ವತಿ, ಕಂಠಾಭರಣ, ಆದಿಮಠಯ, ಜಂಪಮಠಯ, ಸರಮಠಯ, ತಿಗದಮಾನಮಠಯ, ಪೂರ್ವಕಂಕಾಣ, ಕಾಮ್ಯಕಂಕಾಣ, ಪ್ರಶಸ್ತ, ಕೋಕಿಲಪ್ರಿಯ, ಸಿಂಹನಂದನ, ಸಿಂಹವಿಕ್ರೀಡಿತ, ಸಿಂಹನಾದ, ಸಪ್ತಮುದ್ರಿಕ. ಜಯಾಳವೆಂಬಿವು ಮೊದಲಾದ ನೂರೊಂದು ತಾಳಗಳಾದೊಡೆ ಭಂಗತಾಳ, ಉಪಭಂಗತಾಳ, ವಿಭಂಗತಾಳ, ಶುದ್ಧತಾಳ, ಅನುತಾಳಂವೆಂದಾರುವರ್ಗ ಸಂಖ್ಯಾಭೇದಮಾಗಿಹವೆಂದು ಪೇಳ್ವ ಭರತಶಾಸ್ತ್ರ ಪ್ರವೀಣರಪ್ಪ ತಾಳಧಾರಿಗಳಿಂ. ೫೧೭

ನೃತ್ಯಭೇದಗಳು :

ಬಳಿಕ ನಾಟಕದಲ್ಲಿ ದಿನದಿನಕ್ಕಭಿನ್ನೈಸಲ್ತಕ್ಕ ರಸ, ಭಾವ, ಸಂವಿಧಾನ ಆಶ್ರಯಂಗಳೆಂಬ ಚತುರ್ವಿಧ ಪ್ರಬಂಧಾಂಶಮಂತಿಳಿದು ಮುಖದೃಷ್ಟಿ ಹಸ್ತಪಾದಂಗಳಭಿನವ ಸಲ್ಲಕ್ಷಣಂದಪ್ಪದೆ, ಮೇಲೆ ಮುಖರಸವೆ ಹಾವ,ನೇತ್ರವಿಲಾಸವೆ ಭಾವ,ಪದನ್ಯಾಸವೆ ವಿಳಾಸ, ಭ್ರೂ ವಿಕ್ಷೇಪಣವೆ ವಿಭ್ರಮಮೆಂಬ ಚತುರ್ವಿಧ ಮೋಹನಂ ಮೈವೆತ್ತು ;

ಶುದ್ಧ ದೇಶೀಯುಮೆಂಬ ಮಾರ್ಗದ್ವಯಮುಮನಂಗೊಂಡು; ತಾಂಡವ, ನಾಟ್ಯ, ನೃತ್ಯ, ಲಾಸ್ಯ, ಗುಂಡಿಲು, ಪೆಕ್ಕಣ, ಲಚ್ಚಣ, ಅಪರಿಪಾತ್ರ, ಸುಪಾತ್ರ, ಸರ್ವತೋಭದ್ರಮೆಂಬ ದಶವಿಧ ಪಾತ್ರಂಗಳಂ ತೋರಿ ರಂಜಿಸುವ ನರ್ತಕ ನರ್ತಕಿಯರಿಂ; ಬಳಿಕ್ಕಿಂತು ಪೇಳ್ದ ಗೀತಾನುಗುಣ್ಯಮಾದ, ವಾದ್ಯಾನುಸಾರಮಾದ ನೃತ್ಯಮೆಂಬ ತೂರ್ಯತ್ರಯಮುಂ ಮೊದಲಾದ ಸಂಭ್ರಮಂಗಳಿಂದಿಂಬುವಡೆದು. ೫೧೮

ರಾಜಭೋಗ :

ಅನಂತರದೊಳಾಂದೋಳನ, ವಸ್ತ್ರ, ಆಭರಣ, ವಾಹನ, ರಾಜ್ಯ, ವಧು, ಕರ್ಪೂರ ವೀಳ್ಯಮೆಂಬ ತ್ಯಾಗಾಂಗ ಸಪ್ತಕ ಸಂಯುಕ್ತರೆನಿಸಿ ಸಮಸ್ತ ಸಮುದ್ರಾಧೀಶ್ವರರಾಗಿ ಪ್ರಜಾಪಾಲನಾದಿ ಸದ್ಗುಣ ಸಂಪನ್ನರೆನಿಸಿ ದಶದಿಗ್ಭರಿತ ಪುಣ್ಯಕೀರ್ತಿಮಯರಾಗಿ ರಾಜ್ಯಂಗೆಯ್ವುತ್ತಿರ್ಕುಂ. ೫೧೯

ಸಗರ ಸಾಗರಾದಿ ವಿಷಯ :

ಮತ್ತಮವರೊಳಾ ಸಗರ ಚಕ್ರವರ್ತಿಗರುವತ್ತು ಸಾವಿರ ಕುಮಾರಕರವರೊಂ ದಶ್ವಮೇಧ ಯಾಗದನೆವದಿಂ ದಕ್ಷಿಣ ಸಮುದ್ರದ ತಡಿವಿಡಿದೆಂಟು ಸಾವಿರಯೋಜನ ದಗಲ ಅರುವತ್ತು ಸಾವಿರ ಯೋಜನದ ನೀಳದಲ್ಲಿ ಪೂರ್ವಪಶ್ಚಿಮವಾಗಗೆಯಲವರೆಗೆದ ಭೂಮಿಯೊಳಾ ಸಮುದ್ರೋದಕಮಾವರಿಸಿರ್ದೆಡೆ ದಿಕ್ಕುಗಳೆ ಪೂರ್ವಾದ್ರಿಯಾಗಿ ಇಂದ್ರದ್ವೀಪ, ಕುಶದ್ವೀಪ, ತಾಮ್ರಪರ್ಣದ್ವೀಪ, ಗಭಸ್ತಿಮಾನ್ ದ್ವೀಪ, ನಾಗದ್ವೀಪ, ಸೌಮ್ಯದ್ವೀಪ, ಗಂಧರ್ವದ್ವೀಪ, ವಾರುಣದ್ವೀಪಮೆಂಬೆಂಟು ದ್ವೀಪಗಳಾದವೆಲ್ಲಂ ಪ್ರತ್ಯೇಕಮಾದೊಂದು ಸಾವಿರಯೋಜನದಗಲಂಗಳನುಳ್ಳವಾಗಿ ಮ್ಲೇಚ್ಛಾದಿಹೀನ ಜಾತಿಗಳಿಗಾಶ್ರಯಂಗಳಾಗಿರ್ಕುಂ. ೫೨೦

ಕರ್ಣಿಕಾ ದ್ವೀಪಾದಿ ಸ್ಥಾನ:

ಮತ್ತಮವರಗೆಯುದುಳಿದ ಸಾವಿರಯೋಜನ ವಿಶಾಲದ ಭೂಮಿಯೆ ಹಿಮ ವತ್ಪರ್ವತ ಪರಿಯಂತಂ ಕರ್ಣಿಕಾ ದ್ವೀಪಮೆಂಬ ಪೆಸರಂ ಪಡೆದ ಬ್ರಾಹ್ಮಣಾದಿ ಸಕಲವರ್ಣಂಗಳಗಾಸ್ಪದಮಾಗಿಹುದವರೊಳಗೆ, ಮರ್ಯಾದಪರ್ವತ ಸವಾಲಕ್ಷ ಪರ್ವತಸಹ ಮುನ್ನೂರು ಯೋಜನ ಸ್ಥಲಮೆ ಪ್ರಸಿದ್ಧಮಾಗಿ ಭರತಖಂಡ ಮೆನಿಸಿತ್ತದರೊಳಗೆ. ೫೨೧

ಮಹಾಕುಲಶೈಲ ಸಪ್ತಕ ನದಿಗಳು:

ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ವೃಕ್ಷ, ವಿಂಧ್ಯ, ಪಾರಿಯಾತ್ರ ಮೆಂಬ ಸಪ್ತಕುಲ ಪರ್ವತಂಗಳುಂಟವರಲ್ಲಿ ಜನಿಸಿದ ನದಿಗಳಾವೆನೆ:

ತ್ರಿಸಾಮೆ ಋಷಿಕುಲಮೆಂಬೆರಡು ನದಿಗಳೇ ಮಹೇಂದ್ರ ಪರ್ವತದಲ್ಲಿ ಪುಟ್ಟಿದವು.
ಕೃತಮಾಲಿನಿತಾಮ್ರಪರ್ಣಿಗಳೆಂಬವೆರಡು ನದಿಗಳೇ ಮಲಯಪರ್ವತದಲ್ಲಿ ಪುಟ್ಟಿದವು.

ಗೋದಾವರಿ, ಭೀಮರಥಿ, ಕೃಷ್ಣವೇಣಿಗಳೆಂಬ ಮೂರುನದಿಗಳ್ ಸಹ್ಯ ಪರ್ವತದಲ್ಲಿ ಪುಟ್ಟಿದವು. ತಾಪಿ ಪಯೋಷ್ಣಿಗಳೆಂಬೆರಡು ನದಿಗಳ್ ವೃಕ್ಷ ಪರ್ವತದಲ್ಲಿ ಪುಟ್ಟಿದವು. ನರ್ಮದೆ ಸುರಸೆಗಳೆಂಬೆರಡು ನದಿಗಳ್ ವಿಂಧ್ಯಪರ್ವತದಲ್ಲಿ ಪುಟ್ಟಿದವು. ವೇದ ಸ್ಮೃತಿಗಳೆಂಬೆರಡು ನದಿಗಳ್ ಪಾರಿಯಾತ್ರ ಪರ್ವತದಲ್ಲಿ ಪುಟ್ಟಿದವು. ಶತದ್ರು ಚಂದ್ರಭಾಗೆಯೆಂಬೆರಡು ನದಿಗಳ್ ಹಿಮವತ್ಪರ್ವತದಲ್ಲಿ ಪುಟ್ಟಿದವೆಂದು ತಿಳಿಯಲ್ವೇಳ್ಕುಂ. ೫೨೨

ನದೀ ವಿಶೇಷಗಳು:

ಮತ್ತಂ ಮಲಪ್ರಹರಿ ಮಣಿಮುಕ್ತೆ ಮಂದಾಕಿನಿ ಗೋಮತಿ ಗಂಗೆ ತುಂಗೆ ಗಂಡಕಿ ಕಾವೇರಿ ಕಪಿಲೆ ಕಾಂಡಲಿ ಕೌಶಿಕೆ ಕೇಸರಿ ಸರಯು ಸರಸ್ವತಿ ಸುವರ್ಣಮುಖರಿ ಶೋಣೆ ವರುಣೆ ಭದ್ರೆ ನಿರಂಜನೆ ಜಾಹ್ನವಿ ಮೊದಲಾದ ಮಹಾ ನದಿಗಳ್ನೂರು, ಮಹಾನಂದಿ ಮೊದಲಾದ ಪುಣ್ಯತೀರ್ಥಂಗಳೊಂದುಕೋಟಿ. ೫೨೩

ಅಷ್ಟಷಷ್ಠಿ ಕ್ಷೇತ್ರಂಗಳು :

ಶ್ರೀಶೈಲ ಸೇತು ಕೇದಾರ ಕಾಶಿ ಕಾಳಹಸ್ತಿ, ಕುಂಭಕೋಣ, ಕುರುಕ್ಷೇತ್ರ ಕನಕಾಚಲ, ಕಕುದ್ಗಿರಿ, ಅಭ್ರಸಭೆ, ಅರುಣಾಚಲ ಆದಿಗ್ರಾಮ ಅಗಸ್ತ್ಯನಾಥ ವಾಲ್ಮೀಕ ವೃದ್ಧಾಚಲ ಗಯೆ ಗೋಕರ್ಣ ಸೋಮೇಶ್ವರ ಭೀಮೇಶ್ವರ ಜಪ್ಯೇಶ್ವರ ವೇದಾರಣ್ಯ ಶ್ವೇತಾರಣ್ಯ ಗಜಾರಣ್ಯ ನೈಮಿಷಾರಣ್ಯ ಹಾಲಾಖ್ಯ ನೀಲಕಂಠ ಮಧ್ಯಾರ್ಜುನ ಪರಶುರಾಮ ಕ್ಷೇತ್ರಾದಿ ಮಹಾಕ್ಷೇತ್ರಂಗಳರುವತ್ತೆಂಟು. ೫೨೪

ಅಷ್ಟಾದಶ ಶಕ್ತಿ ಪೀಠಗಳು:

ಬಳಿಕ ವಾರಣಾಸಿಯಲ್ಲಿ ವಿಶಾಲಾಕ್ಷಿ. ಕಂಚಿಯಲ್ಲಿ ಕಾಮಾಕ್ಷಿ. ಲಂಕೆಯಲ್ಲಿ ಶಾಂಕರಿ. ಕೊಲ್ಲಾಪುರದಲ್ಲಿ ಲಕ್ಷ್ಮಿ. ಜಾಲಂಧರೆಯಲ್ಲಿ ಮಹಾದೇವಿ. ಕನ್ಯಾಕುಬ್ಜೆಯಲ್ಲಿ ಕುಬ್ಜಿಕೆ. ಸಿಂಹಳದಲ್ಲಿ ಸಿಂಹಿಕೆ. ಚಕ್ರವಾಟೆಯಲ್ಲಿ ಮಾಣಿಕೇಶ್ವರಿ. ಸುವರ್ಣ (ಪೂರ್ಣ) ಕ್ಷೇತ್ರದಲ್ಲಿ ಪೂರ್ಣಿಕಾದೇವಿ. ಪರ್ವತದಲ್ಲಿ ಪಾರ್ವತಿ. ಶ್ರೀಶೈಲದಲ್ಲಿ ಭ್ರಮರಾಂಬಿಕೆ. ವಿಂಧ್ಯಾದ್ರಿಯಲ್ಲಿ ವಿಂಧ್ಯಾವಾಸಿನಿ. ಕಾಲಕ್ಷೇತ್ರದಲ್ಲಿ ರೌದ್ರೇಶ್ವರಿ. ಯೋಗಿಣೀಪುರದಲ್ಲಿ ಯೋಗಿಣಿ. ಉಜ್ಜನಿಯಲ್ಲಿ ಮಹಾಕಾಳಿ. ಹಿಮಾಚಲದಲ್ಲಿ ಭೀಮರೂಪಿ. ಶ್ವೇತದ್ವಿಪದಲ್ಲಿ ಪದ್ಮವಾಸಿನಿ. ಸುಮೇರುವಿನಲ್ಲಿ ಸುಪ್ರಭಾದೇವಿ. ಯರೆಂಬ ಹದಿನೆಂಟು ಶಕ್ತಿಯೋಗ ಪೀಠಂಗಳಾದೊಡೆ. ಆ ಶಕ್ತಿದೇವಿಯರುಂ ಬಾಲಾರ್ಕ ತೇಜದಿಂ ತ್ರಿಣೇತ್ರದಿಂ ಪಾಶಾಂಕುಶ ಚಾಪ ಬಾಣವಾಂತ ಕರಚತುಷ್ಟಯದಿಂ ಸರ್ವಾಲಂಕಾರಂಗಳಿಂದೆಸೆದು ತ್ರಿಸಂಧ್ಯೆಯಲ್ಲಿ ತಮ್ಮಂ ಧ್ಯಾನ ಪೂರ್ವಕಮಾಗಿ ನಾಮಜಪಕರ್ಗೆ ರಾಜವಶ್ಯಾದಿಸಿದ್ಧಿ ಪ್ರದಾಯಕಮಾಗಿರ್ಕುಂ. ೫೨೫

### ಮುಕ್ತಿಕ್ಷೇತ್ರ ಸಪ್ತಕ :

ಬಳಿಕಿಲ್ಲಿ ಅಯೋಧ್ಯೆ ಮಧುರೆ ಮಾಯಾಪುರಿ ಕಾಶಿ ಕಾಂಚಿ ಅವಂತಿ ದ್ವಾರಾವತಿಯೆಂಬ ಸಪ್ತಪುರಂಗಳ್ ತಮ್ಮನಾಶ್ರಯಿಸಿರ್ದ ಪ್ರಾಣಿಗಳಿಗೆ ಮುಕ್ತಿದಾಯಕಂಗಳಾಗಿರ್ಪವವರೊಳಗೆ ಕಾಶಿಯೊಂಬುದೊಂದೇ ವಾರಣಾಸಿ ಕಾಶಿ ಅವಿಮುಕ್ತ ಅಂತರ್ಗೇಹವೆಂದು ನಾಲ್ಕು ತೆರನಾಗಿರ್ಪುದು. ಅಲ್ಲಿ ಮರಣವಾದ ಪಿಪೀಲಿಕಾದಿ ಸಕಲ ಪ್ರಾಣಿಗಳ್ಗೆ ವಿಶ್ವೇಶ್ವರನು ತಾನೇ ದಕ್ಷಿಣ ಕರ್ಣದಲ್ಲಿ ತಾರಕಬ್ರಹ್ಮೋಪದೇಶಂಗೆಯ್ಯೆ ಸದ್ಯೋಮುಕ್ತಿಯುಹುದೆಂದು ಸುರಾಭಾಂಡೇಶ್ವರಾದಿ ಲಿಂಗ ದೃಷ್ಟಾಂತ ಪೂರ್ವಕಮಾಗಿ ವೇದಾಗಮ ಪುರಾಣಂಗಳಲ್ಲಿ ಪ್ರಸಿದ್ಧಮಪ್ಪುದರಿಂದ ಕಾಶಿಯೇ ಸರ್ವೋತ್ಕರ್ಷವಹುದು. ಉಳಿದವಂತಲ್ಲಾಗಿ ಸಾಮಾನ್ಯಂಗಳೆಂದು ವಿವೇಕಿಸಲ್ವೇಳ್ಕುಂ. ೫೨೬

### ಐವತ್ತಾರು ದೇಶಂಗಳು;

ಅಂಗ ವಂಗ ಕಳಿಂಗ ತೆಲುಂಗ ಕೊಂಗ ಲಾಳ ಬಂಗಾಳ ಚೋಳ ಕೇರಳ ಗೌಳ ಪಾಂಚಾಲ ಸಿಂಗಳ ಕುಂತಳ ನೇಪಾಳ ಮಲೆಯಾಳ ಮಾಳವ ಹೈವ ಹಿಂದವ ಸೈಂಧವ ಕೊಂಕಣ ಕುರು ಕಂಭಾತಿ ಕಲಹತಿ ಕಿರಾತ ಮುಂಗಲ ಮಗಧ ಮಾರುಕ ತುರುಷ್ಕ ತಿರುಗುತ್ತಿ ತ್ರಿಗರ್ತ ಆರ್ಯಾವರ್ತ ಭೋಟ ಮಹಾಭೋಟ ಆರಭಟ ಮರಹಟ ಚೇದಿ ಚೀನ ಮಹಾಚೀನ ಹರ್ಪರ ಖರ್ಪರ ಮಧ್ಯರಾಷ್ಟ್ರ ಮಹಾರಾಷ್ಟ್ರ ಸೌರಾಷ್ಟ್ರ ಹೂಣ ಹಮ್ಮೀರ ಕಾಶ್ಮೀರ ಸಂವೀರ ಶಾಡ್ವಲ ಪಾಂಡು ಪಾಂಡೀಯ ಪಾರ್ಶ್ವೀಕ ಯವನ ಅಂಭಷ್ಟ ಮ್ಲೇಚ್ಛ ದ್ರಾವಿಡ ಕರ್ಣಾಟಕವೆಂಬೈವತ್ತಾರು ದೇಶಂಗಳಕ್ಕುಂ. ೫೨೭

### ದೇಶಾಲಂಕಾರ ರಕ್ಷಕಂಗಳು:

ಮತ್ತಮಾ ಚಪ್ಪನ್ನ ದೇಶಂಗಳಾದೊಡೆ ಬೇರೆಬೇರೆ ನಗರ ಪಟ್ಟಣ ಗ್ರಾಮ ಖೇಡ ಖರ್ವಡ ದ್ರೋಣ ಮಡಬಾದಿ ಗ್ರಾಮ ಭೇದಂಗಳಿಂ; ಸ್ವಾಮಿ ಅಮಾತ್ಯ ಬಂಧು ಕೋಶ ರಾಷ್ಟ್ರ ದುರ್ಗ ಬಲಂಗಳೆಂಬ ರಾಜ್ಯಾಂಗ ಸಪ್ತಕಂಗಳಿಂ; ಜಲದುರ್ಗ ವನದುರ್ಗ ಗಿರಿದುರ್ಗ ಕೃತಕಾವನಿದುರ್ಗವೆಂಬ ದುರ್ಗಚತುಷ್ಟಯಂಗಳಿಂದಲಂಕೃತಮಾಗಿ ದ್ವಾದಶಯೋಜನಕ್ಕೊಂದೊಂದು ವಿಭಾಗೆವಡೆದು ಜಾತಿ ರೀತಿ ನೀತಿ ಮಾತು ಉಡಿಗೆ ತೊಡಿಗೆ ಮೊದಲಾದ ಕ್ರಿಯಾಭೇದಂಬಡೆದಿರ್ಕುಂ. ೫೨೮

### ಜನ ಜೀವನ ಕ್ರಮ

ಮತ್ತಮಾ ಭಾರತ ವರ್ಷದಲ್ಲಿಯು ಬಹುವರ್ಣದ ಜನರು ಕೃತಾದಿ ಯುಗಾನುಕ್ರಮದಿಂ ಜ್ಞಾನೈಶ್ವರ್ಯ ತೇಜೋಬಲಾದಿಗಳ ಹೆಚ್ಚುಕುಂದುಳ್ಳವರಾಗಿ ಕೃಷಿ ಸೇವೆ ಯಾಚನೆ ಮೊದಲಾದನೇಕ ವ್ಯಾಪಾರಂಗಳಿಂದಮೆ ಗಳಿಸಲ್ಪಟ್ಟ

ಕಷ್ಟಾನ್ನ ಭೋಕ್ತೃಗಳೆನಿಸಿ; ಅಶುಚಿ ಅನಿತ್ಯ ಅನಾತ್ಮ ಅಸುಖಂಗಳಲ್ಲಿ ಕ್ರಮದಿಂ ಶುಚಿ ನಿತ್ಯ ಆತ್ಮ ಸುಖಂಗಳೆಂದು ಮಾಯೆಯಿಂ ಮೋಹಿಸಿ; ಅವಿದ್ಯೆ ಅಸ್ಮಿತೆ ರಾಗ ದ್ವೇಷ ಅಭಿನಿವೇಶವೆಂಬ ಕ್ಲೇಶಪಂಚಕದಿಂ ಘಾಸಿಯಾಗಿ; ಜ್ಞಾನವಿಕೃತಿ-ಭಾವ, ವರ್ತನವಿಕೃತಿಭಾವ, ಮೋಹನವಿಕೃತಿಭಾವವೆಂಬ ಭಾವತ್ರಯದಿಂ ಭ್ರಮಿಸಿ; ಅರ್ಥೇಷಣ, ಪುತ್ರೇಷಣ, ದಾರೇಷಣವೆಂಬ ಈಷಣತ್ರಯದಿಂ ದೋಷಂ ಮಿಕ್ಕು; ಜಾತಿ, ವರ್ಣ, ಆಶ್ರಮ ಕುಲ, ಗೋತ್ರ ನಾಮಂಗಳೆಂಬ ಷಡ್ಭ್ರಮೆಯಿಂ ವಿಭ್ರಾಂತಿಸಿ; ಪ್ರಾಣ, ಬುದ್ಧಿ ದೇಹಂಗಳಿಗೆ ಕ್ರಮದಿಂದೆರಡಾದ ಅಶನ, ಪಿಪಾಸೆ ಶೋಕ ಮೋಹ ಜರೆ ಮರಣವೆಂಬ ಷಡೂರ್ಮಿಯಿಂ ಪೆರ್ಮೆಯಿಡುಗಿ; ತನುವ್ಯಸನ, ಮನವ್ಯಸನ ಧನವ್ಯಸ ರಾಜ್ಯವ್ಯಸನ ವಿಶ್ವವ್ಯಸನ ಉತ್ಸಾಹ ವ್ಯಸನ ಸೇವಕವ್ಯಸನವೆಂಬ ಸಪ್ತವ್ಯಸದಿನಂ ಹಸಂಗೆಟ್ಟು; ಕುಲ ಚಲ ಧನ ರೂಪು ಯೌವನ ವಿದ್ಯೆ ರಾಜ ತಪದೇಳ್ಗೆಯೆಂಬ ಅಷ್ಟಮದದಿಂ ಮದಿಸಿ; ತೃಷೆ ಶಂಖೆ ಭೀತಿ ಲಜ್ಜೆ ಜಿಗುಪ್ಸೆ ಕುಲ ಶೀಲ ಗರ್ವವೆಂಬ ಅಷ್ಟಪಾಶದಿಂ ಬಿಗಿವಡೆದು; ಭೂಮಿ ಜಲ ವಹ್ನಿ ವಾಯು ನಭ ಮನ ಬುದ್ಧಿ ಅಹಂಕಾರ ವೆಂಬ ಅಷ್ಟಪ್ರಕೃತಿಯಿಂ ವಿಕರಿಸಿ; ಬುದ್ಧಿ ಸುಖ ದುಃಖ ರಾಗ ದ್ವೇಷ ಯತ್ನ ಧರ್ಮ ಅಧರ್ಮಭಾವನೆಯೆಂಬ ನವಗುಣದಿಂ ವ್ಯವಹರಿಸಿ; ಅಸುರವಾಸನೆ ದೈವವಾಸನೆ ಲೋಕವಾಸನೆ ದೇಹವಾಸನೆ ಶಾಸ್ತ್ರವಾಸನೆಯೆಂಬಿ ಮೊದಲಾದನೇಕ ವಾಸನೆಗಳಿಂ. ಘಾಸಿಯಾಗಿ; ವಿಯದಾದಿಭೂತ, ಶ್ರೋತ್ರಾದಿ ಜ್ಞಾನೇಂದ್ರಿಯ, ವಾಗಾದಿ ಕರ್ಮೇಂದ್ರಿಯ, ಪ್ರಾಣಾದಿವಾಯು ಮನಸಾದ್ಯಂತ ಕರಣ ಕಾಮ ಕರ್ಮ ತಮವೆಂಬಷ್ಟ ಪುರದೊಳ್ಸರಿಸಿ, ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಚಿತ್ತ, ಮನ, ಅಹಂಕಾರ, ವಿದ್ಯೆ, ವಾಕು, ಶಕ್ತಿಗಳೆಂಬ ಷೋಡಶ ಕಲೆಯಿಂ ವಿಕಲವಾಗಿ; ೫೨೯

ಜನನ, ಮರಣ, ರಾಗ, ದ್ವೇಷ, ಜರೆ, ರುಜೆ, ಮದ ಮೋಹ ಸ್ವೇದ ಖೇದ ವಿಷಾದ ನಿದ್ರಾ ಕಾಂಕ್ಷೆ ಕ್ಷುಧೆ ತೃಷ್ಣೆ ಭ್ರಮೆ ಚಿಂತೆ ಕ್ಲೇಶವೆಂಬ ಪದಿನೆಂಟು ದೋಷದಿಂ ದೂಷಿತನಾಗಿ; ಪರದಾರಾಗಮನ ಪರದ್ರವ್ಯಾಪಹರಣ ಅಭಕ್ಷ್ಯಭಕ್ಷಣ, ಹಿಂಸೆಯೆಂಬೀ ನಾಲ್ಕು ಕಾಯಿಕ ದೋಷದಿಂ, ಚಂಡಾಲಾದಿ ಹೀನ ಯೋನಿಯ ನೆಯ್ದಿ ಅನುಚಿತತ್ವ ನಿಷ್ಠುರತ್ವ ಪುಸಿ ಪೈಶೂನ್ಯವೆಂಬೀ ನಾಲ್ಕು ವಾಚಕ ದೋಷದಿಂ ಪಶುಪಕ್ಷಿಗಳಾಗಿಪುಟ್ಟಿ ಜನ ವಿರುದ್ಧ ಕಾರ್ಯಾಪೇಕ್ಷೆ, ಅನಿಷ್ಟ ಚಿಂತನೆ, ಅನ್ಯಸತಿ, ಅನ್ಯಧನಕಾಂಕ್ಷೆಯೆಂಬಿವು ನಾಲ್ಕು ಮಾನಸ ದೋಷದಿಂ ಕಲ್ಮರಮಟ್ಟಗಳಾಗಿ; ದೇಹಾಭಿಮಾನ ಮಂದಮತಿ ಮೋಸ ಜಡಭಾವ ನಿದ್ರೆ ನಿಷೇಧಕರ್ಮ ಆಲಸ್ಯ ಚಪಲಚಿತ್ತಾದಿ ತಾಮಸ ಗುಣದಿಂದಧೋ ಲೋಕವನಾಶ್ರಯಿಸಿ; ಮದ ಮಾನ ಮಾತ್ಸರ್ಯ ನಿಷ್ಠುರ ನಿಷ್ಕರುಣ ಕಾಮ ಕಪಟ

ಕೋಪ ಕದನ ಕರ್ಕಶ ಕಡುಶೋಕ ಲೋಭಾದಿ ರಜೋಗುಣದಿಂ ಮಧ್ಯ ಲೋಕಸ್ಥಮಾಗಿ;ವಿರತಿ ವಿವೇಕ ವಿತರಣ ವಿನಯ ದಯೆ ಧರ್ಮ ಧೈರ್ಯ ನಿರಭಿಮಾನ ನಿರ್ಧಾರಣಾದಿ ಸಾತ್ವಿಕ ಗುಣದಿಂದೂರ್ಧ್ವ ಲೋಕಮಂ ಸಾರ್ದು; ೫೩೦

ಪೂರ್ವ ಜನ್ಮಾಂತರದಲ್ಲಿ ಮಾಡಿದ ಸುಕೃತ ದುಷ್ಕೃತ ಕರ್ಮವೆ ಸಂಸ್ಕಾರ ರೂಪದಿಂದದೇಕ ಭವಂಗಳಿಗೆ ಬೀಜಮಾಗಿ ಬುದ್ಧಿಯಲ್ಲಿರ್ಪ ಸಂಚಿತಕರ್ಮವೆಂಬ, ಆ ಸಂಚಿತ ಕರ್ಮದೊಳಗೆಲಿದೊಂದು ದೇಹಾಂತರವನಾರಂಭಿಸಿ ಭೋಗವನೀವ ಪ್ರಾರಬ್ಧ ಕರ್ಮವೆಂಬ, ಆ ಪ್ರಾರಬ್ಧ ಭೋಗವನುಣುತ್ತವೆ ಮಾಡಿದ ಪಾಪಾಧಿಕವೆ ಮುಂದಕ್ಕಾಗಾಮಿ ಕರ್ಮನೆಂಬೀ ಕರ್ಮತ್ರಯದಿಂದುಮ್ಮಳಿಸಿ; ಪಾಪ ಕರ್ಮಾಧೀನದಿಂ ವ್ಯಾಕುಲತೆಯುಳ್ಳ ಚಿತ್ತವೆಂಬ ಆಧ್ಯಾತ್ಮಿಕದಿಂ ಪುಟ್ಟಿದ ದುಃಖ ರೂಪ ಮಾದಾಧ್ಯಾತ್ಮಿಕವೆಂಬ, ವ್ಯಾಘ್ರ ಭುಜಂಗಾದಿಕವೆಂಬ ಆದಿಭೂತ ಭಯದಿಂ ಪುಟ್ಟಿದ ದುಃಖರೂಪಮಾದಾದಿಬೌತಿಕ ವೆಂಬ, ಅನಿಷ್ಟವಾತ ವರ್ಷಾದಿಕವೆಂಬ ಆದಿ ದೈವದಿಂ ಪುಟ್ಟಿದ ದುಃಖರೂಪಮಾದಾದಿದೈವಿಕವೆಂಬೀ ತಾಪತ್ರಯದಿಂ ರೂಪುಗೆಟ್ಟು; ಎಂಭತ್ತೊಂದು ತೆರನಾದ ವಾತ, ಅರುವತ್ತನಾಲ್ಕು ಬಗೆಯ ಪಿತ್ಥ, ಇನ್ನೂರ ಹದಿನೈದು ವಿಧವಾದ ಶ್ಲೇಷ್ಮಭೇದದಿಂ ಮುನ್ನೂರ ಅರುವತ್ತು ತೆರನಾದ ರೋಗ ರೂಪ ದೋಷತ್ರಯದೇಳ್ಗೆಯಿಂ ಬಾಳ್ಗೆಟ್ಟು; ೫೩೧

ಖರವಾಹನವನೇರಿ ಇಕ್ಷುದಂಡವಂ ಪಿಡಿದು, ಪೀತವರ್ಣ ರೂಪಮಾದ ಕಾಮದಿಂ ಗುರುದಾರಾದಿಗಳಿಗಳುಪಿ ಮಹಿಷವಾಹನವನೇರಿ, ಡಾಣೆಯಂ ಪಿಡಿದು ರಕ್ತವರ್ಣರೂಪಮಾದ ಕ್ರೋಧದಿಂದೊಡಲೊಡನೆಗಳಂ ಕೆಡಿಸಿ.ಮಾರ್ಜಾಲ ವಾಹನವನೇರಿ, ಸುರಗಿ ಪಿಡಿದು, ತಮೋವರ್ಣರೂಪಮಾದ ಲೋಭದಿಂದಿಹಪರ ಭೋಗವಂ ನೀಗಿ ಶುನಕವಾಹನವನೇರಿ, ಸಿಕ್ಕು ಗೋಲು ಪಿಡಿದು ಬಹು ವರ್ಣ ರೂಪ ಮಾದ ಮೋಹದಿಂ ನಿತ್ಯಾ ನಿತ್ಯ ವಿವೇಕ ಹೀನನಾಗಿ. ಸೂಕರವಾಹನವನೇರಿ, ಅಂಕುಶವಿಡಿದು ಕೃಷ್ಣ ವರ್ಣರೂಪಮಾದ ಮದದಿಂ ನೀತಿ ಬೀತು. ಅವಿ ವಾಹನವೇರಿ, ಮುಸಲವಿಡಿದು ಮೇಘವರ್ಣರೂಪಮಾದ ಮತ್ಸರದಿಂ ಪರ ಗುಣವಂ ನಿರಾಕರಿಸುತ್ತಿಂತು ಮನೋವಿಕಾರ ರೂಪಮಾದರಿ ಷಡ್ವರ್ಗದಿಂ ಪರಿಭವಿಸಿ; ೫೩೨

ಪೂರ್ವದಳದಲ್ಲಿ ಪುಣ್ಯಮತಿ, ಅಗ್ನಿದಳದಲ್ಲಿ ನಿದ್ರಾಲಸ್ಯ, ಯಮದಳದಲ್ಲಿ ಕ್ರೋಧ ಬುದ್ಧಿ, ನೈರುತ್ಯ ದಳದಲ್ಲಿ ಪಾಪಕೃತ್ಯ, ವರುಣದಳದಲ್ಲಿ ವಿನೋದ, ವಾಯುವ್ಯ ದಳದಲ್ಲಿ ಗಮನ, ಕುಬೇರದಳದಲ್ಲಿ ರತಿ ಪ್ರೀತಿ, ಈಶಾನ್ಯ ದಳದಲ್ಲಿ ದ್ರವ್ಯ ದಾನ,ಮಧ್ಯದಲ್ಲಿ ವೈರಾಗ್ಯವೆಂಬ ಹೃದಯ ಕಮಲದಷ್ಟಗತಿಗಳಿಂ ತೊಳಲಿ ಬಳಲಿ;

ಲಿಂಗ, ಈಶ, ಸೂತ್ರ, ವಿರಾಟ, ರುದ್ರ, ಬ್ರಹ್ಮ, ವಿಷ್ಣು, ವಿಘ್ನೇಶ್ವರ, ವೀರ, ಕುಮಾರ, ವೃಷಭ, ಭೈರವ, ಮೈಲಾರ, ಯಕ್ಷ, ರಾಕ್ಷಸ, ಗೌರಿ, ದುರ್ಗಿ, ಲಕ್ಷ್ಮಿ, ಶಾರದೆ, ಮಾತೃಕೆ, ಯಕ್ಷಿಣಿ, ಯೋಗಿಣಿ, ಮಾರಿ, ಮಸಣಿ, ವಿಪ್ರ, ಕ್ಷತ್ರಿಯ, ವೈಶ್ಯ, ಶೂದ್ರ, ಗವಾಶ್ವ, ಮೃಗ, ಪಕ್ಷಿ, ಘಟ, ಸಾಲಗ್ರಾಮ, ಪುಸ್ತಕ, ಅಶ್ವತ್ಥ, ಜಲ, ಪಾಷಾಣ, ಕಾಷ್ಠ, ಮೃತ್ತಿಕೆ, ಚಿತ್ರ, ಬಾಚಿ, ಗುದ್ದಲಿ, ದೇಹಳಿ, ತೃಣಾದಿ ಬಹು ದೇವತಾ ಭಜನೆಗಳಿಂದಾಯಾಯಾ ಪೂಜ್ಯ ಪೂಜಾನುಸಾರವಾದ ತಾರತಮ್ಯ ಗತಿವಡೆದಿಂತು ಸಕಲ ಸಂಸಾರಿಗಳಾಗಿರ್ಪರ್. ೫೩೩

ಕರ್ಮ ಭೂಮಿ ಜನರು

ಬಳಿಕೀ ಭರತಖಂಡದಲ್ಲಿ ಮಾಡಿದ ಕರ್ಮಫಲವಂ, ಪೂರ್ವೋಕ್ತಮಾದಿಳಾವೃತಾದಿ ವರ್ಷಾಷ್ಟಕಂಗಳಲ್ಲಿಯುಂ, ಮುಂದೆ ಪೇಳ್ವ ದ್ವೀಪಾಂತರಂಗಳಲ್ಲಿಯುಂ, ಸ್ವರ್ಗಾದಿ ಲೋಕಂಗಳಲ್ಲಿಯುಮನುಭವಿಸುತ್ತಿಹರಾಗಿ, ಇದೇ ಕರ್ಮಭೂಮಿ. ಮಿಕ್ಕವೆಲ್ಲಂ ಭೋಗಭೂಮಿಯುಪ್ಪುದರಿಂದಾ ಭೋಗ ಭೂಮಿಗಳಿಗೀ ಕರ್ಮ ಭೂಮಿಯೇ ಕಾರಣಮಪ್ಪುದರಿಂದವೂ, ೫೩೪

ಪ್ರಾಣಿಗಳ ಆಯುರ್ನಿರ್ಣಯ :

ಬಳಿಕಿಲ್ಲಿಯ ಸಕಲ ಪ್ರಾಣಿಗಳಿಗೆ ಅಕಾಲ ಮರಣವಿಲ್ಲದಿರ್ದೊಡೆ ವಿಧಿ ಕಲ್ಪಿತ ಮಾದಾಯುಷ್ಯವೇ ಇರುಹೆಗೆ ಹದಿನೈದು ದಿನ, ಆಡಿಗೆ ಹನ್ನೆರಡು ವರ್ಷ, ಶುನಕಂಗೆ ಹದಿನೈದುವರ್ಷ, ಗೋವಿಗೆ ಇಪ್ಪತ್ತುವರ್ಷ, ಒಂಟೆಗೆ ಇಪ್ಪತ್ತೇಳು ವರ್ಷ, ಮಹಿಷಗೆ ಮೂವತ್ತು ವರ್ಷ, ಕುದುರೆಗೆ ಮೂವತ್ತೆರಡು ವರ್ಷ, ಆನೆಗೆ ನೂರು ವರ್ಷ, ವೃಕ್ಷ, ಸರ್ಪಂಗಳಿಗೆ ಸಾವಿರ ವರ್ಷದಾಯುಷ್ಯಂಗಳು, ನರರಿಗೆ ಶತಾಯು. ೫೩೫

ಆಯುಹ್ರ್ರಾಸ ಕಾರಣಗಳು :

ಆ ಶತಾಯುವಿನೊಳಗೆ ಬಾಲ್ಯ, ವೃದ್ಧಿ, ಬಲ, ನೇತ್ರ, ಚರ್ಮ, ಮತಿ, ಶ್ರೋತ್ರ, ವಿಷಯ, ಉತ್ಥಾನ, ಪತನವೆಂಬ ದಶಕಂಗಳನುಕ್ರಮದಿಂ ಹತ್ತು ಹತ್ತು ವರ್ಷಕ್ಕೊಂದೊಂದು ನಷ್ಟವಪ್ಪುದರಿಂದವೂ; ಬಳಿಕಿಲ್ಲಿಯ ವನಿತಾದಿ ವಿಷಯ ಜಾತಂಗಳಿಗೆ ತಾತ್ಕಾಲಿಕ ಭೋಗಹೇತುತ್ವ, ಪರಿಣಾಮಿತ್ವ, ನೀರಸತ್ವ, ಅವಿಚಾರಿತ್ವ, ಅರಮಣೀಯತ್ವ, ಕ್ಷಣಭಂಗುರತ್ವಾದಿಗಳು ಸ್ವಪ್ನ ಪ್ರಪಂಚದೊಡನೆ ಸಮಾನವಪ್ಪುದರಿಂದವೂ; ಬಳಿಕಿಲ್ಲಿಯ ಸಕಲ ವಿಷಯಂಗಳೆಲ್ಲಂ ಸುರಚಾಪ, ಸುಳಿಗಾಳಿ, ಸಂಜೆಗೆಂಪು, ಮಂಜು, ಮುಗಿಲು, ಮಿಂಚು, ತೆರೆ, ನೀರಕ್ಕರ, ಆಲಿಕಲ್ಲು, ಬೊಬ್ಬುಳಿಕೆ, ದೀಪಜ್ವಾಲೆ, ಮೊದಲಾದವರಂತೆ ಸ್ಥಿತಿ ನಿಯಮವಿಲ್ಲದೆ ಕೆಡಲುಳ್ಳುದರಿಂದವೂ;

ಸರ್ವಥಾ ಸುಸ್ಥಿತವಲ್ಲವೆಂಬುದನು ಕಣ್ಣಾರೆ ಕಂಡು, ಕಿವಿಯಾರೆ ಕೇಳಿದ, ವಿವೇಕಿಗಳೀ ಭರತಖಂಡದಲ್ಲಿಯೇ ಮುಂದೆ ನಿತ್ಯಸುಖ ರೂಪಂಗಳಾದ ದೇವತ್ವವ ನೀವ ಯಜ್ಞಂಗಳಂ, ಸಂಪದಗಳನೀವ ಸಾಧನಂಗಳಂ, ಬ್ರಹ್ಮಾದಿ ಪದವೀವ ತಪಂ ಗಳಂ, ಸಕಲೈಶ್ವರ್ಯ ಚಿತ್ತಶುದ್ಧಿಗಳನೀವ ಶಿವಾರ್ಚನೆಗಳಂ, ಮುಕ್ತಿಯನೀವ ಸಮ್ಯಕ್‌ಜ್ಞಾನಂಗಳಂ ಸಮ್ಯಕ್ಕಾಗಾಚರಿಸಲ್ವೇಳ್ಕುವೆಂಬುದೇ ಸತ್ಯಸಲ್ಲಾಪ ಮಕ್ಕುಂ. ಮತ್ತಮಿಂತು ಪೇಳ್ದ ಭಾರತವರ್ಷಂ ಮೊದಲಾದ ನವಖಂಡವವರ ವಿಭಾಗ ಶೈಲಂಗಳ ಯೋಜನ ಕ್ರಮದಿಂದೊಂದುಲಕ್ಷ ಯೋಜನ ವಿಶಾಲಮಾಗಿ ಮನೋಹರಮಾಗಿರ್ಪುದೇ ಜಂಬೂದ್ವೀಪಮಕ್ಕುಂ. ೫೩೬

ಇತಿ ಜಂಬೂದ್ವೀಪ ಸ್ಥಿತಿ ವರ್ಣನಂ
ಚತುರ್ಥ ಪರಿಚ್ಛೇದ

# ಪಂಚಮ ಪರಿಚ್ಛೇದ

ಕಂದ: ಇಂಬಾಗಿರೆ ಭೂಲೋಕದ
ಜಂಬೂದ್ವೀಪವನೆ ಪೇಳ್ದೆನಿಂತೊಲಿದು ಬಳಿ।
ಕ್ಕಂ ಬೇರುಳಿದ ದ್ವೀಪ ಕ
ದಂಬಂಗಳನಂಬುಧಿಗಳನಭಿವರ್ಣಿಸುವೆಂ,

ಅದೆಂತೆಂದೊಡೆ:

ಆ ಜಂಬೂದ್ವೀಪದ ಪೊರವಳಸಿನಲ್ಲಿ ಲವಣಸಮುದ್ರವೊಂದುಲಕ್ಷ ಯೋಜನ ವಿಶಾಲಮಾಗಿಹುದಾಡೊಡೆ: ಕಮಠ, ಕರ್ಕಟಕ, ಜಳೂಕ, ಜಲಕುಂಭಿ, ಚಕ್ರ, ನಕ್ರ, ಮಕರ, ಮತ್ಸ್ಯ, ಬಕ, ಭೇಕಾದಿ ಮಹಾಜಲಚರ ಪ್ರಾಣಿ ಹತ್ತುಲಕ್ಷಜಾತಿಗಳಿಗಾಶ್ರಯಮಾಗಿ, ಮುತ್ತು ಮಾಣಿಕ ಪವಳಂಗಳುದಿಸುವೆಡೆ ಯೆನಿಸಿ, ಫೇನತರಂಗಾದಿಗಳಿಂದತಿ ಘೋಷಿಸುತ್ತಿರ್ಕುಂ. ೫೩೭

ಶಾಕದ್ವೀಪ:

ಮತ್ತಮಾ ಲವಣಸಮುದ್ರಮಂ ಹೊರಗಾವರಿಸಿ ಶುಭ್ರವರ್ಣದ ಭೂಮಿ ಯನುಳ್ಳ ಶಾಕದ್ವೀಪವೆರಡು ಲಕ್ಷಯೋಜನ ವಿಶಾಲದಿಂದಿಹುದದಕ್ಕೆ ಮೇಧಾತಿಥಿ ಯೆಂಬನರಸಾಗಿರ್ಪನಾತಂಗೆ ಶಾಂತಭಯ, ಶಿಶಿರ, ಸುಬೋಧ, ಅನಂತ, ಶಿವ ಕ್ಷೇಮಕ, ಧ್ರುವರೆಂಬವರೇಳು ಮಕ್ಕಳು. ಬಳಿಕಾ ದ್ವೀಪವನೇಳು ಭಾಗಂ ಮಾಡಿಕೊಡಲವರವರ ಪೆಸರಿನಲ್ಲಿ ಆಯೂಯಾ ಖಂಡಂಗಳಿರ್ಪವವರ ವಿಭಾಗ ಶೈಲಂ ಗಳಾವಾವವೆದೊಡೆ: ಪೂರ್ವಾದಿ ಪ್ರದಕ್ಷಿಣಮಾಗಿ ಗೋಮೇಧಗಿರಿ, ಚಂದ್ರಗಿರಿ, ನಾರದಗಿರಿ, ದುಂದುಭಿಗಿರಿ, ಸುಮನಸಗಿರಿ ಅಲಂಘ್ಯಗಿರಿ, ವೈಭ್ರಾಜಗಿರಿಗಳೆಂಬವಿ ವರಲ್ಲಿ ಜನಿಸಿದ ನದಿಗಳಾವಾವೆನೆ: ಅನುತಪ್ತೆ, ಶಿಖಿ, ವಿಪಾಪೆ, ತ್ರಿದಿವೆ ,ಕ್ಲಮಹರೆ,

ಅಮೃತೆ, ಸುಕೃತೆಗಳೆಂಬೀ ಏಳುನದಿಗಳಾಯಾಯ ಖಂಡಂಗಳಲ್ಲಿ ಕ್ರಮದಿಂ ಸುಳಿದು ಸಮುದ್ರಗಾಮಿಗಳಾದವು. ಆ ಖಂಡಂಗಳೇಳರಲ್ಲಿಯೂ ಏಳೇಳು ಕುಲಪರ್ವತಂಗಳುಂ, ಕ್ಷುದ್ರಗಿರಿ, ನದಿ, ವನಾದಿ ಶೋಭನಂಗಳನಂತಂಗಳುಂಟಲ್ಲಿಯ ಜನರು ನೂರು ತಾಳುದ್ದದವರಾಗಿ ಕಲ್ಪವೃಕ್ಷ ಫಲಾಹಾರದಿಂದಿಪ್ಪತ್ತು ಸಾವಿರವರ್ಷದಾಯುಷ್ಯದಿಂದ ಜರೆ ರುಜೆಗಳಿಲ್ಲದೆ ಹರನಾಮ ಲಿಂಗಪೂಜಕರಾಗಿ ಪರಮೈಶ್ವರ್ಯದಿಂದಿರ್ಕುಂ. ೫೩೮

ಕ್ಷೀರ ಸಮುದ್ರ:

ಮತ್ತಮಾ ಶಾಕದ್ವೀಪದ ಪೊರವಳಿಸಿನಲ್ಲಿ ಕ್ಷೀರ ಸಮುದ್ರವೆರಡು ಲಕ್ಷ ಯೋಜನ ವಿಶಾಲದಿಂದಿಹುದಾದೊಡೆ: ಅಹಲ್ಯೆ, ಸಿರಿ, ತಾರಾದೇವಿ, ಸುಧೆ ಸುಧಾಂಶು, ಸುರತರು, ಸುರಧೇನು, ಚಿಂತಾಮಣಿ ಮುಖ್ಯಸುವಸ್ತುಗಳುದಿಸಿದೆಡೆಯೆನಿಸಿ ಮೋಹಿಸುತ್ತಿಹುದಲ್ಲಿ ಹತ್ತುಸಾವಿರ ಯೋಜನ ವಿಶಾಲದ ಕನಕ ಮಣಿಮಯವಾದರಮನೆಯಲ್ಲಿ ನಾರಾಯಣನನಂತಶಯನನಾಗಿರ್ಪಂ. ೫೩೯

ಕುಶ ದ್ವೀಪ:

ಮತ್ತಮಾ ಕ್ಷೀರಸಮುದ್ರಮಂ ಪೊರವಳಸಿದ ನೀಲವರ್ಣದ ಭೂಮಿಯನುಳ್ಳ ಕುಶದ್ವೀಪವೆ ನಾಲ್ಕುಲಕ್ಷಯೋಜನದಗಲವದಕ್ಕೆ ವಪುಷ್ಮಂತನೆಂಬಾತನಧಿಪತಿ. ಆತಂಗೆ ಶ್ವೇತ, ಹರಿತ, ಜೀಮೂತ, ಲೋಹಿತ, ವೈದ್ಯುತಕ, ಮಾನಸ, ಸುಪ್ರಭರೆಂಬೇಳು ಮಕ್ಕಳು. ಬಳಿಕವರಿಗಾ ದ್ವೀಪವನೇಳು ಭಾಗಂ ಮಾಡಿಕೊಡಲವರವರ ಪೆಸರಿನಲ್ಲಿ ಅಯಾಯಾ ಖಂಡಂಗಳಿರ್ಪವವರ ಸೀಮಾಪರ್ವತಂಗಳೆ ಪೂರ್ವಾದಿ ಪ್ರದಕ್ಷಿಣಮಾಗಿ ಕುಮುದನಗ, ಉನ್ನತನಗ, ವಲಾಹನಗ, ಕೇತುನಗ ದ್ರೋಣಕನಗ, ಮಹಿಷಕನಗ, ಕಕುತ್ಮಾನಗಮೆಂಬವಿವರಲ್ಲಿ ಪುಟ್ಟಿದ ನದಿಗಳೆಯೋಗಿ, ವಿತೃಷ್ಣೆ, ಚಂದ್ರೆ, ಶುಕ್ಲೆ, ವಿಮೋಚಿನಿ, ವಿವೃತ್ತೆಯೆಂಬಿವೇಳು ನದಿಗಳಾಯಾಯ ವರ್ಷಂಗಳಲ್ಲಿ ಕ್ರಮದಿಂ ಸುಳಿದು ಸಮುದ್ರಮಂ ಬೆರಸಿದವಾ ಖಂಡಂಗಳೇಳರಲ್ಲಿಯು ಏಳೇಳು ಕುಲಾಚಲಂಗಳುಂ, ಸಾಮಾನ್ಯ ಗಿರಿ ನದಿ ನಂದನಾದಿ ರಚನೆಗಳಸಂಖ್ಯಾತಂಗಳುಂಟಲ್ಲಿಯ ಜನರೊಂದು ತಾಳುದ್ದದವರು, ಕಲ್ಪವೃಕ್ಷ ಫಲಾಹಾರಿಗಳಾಗಿಪ್ಪತ್ತು ಸಾವಿರ ವರ್ಷ ಜೀವಿಗಳೆನಿಸಿ ಜರೆರುಜೆಗಳಿಲ್ಲದೆ ರುದ್ರನಾಮಕ ಲಿಂಗಪೂಜಕರಾಗಿ ನಿತ್ಯ ಸುಖಿಗಳಾಗಿರ್ಪರಲ್ಲಿ, ತಾಳ ಪ್ರಮಾಣಮೆಂದೊಡೆ ನರರ ನಾಲ್ವತ್ತು ಗೇಣಹುದರಿಂದೈದಾಳುದ್ದಮಕ್ಕುಂ. ೫೪೦

ದಧಿ ಸಮುದ್ರ–ಕ್ರೌಂಚ ದ್ವೀಪ:

ಮತ್ತಮಾ ಕುಶದ್ವೀಪಮಂ ಪೊರಗಾವರಿಸಿರ್ದ ದಧಿಸಮುದ್ರವೆ ನಾಲ್ಕು ಲಕ್ಷಯೋಜನದಗಲವಾಗಿರ್ಕುಂ, ಬಳಿಕದನಾವರಿಸಿದ ಕಪಿಲವರ್ಣದ ಭೂಮಿಯನುಳ್ಳ ಕ್ರೌಂಚದ್ವೀಪವೆಂಟು ಲಕ್ಷಯೋಜನ ವಿಶಾಲವದಕ್ಕೆ ಜ್ಯೋತಿಷ್ಮಂತ

ನೆಂಬಾತನೆ ಕರ್ತೃವಾತಂಗೆ ಉದ್ಭಿಜ, ವೇಣುಮಾದನ್ನು, ಸ್ವೈರದ, ಲಂಬ, ಧೃತಿ, ಪ್ರಭಾಕರ, ಕಪಿಲರೆಂಬವರೇಳು ಮಕ್ಕಳು. ಬಳಿಕ್ಕವರಿಗಾ ದ್ವೀಪವನೇಳು ಭಾಗಂಗೆಯ್ದು ಕೊಡಲವರ ಪೆಸರಿನಲ್ಲಿ ಆಯಾಯಾ ಖಂಡಂಗಳಿರ್ಪವವರ ಸೀಮಾ ಪರ್ವತಂಗಳೆ ಪೂರ್ವಾದಿ ಪ್ರದಕ್ಷಿಣಮಾಗಿ ವಿದ್ರುಮ ಪರ್ವತ, ಹೇಮಪರ್ವತ, ದ್ಯುತಿಮಾನ್‌ಪರ್ವತ, ಪುಷ್ಪವಾನ್‌ಪರ್ವತ, ಕುಶೇಶಯಪರ್ವತ, ರಕ್ಷಪರ್ವತ, ಮಂದರ ಪರ್ವತಂಗಳೆಂಬವಿವರಲ್ಲಿ ಪುಟ್ಟಿದ ನದಿಗಳೇ ಧೂತಪಾಪೆ, ಶಿವೆ, ಪವಿತ್ರೆ ಸುಮತಿ, ದ್ಯುತಿದಂಬೆ, ಮಹೀಚಿಕೆ, ಸರ್ವಪಾಪಹರೆಗಳೆಂಬ ಏಳುನದಿಗಳಾಯಾಯ ವರ್ಷಂಗಳಲ್ಲಿ ಕ್ರಮದಿಂ ಚರಿಸಿ ಸಮುದ್ರಮಂ ಕೂಡಿದವು. ಆ ಖಂಡಂಗಳೇಳರಲ್ಲಿಯೂ ಏಳೇಳು ಕುಲಗೋತ್ರಂಗಳುಂ, ಸಾಧಾರಣ ಗಿರಿ, ನದಿ, ವನಾದಿ ಪರಿಕಲ್ಪಿತಂಗಳನಂತಂಗಳುಂಟಾ ವರ್ಷದಲ್ಲಿಯ ಜನರು ಮೂರುತಾಳುದ್ದದವರಾಗಿ ಕಲ್ಪವೃಕ್ಷ ಫಲಾಹಾರದಿಂದಿಪ್ಪತ್ತು ಸಾವಿರವರ್ಷದಾಯುಷ್ಯವಂತರೆನಿಸಿ ಜರೆ ರುಜೆಗಳಿಲ್ಲದೆ ಸ್ಥಾಣುನಾಮ ಲಿಂಗಪೂಜಕರಾಗಿ ಸದಾನಂದಿಗಳಾಗಿರ್ಪರ್. ೫೪೧

## ಘೃತ ಸಮುದ್ರ –ಶಾಲ್ಮಲಿದ್ವೀಪ:

ಅನಂತರದೊಳಾ ಕ್ರೌಂಚದ್ವೀಪದ ಪೊರಗಾವರಿಸಿದ ಘೃತಸಮುದ್ರವು ಎಂಟುಲಕ್ಷಯೋಜನದಗಲಮಾಗಿರ್ಪಂ. ಬಳಿಕ್ಕದನಾವರಿಸಿದ ರಕ್ತವರ್ಣದ ಭೂಮಿಯುಳ್ಳ ಶಾಲ್ಮಲಿ ದ್ವೀಪವೆ ಹದಿನಾರು ಲಕ್ಷ ಯೋಜನದಳವಿಯದಕ್ಕೆ ದ್ಯುತಿಮಂತನೆಂಬಾತನೆ ರಾಜನಾತಂಗೆ ಕುಶಲ ಮನೋಹರ ಉಲೋಷ್ಣ ಪ್ರವರ ಅಂಧಕಾರ ಮುನಿ ವರಿಷ್ಟರೆಂಬವರೇಳು ಮಕ್ಕಳು. ಬಳಿಕವರಿಗಾ ದ್ವೀಪವನೇಳು ಭಾಗಂಗೆಯ್ದು ಕೊಡಲವರವರ ಪೆಸರಿನಲ್ಲಿ ಆಯಾಯ ಖಂಡಂಗಳಿರ್ಪವವರ ಸೀಮಾ ಪರ್ವತಂಗಳೆ ಪೂರ್ವಾದಿ ಪ್ರದಕ್ಷಿಣವಾಗಿ ಕ್ರೌಂಚನಗ ವಾಮನಗಿರಿ ಅಂಧಕಾರಶೈಲ ವಿವಾವೃಟ್‌ಪರ್ವತ ವಿವಿಧಶಿಖರಿ ಪುಂಡರೀಕಾದ್ರಿ ದುಂದಭಿಗೋತ್ರವೆಂಬವಿವರಲ್ಲಿ ದೇವಗಂಧರ್ವರಿರ್ಪರಲ್ಲಲ್ಲಿ ಜನಿಸಿದ ನದಿಗಳೆ ಗೌರಿ ಕುಮುದ್ವತಿ ಸಂಧ್ಯಾರಾಗೆ ಮನೋಜವೆ ಖ್ಯಾತಿ ಪುಂಡರೀಕೆ ಪುಣ್ಯಾವತಿಗಳೆಂಬವಿವೇಳು ನದಿಗಳಾಯಾಯ ಖಂಡಂಗಳಲ್ಲಿ ಕ್ರಮದಿಂ ಪರಿದು ಸಮುದ್ರಮಂ ಕೂಡಿದವಾ ಖಂಡಂಗಳೇಳರಲ್ಲಿಯು ಏಳೇಳುಕುಲಗೋತ್ರಂಗಳುಂ ಸಾಮಾನ್ಯಗಿರಿ ನಂದನಾದಿ ವಿಚಿತ್ರಂಗಳುಂಟಾ ವರ್ಷಂಗಳಲ್ಲಿಯ ಜನರು ಮೂರುತಾಳುದ್ದದವರು, ಕಲ್ಪವೃಕ್ಷ ಫಲಾಹಾರದಿಂದಿಪ್ಪತ್ತು ಸಾವಿರ ವರ್ಷದಾಯುಷ್ಯದಿಂ ಜರೆ ರುಜೆಗಳಿಲ್ಲದೆ, ಭೀಮೇಶ್ವರನಾಮ ಲಿಂಗಪೂಜಕರಾಗಿ ಸುಖಸ್ವರೂಪರಾಗಿರ್ಪರ್. ೫೪೨

## ಇಕ್ಷು ಸಮುದ್ರ-ಗೋಮೇಧಿಕ ದ್ವೀಪ:

ಅನಂತರದೊಳಾ ಶಾಲ್ಮಲಿ ದ್ವೀಪದ ಪೊರಗಾವರಿಸಿದ ಇಕ್ಷುರಸಸಮುದ್ರವೆ ಹದಿನಾಲ್ಕು ಲಕ್ಷಯೋಜನದಗಲಮುಕ್ಕುಂ. ಬಳಿಕದನಾವರಿಸಿದ ರಕ್ತವರ್ಣದ ಭೂಮಿಯುಳ್ಳ ಗೋಮೇಧಿಕ ದ್ವೀಪವೆ ಮೂವತ್ತೆರಡು ಲಕ್ಷಯೋಜನದಗಲವದಕ್ಕೆ ಛವ್ಯನೆಂಬಾತನೆ ವಲ್ಲಭನಾತಂಗೆ: ಜಲದ, ಕುಮಾರಕ, ಮಣೀಚಕ ಸುಕರ, ಉತ್ತಮ, ತೌದಾಕಿ, ವಿಶಿಷ್ಟರೆಂಬವರೇಳು ಮಕ್ಕಳು. ಬಳಿಕವರಿಗಾ ದ್ವೀಪವನೇಳು ಭಾಗಂ ಮಾಡಿಕೊಡಲವರವರ ಪೆಸರಿನಲ್ಲಿ ಆಯಾಯ ಖಂಡಂಗಳಿರ್ಪವರ ಸೀಮಾ ಪರ್ವತಂಗಳೆ ಪೂರ್ವಾದಿ ಪ್ರದಕ್ಷಿಣಮಾಗಿ ಉದಯಾಚಲ ಜಲದಾಚಲ ರೈವತಕ, ಮಹೇಂದ್ರ, ಶಾಮಾದ್ರಿ, ಅಂಬೋದ್ರಿ, ಅಂಬಿಕಾದ್ರಿ ರಮ್ಯಕಾದ್ರಿಗಳೆಂಬವಿವರಲ್ಲಿ ಜನಿಸಿದ ನದಿಗಳೆ ಪಾಪಭಯೆ, ಪುಣ್ಯೆ, ಕುಮಾರಿ, ಸುಕುಮಾರಿ, ನಳಿನಿ, ವೇಣುಕೆ, ಜಯೆಗಳೆಂಬವಿವೇಳು ನದಿಗಳಾಯಾಯ ಖಂಡಂಗಳಲ್ಲಿ ಕ್ರಮದಿಂ ಚರಿಸಿ ಸಮುದ್ರಗಾಮಿಗಳಾದವಾ ಖಂಡಂಗಳೇಳರಲ್ಲಿಯೂ ಏಳೇಳು ಕುಲಗಿರಿಗಳುಂ, ಕ್ಷುದ್ರಗಿರಿ ನದಿವನಾದಿಗಳನಂತಂಗಳುಂಟಾ ವರ್ಷದಲ್ಲಿಯ ಜನರು ಮೂರುತಾಳುದ್ದದವರು. ಕಲ್ಪವೃಕ್ಷಫಲಾಹಾರಿಗಳಾಗಿ ಇಪ್ಪತ್ತು ಸಾವಿರ ವರ್ಷದಾಯ್ಯುಷ್ಯದಿಂ ಜರೆ ರುಜೆಗಳಿಲ್ಲದೆ ವಿಶ್ವೇಶ್ವರ ನಾಮಧೇಯಲಿಂಗಪೂಜಕರಾಗಿ ಸ್ವಸ್ಥಚಿತ್ತರಾಗಿರ್ಪರ್. ೫೪೩

## ಸುರಾಸಮುದ್ರ–ಪುಷ್ಕರದ್ವೀಪ :

ಅನಂತರದೊಳಾ ಗೋಮೇಧ ದ್ವೀಪದ ಪೊರಗಾವರಿಸಿದ ಸುರಾಸಮುದ್ರವೆ ಮೂವತ್ತೆರಡು ಲಕ್ಷ ಯೋಜನದಗಲಮುಕ್ಕುಂ. ಬಳಿಕ್ಕದರ ಪೊರವಳಿಸಿದ ಧವಲ ವರ್ಣದ ಭೂಮಿಯುನ್ನುಳ್ಳ ಪುಷ್ಕರ ದ್ವೀಪವರುವತ್ತುನಾಲ್ಕುಲಕ್ಷ ಯೋಜನದಳವಿಯುದಕ್ಕೆ ಸವನೆಂಬವನೆ ನೃಪನಾತಂಗೆ ಧಾತಕಿ, ಸುಖೋಕ ರರೆಂದಿರ್ವರು ಮಕ್ಕಳು. ಬಳಿಕವರಿಗಾ ದ್ವೀಪವನೆರಡು ಭಾಗಂ ಮಾಡಿ ಕೊಡಲವ ವರ ಪೆಸರಿನಲ್ಲಿಯಾಯ ಖಂಡಂಗಳಿರ್ಪವರ ಮಧ್ಯದಲ್ಲಿ ವೃತ್ತಾಕಾರಮಾದ ಮಾನಸೋತ್ತರವೆಂಬುದೊಂದು ಪರ್ವತವಿಹುದದರ ಮೇಲೆ ಯಕ್ಷ ರಕ್ಷ ಗರುಡ ಗಂಧರ್ವಾದಿಗಳ ಪಟ್ಟಣಂಗಳಂನಂತಂಗಳುಂಟಾ ಗಿರಿಯಿಂದುತ್ತರ ಭಾಗವೆ ಧಾತಕಿಯೆಂಬಾತನದು. ದಕ್ಷಿಣ ಭಾಗವೆ ಸುಖೋತ್ಕರವೆಂಬಾತನದು. ಆ ಖಂಡದ್ವಯದಲ್ಲಿಯೂ ಮಹಾ ನದಿಗಳುಂ ಕ್ಷುದ್ರಗಿರಿ ನದಿ ನಂದನಾದಿ ನಾನಾ ರಂಜಕಗಳುಂಟಾ ವರ್ಷದಲ್ಲಿಯ ಜನರು ಮೂರು ತಾಳುದ್ದದವರು. ಕಲ್ಪವೃಕ್ಷ ಫಲಾಹಾರದಿಂದಿಪ್ಪತ್ತುಸಾವಿರ ವರ್ಷದಾಯುಷ್ಯದಿಂ ಜರೆ ರುಜೆಗಳಿಲ್ಲದೆ ಸೋಮೇಶ್ವರ ನಾಮ ಲಿಂಗಪೂಜಕರಾಗಿ ನಿತ್ಯಸುಖದಿಂದಿರ್ಪರ್. ೫೪೪

## ಸ್ವಾದೂದಕ ಸಮುದ್ರ :

ಮತ್ತಮಾ ಪುಷ್ಕರ ದ್ವೀಪಮಂ ಪೊರಗಾವರಿಸಿದ ಸ್ವಾದೂದಕ ಸಮುದ್ರಮರ ವತ್ತನಾಲ್ಕು ಲಕ್ಷ ಯೋಜನದಗಲಮಾಗಿ ಸಮಸ್ತ ಮೇಘಮಾಲೆಗಳಿಗುದಕಮನಿತ್ತು, ಸಕಲ ಲೋಕೋಪಕಾರಮಾಗಿರ್ಕುಂ. ಬಳಿಕ್ಕದರ ಪೊರವಳಸಿ ಸರ್ವದೇವತಾ ಕ್ರೀಡಾರ್ಥಮಾದ ಹಿರಣ್ಮಯ ಭೂಮಿ ದಶಕೋಟಿ ಯೋಜನದಗಲದಿಂ ಜಂಘಾ ಮಾತ್ರ ಪ್ರಮಾಣಿನ ಜಲಮಯಮಾಗಿ ನಿರ್ಜರ ಪ್ರದೇಶಮಾಗಿರ್ಕುಂ. ೫೪೫

## ಲೋಕಾಲೋಕ ಮಹಾಗಿರಿ :

ಮತ್ತಮದನಾವರಿಸಿದ ಸುರಸಂತತಿಗಾಸ್ಪದಮಾದ ಸೂರ್ಯನ ರಥ ಸಂಚರಣದೆಡೆಯೆನಿಪ, ತನ್ನ ದಕ್ಷಿಣಭಾಗಮಾದ ಕಡೆಯೊಳಾ ಸೂರ್ಯನ ಪ್ರಕಾಶ ಪ್ರವೇಶದಿಂ ಬೆಳಗು. ಉತ್ತರಭಾಗಮಾದ ಕಡೆಯಲ್ಲಿ ಸೂರ್ಯಪ್ರಕಾಶ ಪ್ರವೇಶವಿಲ್ಲವಾಗಿ ತಮಸ್ಸುಗಳುಳ್ಳುದರಿಂ ಲೋಕಾಲೋಕ ಪರ್ವತಮೆಂಬಪೆಸರ್ವಡೆದಿಹುದಾ ಮಹಾಗಿರಿಯೆ ಕೋಂಟೆಯಂತಾ ಹಿರಣ್ಮಯ ಭೂಮಿಯಂ ಬಳಸಿ ಹತ್ತು ಸಾವಿರ ಯೋಜನದಗಲ, ಐವತ್ತುಸಾವಿರ ಯೋಜನದುದ್ದಮಾಗಿರ್ಪುದಾ ಗಿರಿಯ ಮೇಲಾ ಸೂರ್ಯನ ರಥಕ್ಕಾ ತಮೋಭೂಮಿಯ ರಾಕ್ಷಸರ ವಿಘ್ನಮಾಗದಂತೆ ಇಂದ್ರಾದಿ ದಿಕ್ಪಾಲಕರ ಪದಾತಿ ಮೊದಲಾದ ಬಲಂ ತಮ್ಮತಮ್ಮದೆನಿಸಿ ಅಲ್ಲಿ ಕಾಯ್ದುಕೊಂಡಿರ್ಕುಂ. ೫೪೬

## ತಮೋಭೂಮಿ :

ಮತ್ತಮದರಾಚೆಯಲ್ಲಿ ಬರಿಯ ತಮಸ್ಸು ಮುಸುಕಿದ ಭೂಮಿ ಮೂವತ್ತೈದು ಕೋಟಿಯುಂ ಹತ್ತೊಂಭತ್ತು ಲಕ್ಷಮುಂ ನಾಲ್ವತ್ತು ಸಾವಿರ ಯೋಜನ ಪ್ರಮಾಣಮದರಲ್ಲಿ ನಿಶಾಚರರಾದ ರಾಕ್ಷಸರಿರ್ಕುಂ. ೫೪೭

## ಗರ್ಭೋದಕ ಸಮುದ್ರ :

ಮತ್ತಮದರಾಚೆಯಲ್ಲಿ ಗರ್ಭೋದಕ ಸಮುದ್ರಮೊಂದು ಕೋಟಿಯುಂ ಇಪ್ಪತ್ತೇಳು ಲಕ್ಷ ಯೋಜನ ವಿಶಾಲದಿಂದಿರ್ಪುದಲ್ಲಿ ಬಹುಮರಿಯ ಶಂಖದಗಿರಿಯುಂ ತಿಮಿ ತಿಮಿಂಗಿಲಾದಿ ಮಹಾಜಲಚರ ಪ್ರಾಣಿಗಳುಂ ಆ ತಿಮಿತಿಮಿಂಗಿಲಮೆಂಬ ಮೀನ್ಗಳೊಂದೊಂದನೀಕ್ಷಿಸಿ ಬೆರಸಿ ಸಂಯೋಗ ಮಾನದಿಂದಾ ಗರ್ಭೋದಕ ಸಮುದ್ರಂ ತುಳುಂಕಿ ತೆರೆಗಳಿಂದ ಸಮಸ್ತ ದ್ವೀಪಂಗಳನೊಳಕೊಂಡು ಜಲಪ್ರಳಯಮಾಗದಂತವರ ಮಧ್ಯದಲ್ಲಿ ಮಹಾಪರ್ವತಾಕಾರದ ಕಮಠನೊಂದು ಮರೆಯಾಗಿ ಮೆರೆದಿರ್ಕುಂ. ೫೪೮

## ಭೂಲೋಕ ಯೋಜನ ಸಂಖ್ಯೆ :

ಬಳಿಕೀ ಕ್ರಮದಿಂ ಯೋಜನ ಪ್ರಮಾಣವನೆಣಿಸಿ ನೋಡೆ ಜಂಬೂದ್ವೀಪಂ ಮೊದಲಾದ ದ್ವೀಪವೇಳಕ್ಕೊಂದು ಕೋಟಿಯುಂ ಇಪ್ಪತ್ತೇಳು ಲಕ್ಷ ಯೋಜನ ಪ್ರಮಾಣವಹುದು. ಕ್ಷಾರಾದಿ ಸಮುದ್ರವೇಳಕ್ಕೊಂದು ಕೋಟಿಯುಂ ಇಪ್ಪತ್ತೇಳು ಲಕ್ಷ ಯೋಜನ ಪ್ರಮಾಣವಹುದು. ಆ ಹಿರಣ್ಮಯ ಭೂಮಿಯೆ ದಶಕೋಟಿ ಯೋಜನ ಪ್ರಮಾಣವಹುದು. ಲೋಕಾಲೋಕ ಪರ್ವತವೆ ಹತ್ತುಸಾವಿರ ಯೋಜನ ಪ್ರಮಾಣವಹುದು. ಆ ತಮೋಭೂಮಿಯೆ ಮೂವತ್ತೈದು ಕೋಟಿಯುಂ ಹತ್ತೊಂಭತ್ತು ಲಕ್ಷವುಂ ನಾಲ್ವತ್ತುಸಾವಿರ ಯೋಜನ ಪ್ರಮಾಣವಹುದು. ಅದರಾಚೆಯ ಗರ್ಭೋದಕ ಸಮುದ್ರವೊಂದು ಕೋಟಿಯುಂ ಇಪ್ಪತ್ತೇಳು ಲಕ್ಷ ಯೋಜನ ಪ್ರಮಾಣವಹುದು. ಮತ್ತಮದರಾಚೆಯ ಬಯಲೊಂದು ಕೋಟಿ ಯೋಜನ ಪ್ರಮಾಣವಹುದಿಂತ್ತೈವತ್ತು ಕೋಟಿಯುಂ ಐವತ್ತು ಸಾವಿರ ಯೋಜನಕ್ಕೆ ಒಂದು ಲಕ್ಷ ಯೋಜನ ಪ್ರಮಾಣಮಾದಾ ಜಂಬೂ ದ್ವೀಪಕ್ಕೆ ಮೇರು ಮಧ್ಯಸ್ಥವಾದ ಕಾರಣದಿಂ ಮೇಲಣೈವತ್ತು ಸಾವಿರಯೋಜನಮಂ ಕಳೆದು, ಮೇರು ವಿನರ್ಧದಿಂ ಬ್ರಹ್ಮಾಂಡ ಕಟಾಹಾಂತಮಾದ ಭೂಮಿ ಪಂಚಾಶತಕೋಟಿ ಯೋಜನ ಪ್ರಮಾಣವಹುದು. ಈ ಕ್ರಮದಿಂದಾಮೇರುವಿನ ಪೂರ್ವ ಪಶ್ಚಿಮ ದಕ್ಷಿಣೋತ್ತರ ದೊಳ್ನೋಡೆ ಬ್ರಹ್ಮಾಂಡದಾಯತಂ ನೂರುಕೋಟಿ ಯೋಜನ ಪ್ರಮಾಣವೆಂದು ನಿಶ್ಚಿತಮಕ್ಕುಂ. ೫೪೯

ಇತಿ ಮರ್ತ್ಯಲೋಕ ಸ್ಥಿತಿ ವರ್ಣನಂ
ಪಂಚಮ ಪರಿಚ್ಛೇದ

# ಷಷ್ಠಮ ಪರಿಚ್ಛೇದ

ಕಂದ॥ ಅನುನಯದಿಂ ಭೂಲೋಕದ
ಘನತೆಯನುಸುರ್ದೆನೂರ್ಧ್ವ ಲೋಕಂಗಳನೀ ।
ಜನವರಿದಚ್ಚರಿವಡುವಂ
ತಿನಿಮಾತುಗಳಿಂದ ಪೇಳ್ವೆನೀಗಳನೂನಂ ॥

ಅದೆಂತೆಂದೊಡೆ,

## ಭುವರ್ಲೋಕ ವಾಯುಗತಿ :

ಭೂತಳದಿಂ ಧ್ರುವಮಂಡಲ ಪರಿಯಂತವಾಗಿ ಪದಿನೈದು ಲಕ್ಷ ಯೋಜನ ಪ್ರಮಾಣಮಪ್ಪುದೇ ಭುವರ್ಲೋಕಮದರಲ್ಲಿ ವಾಯುವಾಧಾರವಾದ ಸಮಸ್ತ ಮೇಘಂಗಳುಂ, ಸಿದ್ಧ ಗಂಧರ್ವಾದಿಗಳಾಶ್ರಯಂಗಳುಂ ಸೂರ್ಯಾದಿ ನವಗ್ರಹಂಗಳುಂ ಕ್ರಮದಿಂದುತ್ತರೋತ್ತರವಾಗಿರ್ಪವದೆಂತೆಂದೊಡೆ ಮೊದಲು ತನ್ನಾಯುವೀ ಭೂತಳದಿಂ ಮೇಲುನ್ನತವಪ್ಪ ಪತ್ತುಯೋಜನಪರಿಯಂತವಾಗಿ ವ್ಯಾಪಿಸಿ ಕೊಂಡಿರ್ಪ, ಭೂಮಿಯು ಸಕಲೋಷಧಿಗಳಂ ಬೆಳಸುತ್ತಿಹುದು. ಮತ್ತಮಾ ವಾಯುವಿನೊಳಗೆ ದಧಿವಾಹನೆಂಬ ವಾಯುವೀ ಧರೆಯಂ ವ್ಯಾಪಿಸಿ ಸಮಸ್ತರ್ಗೆ ದೀಪನಂ ಪುಟ್ಟಿಸಿ, ದನುಜರ ಗಮನಕ್ಕೆ, ಪಕ್ಷಿಗಳು ಹಾರುವುದಕ್ಕೆಯುಮಾಧಾರಮಾಗಿ ಸುಖಂಕರವಾಗಿಹುದು. ಮತ್ತಮಾ ವಾಯುವಿನೊಳುದಯಿಸಿದ ಪ್ರಚೇತಸನೆಂಬ ವಾಯುವು, ತಾನೊಂದು ವೇಳೆ ಬಿರುಗಾಳಿಯಾಗಿ ಬೀಸಿ, ವೃಕ್ಷಂಗಳಂ ಮುರಿದು, ಪಾವಕನನೆಬ್ಬಿಸಿ, ಗೃಹಂಗಳಂ ದಹಿಸಿ, ಸಮುದ್ರದ ವಡಬಾಗ್ನಿಯುಂ ಪಟುಮಾಡಿಕೊಂಡಿರ್ಪುದು. ೫೫೦

## ವರ್ಷಪ್ರದ ವಾಯು :

ಮತ್ತಮಲ್ಲಿಂದಂ ಮೇಲುನ್ನತ ಶತಯೋಜನಾಂತರದಲ್ಲಿರ್ದ ಸೇಚನೀಯುವೆಂಬ ವಾಯುವು ಮಿಂಚುವರ್ಣದ ಮೂಕವೆಂಬ ಮೇಘಂಗಳಂ ಸ್ವಾದೋದಕ ಸಮುದ್ರಕ್ಕಾದರೂ, ಲವಣ ಸಮುದ್ರಕ್ಕಾದರೂ ಸಾಗಿಸಿಕೊಂಡು ಪೋಗಿ ಆ ಸಮುದ್ರೋದಕಂಗಳಂ ಮೊಗೆದೆತ್ತಿ ಮೇಘಂಗಳಂ ತುಂಬಿ ಭೂಮಿಯ ಮೇಲುನ್ನತ ನೂರ್ಕೈವತ್ತು ಯೋಜನಾಂತರದೊಳಾ ಮೇಘಂಗಳಂ ತೆಪ್ಪದಂತೆ ತೇಲಿಸಿ ತಂದು ಧರೆಯ ಮೇಲೊಂದು ಹರಿಹಾದಿಯ ಹವಣಿನೊಳಾ ಮೇಘಂಗಳಂ ನಿಲಿಸಿ, ಬಳಿಕಲ್ಲಿದ್ದುದಕಮಂ, ಚಳಯುಂಗುಡುವಂತೆ ಕೆದರಿ ಚಿಲ್ಲಿ ವೃಷ್ಟಿಗಳಾಗಿ ಕರೆದು, ಮತ್ತಮಾ ಮೇಘಂಗಳಂ ಮೇಲಕ್ಕೆ ಮೊದಲಂತೆ ತೇಲಿಸಿಕೊಂಡು ಪೋಗಿ, ಗಿರಿ, ವನ, ಕ್ಷೇತ್ರ ಗ್ರಾಮಾದಿ ಯೋಗ್ಯಮಾದ ನೆಲನ ಸಸಿನಕ್ಕೆಳುಹಿತಂದು, ಮೊದಲಹವಣಿನಲ್ಲಿಯೇ ನಿಲಿಸಿದೊಡಲ್ಲಲ್ಲಿಯೆ ಮಳೆಗಳಪ್ಪವಾ ಮೇಘಂಗಳಂಗಕಾಂತಿಯೆ ಮಿಂಚು ವಾಯು ವಹ್ನಿ ಜಲಸಂಬಂಧದಿಂ ವಾರಿಕಲ್ಲುಗಳಕ್ಕುಂ. ಮತ್ತಮಾ ಸ್ವಾದೋದಕವೆಂತು ಭೂಮಿಯ ಸಂಬಂಧದಿಂ ರಸವಿಚಿತ್ರಮಪ್ಪಂತೆ,ಲವಣ ಸಮುದ್ರಮಾದರು ಆಯಾಯ ಬಹುವಾಸನಾ ಮೇಘಸಂಪರ್ಕದಿಂ ವಾಯುವಶದಿಂ ಸ್ವಾದೋದಕಮಕ್ಕುಂ.

ಮತ್ತಮಾ ಮಳೆಯಾಗುವಲ್ಲಿಯುಂ, ಭೂಮಿಯ ಮೇಲೊಂದು ಹರಿಹಾದಿಯ ಹವಣಿನಲ್ಲಿಯೆ ಮೇಘಂಗಳೆರಗಿನಿಂದಿಹುದೆಂದು ತಿಳಿಯಲ್ವೇಳ್ಕುಂ.

ಮತ್ತಮಾ ನೂರ್ಕೈವತ್ತು ಯೋಜನದಿಂ ಮೇಲುನ್ನತ, ನೂರುಯೋಜನಾಂತರದೊಳಾ ಸೇಚನೀಯುವೆಂಬ ವಾಯುವೆ ಸತ್ವವಹವೆಂಬ ಮೇಘಂಗಳಿಂ ತಂದುದಕದಲ್ಲಿ ಮಂಡೂಕ, ಮತ್ಸ್ಯ, ಕೂರ್ಮವೆರಸಿದ ಮಳೆಗಳಿಂ ದುರ್ದಿನಂಗಳಕ್ಕುಂ ೫೫೧

## ವಾಯುವಿನಿಂ ವೃಷ್ಟಿಭೇದ :

ಮತ್ತಮಲ್ಲಿಂದಂ ಮೇಲುನ್ನತವೈವತ್ತುಸಾವಿರ ಯೋಜನಾಂತರದಲ್ಲಿರ್ದ ಮೋಘವೆಂಬ ವಾಯು ರೌಷದವೆಂಬ ಮೇಘಂಗಳಿಂ ತಂದ ಜಲವೃಷ್ಟಿಯಾಗೆ ಧರೆಯಪ್ರಾಣಿಗಳಿಗಾ ತಜ್ಜಲಪಾನಾದಿಗಳಿಂ ದುಃಖಂಗಳಕ್ಕುಂ.

ಮತ್ತಮಲ್ಲಿಂದಂ ಮೇಲುನ್ನತೋನ್ನತವೈವತ್ತು ಯೋಜನಾಂತರದಲ್ಲಿರ್ದ ಅಮೋಘವೆಂಬ ವಾಯು ಮಾರಕವೆಂಬ ಮೇಘಂಗಳಿಂ ತಂದ ಜಲಂ ಮಳೆಯಾಗೆ ಧರೆಯ ಪ್ರಾಣಿಗಳಿಗಾ ಜಲಪಾನಾದಿಗಳಿಂ ಮರಣಂಗಳಕ್ಕುಂ.

ಮತ್ತಮಲ್ಲಿಂದಂ ಮೇಲುನ್ನತವೈವತ್ತು ಯೋಜನಾಂತರದಲ್ಲಿರ್ದ ವಜ್ರಾಂಗವೆಂಬವಾಯು ಫಲಕಾಹ್ವಯವೆಂಬ ಮೇಘಂಗಳಿಂ ತಂದ ಜಲಂಗರೆಯೆಭೂಮಿಯ ಸಕಲ ವೃಕ್ಷಾದಿಕಮೆಲ್ಲಂ ಪಲ್ಲವ ಕುಸುಮ ಫಲಭರಿತಂಗಳಕ್ಕುಂ.

ಮತ್ತಮಲ್ಲಿಂದಂ ಮೇಲುನ್ನತವೈವತ್ತು ಯೋಜಂತರದಲ್ಲಿರ್ದ ವೈದ್ಯುತವೆಂಬ ವಾಯು ವೈದ್ಯುತವೆಂಬ ಮೇಘಂಗಳ ಸಂಬಂಧದಿಂದಾ ಧ್ವನಿಯೆ ಗುಡುಗು ಭೂಮಿಗೆ ನಾನೂರ್ಕೈವತ್ತು ಯೋಜನಾಂತರದಲ್ಲಿ ಪುಟ್ಟುತ್ತಿರ್ಕುಂ.

ಮತ್ತಮವಲ್ಲಿಂದಂ ಮೇಲುನ್ನತವೈವತ್ತು ಯೋಜನಾಂತರದಲ್ಲಿರ್ದ ಕೈವತಕವೆಂಬ ವಾಯುು ಪುಟ್ಟವಹವೆಂಬ ಮೇಘಂಗಳಿಂ ತಂದಜಲಂ ವರ್ಷಮಾಗೆ ತಜ್ಜಲಪಾನಾದಿಗಳಿಂ ಧರೆಯ ಜನರ್ಗೆ ಪುಷ್ಟಿಗಳಕ್ಕುಂ.

ಮತ್ತಮವಲ್ಲಿಂದಂ ಮೇಲುನ್ನತವೈವತ್ತು ಯೋಜನಾಂತರದಲ್ಲಿರ್ದ ಸಂವರ್ತಕವೆಂಬ ವಾಯುು ದೋಷದವೆಂಬ ಮೇಘಂಗಳಿಂ ತಂದ ಜಲಧಾರೆಯಾಗೆ ತಜ್ಜಲಪಾನಾದಿಗಳಿಂ ಧರೆಯ ಜನರ್ಗೆ ವ್ಯಾಧಿಗಳಕ್ಕುಂ.

ಮತ್ತಮವಲ್ಲಿಂದಂ ಮೇಲುನ್ನತವೈವತ್ತು ಯೋಜನಾಂತರದಲ್ಲಿರ್ದ ವಿಸಂವರ್ತವೆಂಬ ವಾಯುು ಕ್ರೋಧವೆಂಬ ಮೇಘಂಗಳಿಂ ತಂದ ಜಲಂಸೋನೆಯಾಗೆ ತಜ್ಜಲಪಾನಾದಿಗಳಿಂ ಭೂಮಿಯ ಜನರ್ಗೆ ಕ್ರೋಧಯುದ್ಧಂಗಳಪ್ಪವಾ ದೃಷ್ಟಿಯಿಂದವೆ ರಾಕ್ಷಸ ಸಂಹಾರವುಕ್ಕುಂ. ಬಳಿಕಿಲ್ಲಿ ಧೂಮಜ್ಯೋತಿ ಸಲಿಲ ಮಾರುತಂಗಳೊಂದುಗೂಡವೆ ಮೇಘಂಗಳು, ಆ ಮೇಘಂಗಳಿಂ ಮಳೆಗರೆವಲ್ಲಿ. ೫೫೨

## ಜ್ಯೋತಿಶ್ಚಕ್ರ ರಾಶಿಗ್ರಹಗಳು :

ಮೇಷ ವೃಷಭ ಮಿಥುನ ಕಟಕ ಸಿಂಹ ಕನ್ಯ ತುಲ ವೃಶ್ಚಿಕ ದನಸ್ಸು ಮಕರ ಕುಂಭ ಮೀನವೆಂಬ ಹನ್ನೆರಡು ರಾಶಿಗಳುಂ, ಅಶ್ವಿನಿ ಭರಣಿ ಕೃತ್ತಿಕೆ ರೋಹಿಣಿ ಮೃಗಶಿರ ಆದ್ರ್ರೆ ಪುನರ್ವಸು ಪುಷ್ಯ ಅಶ್ಲೇಷ, ಮಘಾ ಪುಬ್ಬೆ ಉತ್ತರ ಹಸ್ತ ಚಿತ್ತೆ ಸ್ವಾತಿ ವಿಶಾಖ ಅನುರಾಧ ಜ್ಯೇಷ್ಠ ಮೂಲ ಪೂರ್ವಾಷಾಡ ಉತ್ತರಾಷಾಡ ಶ್ರವಣ ಧನಿಷ್ಠ ಶತಭಿಷ ಪೂರ್ವಾಭಾದ್ರ ಉತ್ತರಾಭಾದ್ರ ರೇವತಿ ಯೆಂಬವಿಪ್ಪತ್ತೆಳು ನಕ್ಷತ್ರಂಗಳುಂ ತಮ್ಮ ತಮ್ಮ ಅಧಿಕಾರಮುಂಮಾಡುತ್ತಿರ್ಪವು. ಆದದೊಳೊಂದೊಂದು ನಕ್ಷತ್ರಕ್ಕೆ ನಾಲ್ಕು ನಾಲ್ಕು ಪಾದವಾಗಿ, ಮೇಷಾದಿ ಹನ್ನೆರಡ್ಮು ರಾಶಿಗಳೊಂದೊಂದಕ್ಕೊಂಭತ್ತು ಪಾದವೆನಿಸಿ, ಅಶ್ವಿನಿಮೊದಲಾದ ಇಪ್ಪತ್ತೇಳು ನಕ್ಷತ್ರಂಗಳುಂ ಕ್ರಮದಿಂ ಹಸುಗೆಯಾಗಿರ್ಪವಲ್ಲಿ. ೫೫೩

## ವರ್ಷಯೋಗ :

ಮೇಷಾದಿ ರಾಶಿಗಳುದಯುವೇ ಲಗ್ನ, ಆ ಲಗ್ನದ ಶುಭಾಶುಭರೂಪದಿಂ ಹೊಣೆಯೂದ ನಕ್ಷತ್ರಂಗಳಿಂ ದೇಶ ಕಾಲ ಕರ್ಮವಶದಿಂ ಸುವೃಷ್ಟಿ ಅಲ್ಪವೃಷ್ಟಿಗಳಾಗಿ, ಭೂಲೋಕದ ಜನರ್ಗನ್ನಾದಿ ಭೋಗಸಾಧನಂಗಳಂ ಪೆರ್ಚಿಸುತ್ತಿರ್ಪವಾ ಮಳೆಗಳಾಗುವಲ್ಲಿ ಸೂರ್ಯನ ವರ್ಷಕಿರಣಾಧಾರವಿಂದ್ರನಾಣತಿಗಳಿಂ ನಡುವುತ್ತಿರ್ಪವಿಂತು ವಾಯುು ಮೇಘ, ಮಳೆ, ಮಿಂಚು, ಮೊಳಗು, ಆಲಿಕಲ್ಗಳ್ಗಧಿಪತಿಗಳಾದವರ ನರಿಯಲ್ವೇಳ್ಕುಂ. ೫೫೪

## ಸಪ್ತ ಪವನಾಧಾರಾದಿಗಳು :

ಬಳಿಕಿಲ್ಲಿಂದಂ ಮೇಲೆ ಒಂಭತ್ತುಸಾವಿರದಮುನ್ನೂರು ಯೋಜನ ಪ್ರಮಾಣಿನೊಳಗಾಗಿ, ಮೇಘ, ಅನೋಘ, ವಜ್ರಾಂಗ, ವೈದ್ಯುತ, ರೈವತಕ, ಸಂವರ್ತಕ,

ವಿಶಂತವರ್ತಕವೆಂಬೇಳು ಪವನಾಧಾರದಿಂದುತ್ತರೋತ್ತರವಾದ ವಿಚಿತ್ರ ಮೇಘಾಶ್ರಯಂಗಳಾದ ಪಟ್ಟಣಂಗಳಲ್ಲಿರ್ಪವರಾರಾರೆಂದೊಡೆ. ೫೫೫

## ಅಭ್ರನಗರ ನಿವಾಸಿ ಬಾಲಗ್ರಹ ದೇವತೆಗಳು :

ಮೊದಲು ಮೇಘವೆಂಬ ಪವನಾಧಾರದ ಮೇಘಾಶ್ರಯದ ಪಟ್ಟಣದಲ್ಲಿ ಮೂವತ್ತುಸಾವಿರ ರೌದ್ರಮೂರ್ತಿಗಳಪ್ಪ ಕಾಮರೂಪಿಗಳಾದ ಮಹಾಪ್ರರಾಕ್ರಮಿಗಳೆನಿಸುವ ಭೂವ್ಯಾದಿ ಸಕಲಲೋಕ ಸಂಚಾರಿಗಳೆನಿ ಪಷಣ್ಮುಖನನಾರಾಧಿಸುತ್ತಿರ್ಪ ಪಿಶಾಚದೇವತೆಗಳುಂ: ಧನದೆ, ಭೀಷಣಿ, ಕಾಳಿಕೆ, ಭೀಮರೂಪಿ, ಹಂಸಿನಿ, ಪೂತನಿ ಮುಕ್ತಕೇಶಿ, ಹಾಹಾಸಿನಿ, ಹರಿಕೆ, ರೋಧಿಸಿ, ಶಕುನಿ, ಭೂಮಾಳಿ, ಉತ್ತಮೆ, ಪಿಂಗಳಿ, ಗೋಕರ್ಣಿ, ಪಂಕಜೆ, ಶ್ರೀಮುಖಿ, ಜನಿ; ಕುಂಭಕರ್ಣಿ, ತಾಪಿತೆ, ಕಾಳರಕ್ಕಸಿ, ನಂದಿನಿ, ಕ್ರೋಧಿಸಿ, ಧನೆ, ಶಾಕಿನಿ, ಪಂಚಳೆ, ಕಾಮಿನಿ, ಮೇಧಿನಿ,ನಳಿನಿ, ಮಹಾಕುಂಭಿನಿ, ಹರಿ, ಹಾಹಾಕರ್ಣಿ, ವಾಯುವಿ, ಚಿಕ್ಕಣಿ, ಸುಗಂಧಿನಿ, ವನದೇವಿ, ಕುಂತಣಿಯೆಂಬ ಪೆಸರಿನ ದೇವತೆಗಳಿರ್ದು, ಈಲೋಕದಲ್ಲಿನ ಹತ್ತುದಿನ, ಹನ್ನೊಂದು ತಿಂಗಳು, ಹದಿನಾರು ವರ್ಷದ ಬಾಲಕರಂ ಕ್ರಮದಿಂ ಗ್ರಹಂಗಳಾಗಿ ಪಿಡಿದು ತಮ್ಮ ತಮ್ಮ ವಿಕಾರಂಗಳಂ ಸೂಚಿಸಿ ಬೇರೆ ಬೇರೆ ಬಲಿ ಭೋಜನಂಗೊಳುತ್ತಿರ್ಪರಂ. ೫೫೭

## ವಿನಾಯಕರು :

ಬಳಿಕಲ್ಲಿಂದಂ ಮೇಲೆ ಅಮೋಘವೆಂಬೆರಡನೆಯ ಪವನಾಧಾರದ ಮೇಘಾಶ್ರಯದ ಪಟ್ಟಣದಲ್ಲಿ ರುದ್ರನಿಂ ಪುಟ್ಟಿದ ನೀಲಾಂಜನಛ್ಛಾಯೆಯ, ಸ್ಥೂಲಕಾಯದ ಮಹೋದರದ, ಗಜವಕ್ತ್ರದ, ಸರ್ಪಾಭರಣನಾದ, ಮೂವತ್ತು ಸಾವಿರ ಕೋಟಿ ವಿನಾಯಕರಿರ್ದು ಮರ್ತ್ಯಲೋಕದ ದುರ್ಮಾರ್ಗಿಗಳ್ಮಾಳ್ಪ ಸತ್ಕರ್ಮಫಲವನಪಹರಿಸುತ್ತೆ ಮಹಾಬಲವಂತರಾಗಿಹರು.

ಬಳಿಕಲ್ಲಿಂದಂ ಮೇಲೆ ವಜ್ರಾಂಗವೆಂಬ ಮೂರನೆಯ ಪವನಾಧಾರದ ಮೇಘಾಶ್ರಯದ ಪಟ್ಟಣದಲ್ಲಿ ಭಿನ್ನಾಂಜನಕಾಂತಿಯ, ಭೀಮಕಾಯದ ಕೋಟ್ಯಾನುಕೋಟಿ ವೀರರಿಹರಲ್ಲಿಗೀ ಭೂಲೋಕದ ಶ್ಮಶಾನ ಭೂತ ಬೇತಾಳ ಮಂತ್ರ ಸಾಧಕರಿಯುದ್ಧತ್ತಿಹರವರೀ ಭೂಲೋಕದಲ್ಲಿಯ ಸುಡುಗಾಡಿನಲ್ಲಿ ವೀರಗಲ್ಲ ರೂಪಿನಲ್ಲಿ ಬಲಿಗೊಳುತ್ತಿಹರು. ೫೫೭

## ವೀರಸ್ವರ್ಗ ;

ಬಳಿಕಲ್ಲಿಂದಂ ಮೇಲೆ ವೈದ್ಯುತವೆಂಬ ನಾಲ್ಕನೆಯ ಪವನಾಧಾರದ ಮೇಘಾಶ್ರಯದ ಪಟ್ಟಣದಲ್ಲಿ ಸುರಪನಾಣತಿಯ ಅಪ್ಸರರೆನಿಸುವ ದೇವತೆಗಳಿಹರಲ್ಲಿಗೆ ಈ ನರಲೋಕದ ಕರ್ಮ್ಮರಿ ಅಗ್ನಿ ಜಲ ಸಂಗ್ರಾಮ ಗೋಗ್ರಹಣಾದಿಗಳಲ್ಲಿ ಪರಾಕ್ರಮದಿಂದ ಳಿದವರನಲ್ಲಿಯ ದೇವ ಕನ್ನೆಯರು ಅನಂತ ಸಂಭ್ರಮದಿಂ ಮಣಿಖಚಿತ ವಿಮಾನದಿಂದೊಯ್ವರು. ಅದೇ ವೀರಸ್ವರ್ಗಮಕ್ಕುಂ. ೫೫೮

## ಸಿದ್ಧವಿದ್ಯಾಧರಾದಿ ಲೋಕಗಳು :

ಬಳಿಕಲ್ಲಿಂದಂ ಮೇಲೆ ರೈವತಕವೆಂಬೈದನೆಯ ಪವನಾಧಾರದ ಮೇಘಾಶ್ರಯದ ಪಟ್ಟಣದಲ್ಲಿ ಮಹಾಸಿದ್ಧರಿಹರಲ್ಲಿಗೀ ಧರೆಯ ಕೆಲವು ಮಂತ್ರಸಿದ್ಧ ಸಾಧಕರೈದುತ್ತಿಹರು.

ಬಳಿಕಲ್ಲಿಂದಂ ಮೇಲೆ ಸಂವರ್ತಕವೆಂಬಾರನೆಯ ಪವನಾಧಾರದ ಮೇಘಾಶ್ರಯದ ಪಟ್ಟಣದಲ್ಲಿ ಮೂರುಕೋಟಿ ವಿದ್ಯಾಧರರೆ ಮಹದೈಶ್ವರ್ಯದಿಂದಿಹರು.

ಬಳಿಕಲ್ಲಿಂದಂ ಮೇಲೆ ವಿಸಂವರ್ತವೆಂಬೇಳನೆಯ ಪವನಾಧಾರದ ಮೇಘಾಶ್ರಯದ ಪಟ್ಟಣದಲ್ಲಿ, ವೀಣಾದಿವಾದನ ತಂತ್ರ ಸಿದ್ಧರಾದ ಪಕ್ಷಿಸಂಕುಲವಿರ್ಪವು. ಇಂತೇಳು ಪವನಾಧಾರದ ಮೇಘಾಶ್ರಯ ಸ್ಥಿತರ ಭೇದಂಗಳಕ್ಕುಂ ೫೫೯

## ದಶಮೇಘ ಸ್ಥಾನಂಗಳ ವಿಚಾರಂ :

ಮತ್ತಮಲ್ಲಿಂದ ಮೇಲೆ ನೂರು ಯೋಜನಾಂತರದಲ್ಲಿ ಹತ್ತುಮಾರುತಾಧಾರದಿಂ ಮೆರೆವ ಬ್ರಹ್ಮಸೃಷ್ಟಿಯ ದಶಮೇಘ ಸ್ಥಾನಂಗಳುತ್ತರೋತ್ತರ ಮಾಗಿರ್ಪವಲ್ಲಿ ಮೊದಲ ಮಾರುತಾಧಾರದ ಮೇಘಸ್ಥಾನದಲ್ಲಿ ಕಶ್ಯಪಬ್ರಹ್ಮನಿಂದುದ್ಭವಿಸಿದ ಬೇರೆ ಬೇರೆ ಮಳೆ ಮಿಂಚು ಸಿಡಿಲುಗಳ್ಗೆ ಕಾರಣಮಾದ ಸುರಪನಾಣತಿಯ ಹತ್ತುಕೋಟಿ ವಾರಿಧರ ಮೆಘಂಗಳಾದೊಡೆ ಬಿಂಗದಹೊರೆಗಳಂತೊಡಗೂಡಿರ್ಪವು. ಆ ವಾರಿಧರ ಮೇಘಂಗಳುಂ ಸ್ವತಂತ್ರಗಮನವಿಲ್ಲಾಗಿ ವಾಯುಗಳೇ ಸಾಗಿಸಿತಂದು ಪೂರ್ವೋಕ ಪ್ರಕಾರದಿಂ ಭೂಲೋಕಕ್ಕೆ ಮಳೆಗರೆಸಿ, ಗಾಳಿಪಟದಂತೆ ತೇಲಿಸಿಕೊಂಡು ಪೋಗಿ ಮೊದಲ ಸ್ಥಾನದಲ್ಲಿರಿಸುತ್ತಿರ್ಪವು ಆ ವಾರಿಧರ ಮೇಘಂಗಳಿರ್ಪ ಪ್ರಥಮ ಸ್ಥಾನವೀ ಭೂಮಿಗೆ ಹತ್ತುಸಾವಿರ ಯೋಜನಾಂತರಮಕ್ಕುಂ. ೫೬೦

## ಗಂಧರ್ವರ ಭೇದ :

ಮತ್ತಮಲ್ಲಿಂದಂ ಮೇಲೆ ಹತ್ತುಸಾವಿರ ಯೋಜನಾಂತರದ ದ್ವಿತೀಯ ಮಾರುತಾಧಾರದ ಮೇಘಸ್ಥಾನದಲ್ಲಿ ಸ್ಥೂಲಕಾಯದ ಜೀಮೂತರೆನಿಪ ವಿದ್ಯಾಧರರುಂ, ಗಂಧರ್ವರುಂ ವಿಶಾಲ ಚಿತ್ರಗೃಹಂಗಳಲ್ಲಿರ್ಪರಾ ಗಂಧರ್ವರೇ ದೇವಗಂಧರ್ವರೆಂದು, ಮರ್ತ್ಯಗಂಧರ್ವರೆಂದು ದ್ವಿವಿಧಪ್ರಕಾರವಹುದಲ್ಲಿ, ಪೂರ್ವಯುಗದಲ್ಲಿಯ ಪುಣ್ಯಾಪರಿಪಾಕದಿಂದೀ ಸೃಷ್ಟಿ ಪ್ರಾರಂಭದಲ್ಲಿಯೇ ತತ್ಪದಸ್ಥರಾದವರುಗಳೇ ದೇವಗಂಧರ್ವರಾಗಳು, ಬಳಿಕೀ ಸೃಷ್ಟಿಯಲ್ಲಿ ಮನುಷ್ಯರಾಗಿ ಜನಿಸಿ ಮೇಲೆ ಪುಣ್ಯಾಧೀನದಿಂದ ಆ ಪದವನೆಯ್ದಿದವರುಗಳೇ ಮರ್ತ್ಯಗಂಧರ್ವರುಗಳಕ್ಕುಂ. ೫೬೧

## ಸಪ್ತಮಾತೃಕಾ ಮತ್ತು ಯೋಗಿಣೀ ಶಕ್ತಿಗಳು :

ಮತ್ತಮಲ್ಲಿಂದಂ ಮೇಲೆ ಹತ್ತುಸಾವಿರ ಯೋಜನಾಂತರದ ಮೂರನೆಯ ಮಾರುತಾಧಾರದ ಮೇಘಸ್ಥಾನದಲ್ಲಿ ಬೇರೆ ಬೇರಾಕಾರ ವಾಹನಾಯುಧಾದಿಗಳನುಳ್ಳ

ಅಗ್ನಿಕನ್ನಿಕೆಯರಾದ ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಮಾಹೇಂದ್ರಿ ಚಾಮುಂಡಿಯರೆಂಬ ಸಪ್ತಮಾತೃಕೆಯರುಂ; ಕೆಲವರು ರುದ್ರಕನ್ನಿಕೆಯರುಂ; ಸಾಮರ್ಥ್ಯಸಿದ್ಧರುಂ;

ದೇವಿ ದಿವ್ಯಯೋಗಿನಿ ಧೂರ್ಜಟಿ ಧೂಮ್ರಾಕ್ಷಿ ಧ್ವಂಸಿನಿ ದಂಡಧಾರಿಣಿ ಮೋಧಿನಿ ಮಾರಿ ಮಹಾಯೋಗಿನಿ ಶುಷ್ಕಾಂಗಿ ಸೌಂದರಿ ಶಾಂಕರಿ ಸಿದ್ಧಯೋಗಿನಿ ಮಾರಿಕೆ ಕಾಳಿ ಪ್ರೇತಾಶನಿ ಪ್ರಸಾದಿನಿ ಸರ್ವೇಶಿ ಕ್ರೋಧಿನಿ ಪ್ರೇತಭೂಷಿಣಿ ಕಂಕಾಳಿ ವ್ಯಾಘ್ರಿ ಪರಮೇಶ್ವರಿ ಕಾಳರಾತ್ರಿ ಕಿಂಕಿಣಿ ಕಪಾಲಿ ಕಲಹಪ್ರಿಯೆ ಕಾಕದೃಷ್ಟಿ ಉಗ್ರಿ ವೀರಕೌಮಾರಿ ಕಾಮರೂಪಿ ವೀರಭದ್ರೆ ವಿಶಾಲಾಕ್ಷಿ ವಿರೂಪಾಕ್ಷಿ ವಿಶ್ವರೂಪಿ ತುಷ್ಟಿ ವಿಷಲಂಘಿನಿ ಧನುರ್ಧರಿ ಊರ್ಧ್ವಕೇಶಿ ತಾಟಕಿ ತ್ರಿಪುರಾಂತಕಿ ವಾರಾಹಿ ರೌದ್ರಿ ತ್ರಿಪುಂಡ್ರಧಾರಿಣಿ ಭೂತಶಂಕೆ ರಕ್ತಾಕ್ಷಿ ಭಯಂಕರಿ ರೌದ್ರವೇತಾಳಿ ರಾಕ್ಷಸಿ ಲಕ್ಷ್ಮಿ ಲಂಬೋಷ್ಟಿ ನಿಶಾಚರಿ ಭೈರವಿ ಭೇಸುರಿ ಭೀಷಣಿ ನರಭೋಜನಿ ಘೋರೆ ಅಧೋಮುಖಿ ಡಾಕಿನಿ ಗಣೇಶಿ ಚಂಡಿ ಯಕ್ಷಿಣಿ ಈಶಿ ಹೂಂಕಾರಿಯರೆಂಬ ಚೌಷಷ್ಟಿ ಯೋಗಿಣಿಯರುಂ ತಮ್ಮ ನಾಮೋಚ್ಚರಣೆ ಮಾತ್ರದಿಂ ಗ್ರಹೋಚ್ಚಾಟನಾದಿ ಸಮಸ್ತ ವಿಘ್ನಂಗಳಂ ಪರಿಹರಿಸುತ್ತಿರ್ಪರ್. ೫೬೨

ಬತ್ತೀಸಾಯುಧಪಾಣಿ ದೇವತೆಗಳು:

ಮತ್ತಮಲ್ಲಿಂದಂ ಮೇಲೆ ಹತ್ತುಸಾವಿರ ಯೋಜನಾಂತರದ ನಾಲ್ಕನೆಯ ಮಾರುತಾಧಾರದ ಮೇಘಸ್ಥಾನದಲ್ಲಿ ಖಡ್ಗ, ಕಠಾರಿ, ಕಕ್ಕಡ, ಕಡುಗತ್ತಿ, ಸೆಣೆಗತ್ತಿ, ಸಬಳ, ಇಟ್ಟಿ, ಬಾಣ ಇದಿರುಗತ್ತಿ ಚಕ್ರ ಚೆಂಡು ನರಾದಿ ಚೆಲ್ಲಿಹ ಬಲ್ಲಿಹ ಶೂಲ ಶಿರಾದಿ ಗದೆಯು ಕಬ್ಬಿನಕೋಲು ಬಾಕು ಪೋತಿ ಚೂರಿ ಕಿರಸೆ ಚಿಕ್ಕತಾರಿ ಪರಶು ಪಾಶ ಪಟ್ಟಿಯ ಅಂಕುಶ ಮಟ್ಟ ಜವದಾಡೆ ಅಂಕುಶ ವಂಕಿ ಲೌಡಿಯೆಂಬ ಬತ್ತೀಸಾಯುಧ ಪಾಣಿಗಳಾದ ಘನದೇವತೆಗಳಿರ್ಪರ್. ೫೬೩

ಐರಾವತ: ಗರುಡ: ದೇವಗಂಗೆ

ಮತ್ತಮಲ್ಲಿಂದಂ ಮೇಲೆ ಹತ್ತುಸಾವಿರ ಯೋಜನಾಂತರದ ಪಂಚಮ ಮಾರುತಾಧಾರದ ಮೇಘಸ್ಥಾನದಲ್ಲಿ ಇಂದ್ರನೈರಾವತಾದಿ ಗಜಂಗಳಿರ್ಪರ್.

ಮತ್ತಮಲ್ಲಿಂದುನ್ನತ ಹತ್ತು ಸಾವಿರ ಯೋಜನಾಂತರದಾರನೆಯ ಮಾರುತಾಧಾರದ ಮೇಘಸ್ಥಾನದಲ್ಲಿ ಖಗೇಶ್ವರನಾದ ಗರುತ್ಮನಿರ್ಪಂ.

ಮತ್ತಮಲ್ಲಿಂದಂ ಮೇಲೆ ಹತ್ತು ಸಾವಿರ ಯೋಜನಾಂತರದ ಸಪ್ತಮ ಮಾರುತಾಧಾರದ ಮೇಘಸ್ಥಾನದಲ್ಲಿ ದೇವಗಂಗೆ ದಶಲಕ್ಷ ಯೋಜನ ವಿಸ್ತಾರದಿಂ

ವಿಚಿತ್ರವರ್ಣದ ಕಮಲ ಕುಮುದ ಹಂಸಾದಿಗಳಿಂದಲಂಕೃತಮಾಗಿ ದೇವ ಮನು ಮುನಿ ಸಿದ್ಧ ಗಂಧರ್ವಾದಿಗಳಿಗೆ ತನ್ನದರ್ಶನ ಸ್ಪರ್ಶನ ಸ್ನಾನಪಾನಾದಿಗಳಿಂ ಪರಮ ಪಾವನತೆಯನೀವುತ್ತಿರ್ಕುಂ. ೫೬೪

ನಂದಿಕೇಶ್ವರ;

ಮತ್ತಮಲ್ಲಿಂದಂ ಮೇಲೆ ಹತ್ತುಸಾವಿರ ಯೋಜನಾಂತರದ ಎಂಟನೆಯ ಮಾರುತಾಧಾರದ ಮೇಘಸ್ಥಾನದಲ್ಲಿ ಗಣನಿಕರದಿಂ ಕೂಡಿ ನಂದಿಕೇಶ್ವರನಿರ್ಪಂ. ಮತ್ತಮಲ್ಲಿಂದಂ ಮೇಲೆ ಹತ್ತುಸಾವಿರ ಯೋಜನಾಂತರದ ಒಂಭತ್ತನೆಯ ಮಾರುತಾಧಾರದ ಮೇಘಸ್ಥಾನದಲ್ಲಿ ದಕ್ಷಬ್ರಹ್ಮನಿರ್ಪಂ. ಬಳಿಕೀ ಸಮಸ್ತ ಮೇಘಾಶ್ರಯಂಗಳಲ್ಲಿರ್ದವರಂಗಕಾಂತಿ ರತ್ನಾಭರಣಾದಿ ದ್ಯುತಿಗಳಿಂದಲ್ಲಲ್ಲಿಯ ವಿಷಯಪ್ರಕಾಶವಲ್ಲದೆ ಸೋಮ ಸೂರ್ಯದೀಪ್ತಿಗಳಪೇಕ್ಷೆ ಇಲ್ಲೆಂದರಿ ಯಲ್ವೇಳ್ಕುಂ ೫೬೫

ಏಕಾದಶರುದ್ರ ಗಣಾದಿಸ್ಥಾನಂಗಳು:

ಬಳಿಕಲ್ಲಿಂದಂ ಮೇಲೆ ಹತ್ತುಸಾವಿರ ಯೋಜನಾಂತರದ ಹತ್ತನೆಯ ಮಾರುತಾಧಾರದ ವಿಮಾನ ಸ್ಥಾನವೆನಿಸುವ ಸೂರ್ಯನ ಭುವರ್ಲೋಕವಿಹುದು. ಅಲ್ಲಿ ಮಹೇಶ್ವರನ ಮಾನಸೋದ್ಭವರಾದ ವೀರಭದ್ರ ಶಂಭು ಗಿರೀಶ ಅಜ ಏಕಪಾತ್ತು ಅಹಿರ್ಬುದ್ನ ಪಿನಾಕಿ ಸ್ಥಾಣು ಪಶುಪತಿ ಭವ ತ್ರಿಪುರಾಂತಕರೆಂಬ ಏಕಾದಶ ರುದ್ರರತಿಪೂಜ್ಯರಾಗಿರ್ಪರಲ್ಲಿಯೇ ಧಾತ್ರಾದಿ ಪ್ರಭವಾಂತಮಾದಷ್ಟ ವಸುಗಳುಂ, ದ್ವಾದಶಾದಿತ್ಯರ್ಮೊದಲಾದವರೆಲ್ಲಂ ಕೂಡಿ ವರ್ತಿಸುತ್ತಿರ್ಕುಂ. ೫೬೬

ಸೂರ್ಯರಥ ಪರಿಮಾಣ ಗತಿಸ್ಥಿತ್ಯಾದಿಗಳು:

ಬಳಿಕಾ ಸ್ಥಾನವೀ ಭೂಮಿಗೊಂದು ಲಕ್ಷಯೋಜನ ಪ್ರಮಾಣವಿಹುದು' ಅಲ್ಲಿ ಆ ಭುವರ್ಲೋಕಾದೀಶ್ವರನಾದ ಸೂರ್ಯನು ರಥಾರೂಢನಾಗಿ ಮಹಾ ಮೇರು ಪರ್ವತಮಂ ಪ್ರದಕ್ಷಿಣಮಾಗಿ ತಿರುಗಿ ಭೂಲೋಕದ ದಿವರಾತ್ರಿಗಳಂ ನಡಸುತ್ತಿರ್ಪನಾತನ ರಥಕ್ಕೆ ಗಾಲಿಯೊಂದೇ ಎಪ್ಪತ್ತುಸಾವಿರ ಯೋಜನದಗಲರ ಅದರನೇಮಿವತ್ತಿಗೆಯ ಸಾವಿರಯೋಜನ ವಿಶಾಲ. ಅದಕ್ಕೈದುಮೊಳೆ. ಆ ಗಾಲಿ ಸಾವಿರ ಯೋಜನದ ಮಂದ. ಆ ಗಾಲಿತಿರುಗುವ ಮಧ್ಯದಲ್ಲಿ ಹತ್ತುಸಾವಿ, ಯೋಜನದಗಲತೆಯ ವಜ್ರವೇದಿಕೆಯುಂಟು. ಆ ಗಾಲಿ ಪೂರ್ವೋಕ್ತ ಭೂಮಿಯ ಲೋಕಾಲೋಕ ಪರ್ವತದ ಮೇಲಾಳುವೇರಿಯಲ್ಲಿ ತಿರುಗುವಂತೆ ಚರಿಸಿ ಬರುತ್ತಿಹುದು. ಅದರ ನಾಭಿಯೊಳ್ಪ್ರವೇಶಿಸಿದ ವಜ್ರಮಯವಾದಚ್ಚು ಹದಿನಾಲ್ಕು ಕೋಟಿಯೋಜನದ ನೀಳವಹುದು. ಗಾಣದ ಕತ್ತರಿಯಾಕಾರದಿಂ ಮೇರುವಿನ ತಿರುಗುಣಿಯ ಶಂಖಕ್ಕಮರಿಹುದು. ಆ ಅಚ್ಚಿನ ಮೇಲಾವಲಗೆಯ ಮಿಗೆ

ವಿಶಾಲಮಾದೆರಡು ಸಾವಿರಯೋಜನದಳತೆಯ ದಟ್ಟವಾಹಲಗೆಯಮೇಲೆ ಅಚ್ಚಿನ ಮಧ್ಯದಲ್ಲಿ ವಿಶ್ವಕರ್ಮ ನಿರ್ಮಿತಮಪ್ಪ ಮಹಾವಿಶಾಲೋನ್ನತಮಾದ ವಿಮಾನವೇ ನವರತ್ನಮಯ ಸ್ತಂಭಂಗಳಿಂ ಪತಾಕಾದಿ ವಿಚಿತ್ರರಚನೆಗಳಿಂ ಸಿಂಗರಂಬೆತ್ತು ಕಣ್ಗೊಳಿಸುತ್ತಿಹುದು. ೫೬೭

## ರವಿಕಲಾಕಿರಣಾದಿಗಳು:

ತಪಿನಿ ತಾಪಿನಿ ಧೂಮ್ರ ಮರೀಚಿ ಜ್ವಾಲಿನಿ ರುಚಿ ಸುಷುಮ್ನ ಭೋಗದಾ ವಿಶ್ವಭೋಧಿನಿ ಧರಣಿ ಕ್ಷಮಾ ಪ್ರಭಾಯೆಂಬ ದ್ವಾದಶಕಲಾವೃತನಾಗಿ, ಹಿಮಕಿರಣ ಮುನ್ನೂರ ಮೂವತ್ತಮೂರು, ಉಷ್ಣಕಿರಣ ಮುನ್ನೂರ ಮೂವತ್ತಮೂರು, ವರ್ಷಕಿರಣ ಮುನ್ನೂರ ಮೂವತ್ತಮೂರು, ಬೀಜ ಭೂತ ಕಿರಣವೊಂದು. ಅಂತು ಸಹಸ್ರಕರನೆನಿಸಿ ಕಾಲಕ್ರಮಾತ್ಮಕನಾಗಿ ಹಿರಣ್ಮಯಕೇಶ ಮುಖಲೋಮಂಗಳಿಂ, ಕಮಲಾದಿಕವಿಡಿದ ಚತುರ್ಭುಜಂಗಳಿಂ, ಕಿರೀಟ, ಕೇಯೂರ, ಕುಂಡಲಾದ್ಯಾಭರಣ, ವಸ್ತ್ರ, ಗಂಧಮಾಲ್ಯಾದಿಗಳಿಂದಲಂಕೃತಮಾದ, ಸಿಂಧೂರವರ್ಣದೊಂಭತ್ತು ಸಾವಿರ ಯೋಜನದ ದೀರ್ಘ ಶರೀರದಿಂದಿಪ್ಪತ್ತೇಳು ಸಾವಿರ ಯೋಜನ ದಗಲಮಾದ ತನ್ನ ಪ್ರಭಾಮಂಡಲಂಗೂಡಿ ಮೂವತ್ತಾರು ಸಾವಿರ ಯೋಜನ ವಿಶಾಲದಿಂದೆಸೆದಿರ್ಪಂ. ಮತ್ತಮಾ ಸೂರ್ಯನ ರಥದ ಈಶಾದಂಡದ ತುದಿಯ ನೊಗದ ಮಧ್ಯದಲೊಂದು ಕುದುರೆ, ಆ ನೊಗದೆಡಬಲದ ಕಡೆಕಡೆಯಲ್ಲಿ ಮೂರು ಮೂರು ಕುದುರೆಗಳಿಂತೇಳು ಪಾರುವ ಕುದುರೆಗಳ ಸರ್ಪರಜ್ಜುವಿನಿಂ ಬಿಗಿದು, ಕುಲಾಲ ಚಕ್ರಭ್ರಮಣದಂತೆ ಪ್ರದಕ್ಷಿಣಮಾಗಿ ತಿರುಗಿ ಬರುತ್ತಿರ್ಪವು. ಆ ರಥವು ನರರ ಉಛ್ವಾಸವೊಂದಕ್ಕೆ ಇಪ್ಪತ್ತೊಂಭು ಸಾವಿರದರುನೂರು ಯೋಜನಂ ನಡೆವುದು. ಗಳಿಗೆ ಒಂದಕ್ಕೆ ಎಪ್ಪತ್ತೇಳು ಲಕ್ಷದಮೇಲೆ ಎಪ್ಪತ್ತಾರು ಸಾವಿರ ಯೋಜನಂ ನಡೆವುದು. ಈ ಕ್ರಮದಿಂದಿರುಳು ಪಗಲಿಂದೊಂದು ದಿನಕ್ಕೆ ನಾಲ್ವತ್ತಾರು ಕೋಟಿಯುಂ ಅರುವತ್ತೈದು ಲಕ್ಷಮುಂ ಮೇಲರುವತ್ತು ಸಾವಿರ ಯೋಜನಂ ನಡೆವುದು. ೫೬೮

## ಅಹೋರಾತ್ರ ಕಲ್ಪನೆ:

ಇಂತು ನಡೆದು ಪಗಲೊಂದರಲ್ಲಿ ಪೂರ್ವಾದ್ರಿಯಿಂ ಪಶ್ಚಿಮಾದ್ರಿಗೆಯ್ದಲಾ ಮೇರು ಮರೆಯಾಗಿ, ಪೂರ್ವಾದ್ರಿ ಪಶ್ಚಿಮಗಡಿಯಾದುತ್ತರ ಭಾಗವೆಲ್ಲಂ ಕತ್ತಲೆ ಗವಿದು ರಾತ್ರಿಯಹುದು. ಬಳಿಕಾ ಮೇರುವಿನತ್ತರ ಭಾಗವೆಲ್ಲಂ ಬೆಳಕಾಗಿ ಹಗಲಹುದಿಂತು ನಡದಲ್ಲಿ ಪೂರ್ವಾದ್ರಿಗೆಯ್ದಲಾ ಮೇರುಮರೆಯಾಗಿ ಪೂರ್ವಾದ್ರಿ ಪಶ್ಚಿಮಗಡಿಯಾದುತ್ತರ ಭಾಗವೆಲ್ಲಂ ಕತ್ತಲೆ ಮುಸುಂಕಿ ರಾತ್ರಿಯಹುದು. ಬಳಿಕಾದಕ್ಷಿಣ ಭಾಗವೆಲ್ಲಂ ಬೆಳಕಾಗಿ ಮೊದಲಂತೆ ಪಗಲಕ್ಕುಂ. ೫೬೯

### ಅಹೋರಾತ್ರ ಸಂಧ್ಯಾಸ್ವರೂಪ :

ಬಳಿಕಿಲ್ಲಿ ಪಗಲಿರುಳಿನ ಸ್ವರೂಪವಮಾವುದೆನೆ : ಪ್ರಥಮ ಸೃಷ್ಟಿಯಲ್ಲಿ ಪಿತಾಮಹನು ತನೋಮಯವಾದ ದೇಹವಂ ಧರಿಸಿ ರಾಕ್ಷಸರಂ ನಿರ್ಮಿಸುತ್ತಾ ದೇಹವಂ ಬಿಡಲದೇ ಮರ್ತ್ಯರ್ಗೆರಾತ್ರಿಯಾಯಿತ್ತು. ಬಳಿಕಾ ಬ್ರಹ್ಮನು ಸತ್ವಮಯ ಶರೀರವಂ ತಳೆದು ದೇವತೆಗಳಂ ಸೃಜಿಸುತ್ತಾ ಶರೀರವಂ ಬಿಡಲು ಅದೇ ಮರ್ತ್ಯರ್ಗೆ ದಿವಸ ಸ್ವರೂಪವಾಯಿತ್ತು. ಮತ್ತಮಾ ಚತುರ್ಮುಖನು ಸ್ವಾತ್ವಿಕ ತನುವಂ ಸ್ವೀಕರಿಸಿ ಪಿತೃಗಳಂ ಪಡೆದು ಆ ತನುವಂ ಬಿಡಲು ಅದೇ ಪಗಲ ಸಂಧ್ಯಾರೂಪಮಾಯಿತ್ತು. ಮತ್ತಮಾ ಕಮಲಜನು ರಾಜಸಕಾಯಮಂ ಕೈಕೊಂಡು ನರಕರಂ ಕಲ್ಪಿಸುತ್ತಾ ಕಾಯಮಂ ಬಿಡಲದೇ ನರರ್ಗೆ ರಾತ್ರಿಯ ಕೌಮುದಿ ಸ್ವರೂಪವಾಯಿತ್ತು. ಈ ಪ್ರಕಾರಮಾದ ದಿವರಾತ್ರಿಗಳಂ ನಡೆಸುತ್ತಾ ಸೂರ್ಯನು ತನಗಡ್ಡಬರ್ಪ ಮಂದೇಹರೆಂಬ ಮಹಾರಾಕ್ಷಸನಿಕರಮಂ ಸಂಹರಿಸುತ್ತೆ, ಸಂಚರಿಸಲಾಗುವ ಗಳಿಗೆ, ದಿನ, ಪಕ್ಷ, ಮಾಸ, ವತ್ಸರ, ಯುಗಂಗಳ ಲಕ್ಷಣಮಂ ಮುಂದೆ ಪೇಳ್ವೆನು. ೫೭೦

### ರವಿಯಾನ ಗತಿಕ್ರಮ ವಿಚಾರ ಮತ್ತು ಪರಿವಾರ:

ಆ ಸೂರ್ಯನು ತಿರುಗುವಲ್ಲಿ ಚೈತ್ರಾದಿ ಹನ್ನೆರಡು ಮಾಸಂಗಳಲ್ಲಿ ಕ್ರಮದಿಂದೊಬ್ಬೊಬ್ಬರಧಿಪತಿಗಳಾಗಿ, ಆ ರಥ ಸಿಂಹಾಸನವನೇರಿ ಚರಿಸುವ ದ್ವಾದಶಾದಿತ್ಯರನವರವರ ಸಹಚರ್ಯರ ನಾಮಕ್ರಮ ವರ್ಣನಮೆಂತೊದೊಂಡೆ: ಧಾತ, ಅರಿಯಮ, ಮಿತ್ರ, ವರುಣ, ಇಂದ್ರ, ವಿವಸ್ವಾನ್, ಪರ್ಜನ್ಯ, ಪೂಷ, ಅಂಶುಮಾನ್, ಗಭಸ್ತಿಮಾನ್, ತ್ವಷ್ಟೃ, ವಿಷ್ಣುಗಳೆಂಬವರೆ ಕ್ರಮದಿಂ ದ್ವಾದಶಾದಿತ್ಯರು. ಪುಲಸ್ತ್ಯ ಪುಲಹ, ಅತ್ರಿ, ವಶಿಷ್ಠ ಅಂಗೀರಸ, ಭೃಗು, ಭಾರದ್ವಾಜ, ಗೌತಮ ಕಶ್ಯಪ, ಕ್ರತು, ಜಮದಗ್ನಿ, ಕೌಶಿಕರೆಂಬ ದ್ವಾದಶಋಷಿಗಳೆ ಕ್ರಮದಿಂದವರವರಂ ಕೀರ್ತಿಸುವರು. ವಾಸುಕಿ, ಕಂಕವೀರ, ತಕ್ಷಕ, ನಾಗ, ಏಲಾಪತ್ರ, ಶಂಖಪಾಲ, ವೀರಾವತ, ಧನಂಜಯ, ಮಹಾಪದ್ಮ, ಕರ್ಕೋಟಕ, ಕಂಬಲ, ಅಶ್ವತರೆಂಬ ದ್ವಾದಶ ಸರ್ಪಂಗಳೇ ಪರಿವಿಡಿದಾ ವಾಜಿಬಂದಾಧಿಕಾರಿಗಳು. ತುಂಬುರ, ನಾರದ, ಹಾಹಾ, ಹೂಹೂ ವಿಶ್ವಾವಸು, ಅಗ್ರಸೇನ, ವಸುರುಚಿ, ಸರ್ವಾಸು, ಚಿತ್ರಸೇನ, ಉರ್ನಾಹ, ಧೃತರಾಷ್ಟ್ರ ಸೂರ್ಯವರ್ಚ್ಯರೆಂಬ ದ್ವಾದಶಗಂಧರ್ವರೆ ಪರಿಪಾಟಿಯಿಂ ಪಾಡುವರು. ಕೃತಸ್ಥಲೆ ಪುಂಜಿಕಸ್ಥಲೆ, ಮೇನಕೆ, ಸಹಜನ್ಯೆ, ಪ್ರಮೋಚಂತಿ, ಅನುಮೋಚಂತಿ, ವಿಶ್ವಾಚಿ, ಘೃತವಾಚಿ, ಊರ್ವಶಿ, ಪೂರ್ವಚಿತ್ತೆ, ತಿಲೋತ್ತಮೆ, ರಂಭೆಯರೆಂಬದ್ವಾದಶ ಅಪ್ಸರಸ್ತ್ರೀಯರು ತರುವಾಯಿಂ ನೃತ್ಯವನಾಡುವರು. ರಥಭೃತು ರಥೌಜ ರಥಚಕ್ರ ರಥಾಶ್ವ ವೃತ್ತ ಅರುಣ ಸುಷೇಣ, ಸೇನಜಿತು ತಾರ್ಕ್ಷ್ಯ, ಅರಿಷ್ಟನೇಮಿ ರುತಜಿತು ಸತ್ಯಜಿತುಗಳೆಂಬ, ದ್ವಾದಶಗಾಮಿಗಳೆ ಪರಿಕ್ರಮದಿಂ ಸಾರಥಿಗಳು. ಪ್ರಹೇತಿ ಪೌರುಕ್ಷೇಯ, ವಧ ದರ್ಪ ವ್ಯಾಘ್ರ ಕ್ರೂರ ಅಪಸ್ಸು ವಾತ ವಿದ್ಯುತ್ತು

ದಿವಾಕರ ಬಭ್ರು ವೇತ ಯಜ್ಞ ವೇತರೆಂಬ ದ್ವಾದಶ ರಾಕ್ಷಸರೇ ಕ್ರಮದಿಂದವರವರ ವೈಗಾವಲವರು. ಅಂಗುಷ್ಠಮಾತ್ರದ ಸೂರ್ಯಕಿರಣಂಗಳಂ ಸೇವಿಸುವ ಗೋವಿನ ಪಾದಾಂಕಿತಸ್ಥಲದ ಪರವು ಪವಿತ್ರೋದಕದಿಂ ಸ್ನಾನಪಾನಾದಿಗಳನುಳ್ಳ ಮಹಾ ಋಷೀಶ್ವರರಾದ ಅರವತ್ತುಸಾವಿರ ವಾಲಖಿಲ್ಯರೇ ಸಾಮಾನ್ಯದಿಂ ದ್ವಾದಶಾದಿತ್ಯರ ಸಭಾಸದರುಗಳು. ಮೇಲೆ ಧ್ರುವನು ಪ್ರವಾಹನೆಂಬ ವಾಯುರಜ್ಜುವಿನಿಂ ಪಿಡಿದು ಆ ರಥಮಂ ನಡಸುತ್ತಿರ್ಪನೆಂಬುದೇ ಸೂರ್ಯಸಿದ್ಧಾಂತಮಕ್ಕುಂ. ೫೭೧

ಸಪರಿವಾರ ಚಂದ್ರಮಂಡಲ ಕಲಾದಿಗಳು:

ಬಳಿಕಾ ಸೂರ್ಯನಿಂ ಮೇಲೊಂದುಲಕ್ಷ ಯೋಜನಾಂತರದಲ್ಲಿ ಚರಲೋಕ ವಾಸಿಗಳಾದ ಕ್ರತು, ದಕ್ಷ, ಪಪುಶ್ನ, ಸತ್ಯಕಾಮ, ಕಾಲ, ಧ್ವನಿರುಚ, ಪುರೂರವ, ಆದ್ರ್ರವರೆಂಬ ವಿಶ್ವದೇವತೆಗಳೊಡನೆಯುಂ; ಅಗ್ನಿಷ್ವಂತ, ಮೊದಲಾದ ಪಿತೃದೇವತೆಗಳೊಡನೆಯುಂ ಕೂಡಿರ್ಪ ಚಂದ್ರನಾದೊಡೆ ಅಮೃತ, ಮಾನದ, ಪೂಷಾ, ತುಷ್ಟಿ, ಪುಷ್ಟಿ,ರತಿ, ಧೃತಿ, ಶಶಿನಿ, ಚಂದ್ರಿಕಾ,ಕಾಂತಿ, ಜ್ಯೋತ್ಸ್ನಾ, ಶ್ರೀ, ಅಂಗದಾ, ಪೂರ್ಣಾ, ಪೂರ್ಣಾಮೃತ, ಕಾಮದಾಯನಿಯೆಂಬ ಷೋಡಶ ಕಲಾಭರಿತನಾಗಿ, ಧವಲವರ್ಣಮಯ ಶರೀರದಿಂ, ಸಕಲೋಷಧೀಶ್ವರನಾಗಿ, ರಂಜಿ ಸುತ್ತಿರ್ಪನಾತನ ರಥಕ್ಕೆ ರಜತದ ಮೂರುಗಾಲಿ, ಮೂವತ್ತುಮೊಳೆ, ಹತ್ತು ಬಿಳಿಯ ಕುದುರೆ, ಸ್ಫಟಿಕ ರಜತಮಯವಾಗಿರ್ಪ ಆ ರಥಮಾದೊಡೆ, ಸೂರ್ಯನ ವಿಮಾನಕ್ಕೆ ದ್ವಿಗುಗುಣವಹುದಾ ಪುಷ್ಪಕಾರೂಢನಾದ ಚಂದ್ರನ ಕಿರಣಗಳ-ಮೃತಮಂ ಕೃಷ್ಣ ಪಕ್ಷದ ಪಾಡ್ಯಂ ಮೊದಲಮಾಸೆ ಪರ್ಯಂತಮಾಗಿ ಅಗ್ನಿ ಮುಖ್ಯ ಸಕಲ ದೇವತೆಗಳುಂ, ಪಿತೃಗಣಂಗಳುಂ ಪಾನಮಮಾಡೆ ಕ್ಷಯವಾದ ಕಲೆಗಳಂ ಸೂರ್ಯನು ತನ್ನ ಸುಷುಮ್ನೆಯೆಂಬ ಕಿರಣ ಸೂತ್ರದಿಂದಾ ಚಂದ್ರನಂ ಶುಕ್ಲ ಪಕ್ಷದ ಪಾಡ್ಯಂ ಮೊದಲು ಹುಣ್ಣಿಮೆ ಪರಿಯಂತರಂ ದಿನದಿನಕ್ಕೆ ವರ್ಧಿಸುತ್ತಿಹನು. ಮೇಲಾ ಚಂದ್ರನ ರಥಮಂ ಧ್ರುವನು ಸಂವಾಹನೆಂಬ ವಾಯು ರಜ್ಜುವಿಂ ಪಿಡಿದು ನಡಸುತ್ತಿಹನು. ೫೭೨

ನಕ್ಷತ್ರಮಂಡಲ:

ಬಳಿಕಾ ಚಂದ್ರನಿಂ ಮೇಲೊಂದು ಯೋಜನಾಂತರದಲ್ಲಿ ಮೊಲ್ಲೆಯ ಹೂವಿನೋಪಾದಿಯ ಬಿಳಿದಾದ, ಚಂದ್ರನೋಪಾದಿಯ ಶಾಂತಿಮಯವಾದ, ಪುಷ್ಪಕಾರೂಢಮಾಗಿರ್ಪ ನಕ್ಷತ್ರ ಮಂಡಲವಿಹುದು. ಆ ನಕ್ಷತ್ರ ಮಂಡಲಮಂ ಮೇಲೆ ಧ್ರುವನು ವಿವಹನೆಂಬ ವಾಯುಸೂತ್ರದಿಂ ಪಿಡಿದು ನಡಸುತ್ತಿಹನು. ೫೭೩

ಕುಜಾದಿ ಪಂಚಗ್ರಹಂಗಳು:

ಬಳಿಕಾ ನಕ್ಷತ್ರಮಂಡಲದಿಂ ಮೇಲೆರಡು ಲಕ್ಷಯೋಜನಾಂತರದಲ್ಲಿ ಪದ್ಮ-ರಾಗ ವರ್ಣದ ಮಂಗಳನಿಹನು. ಆತಂಗೆ ಪವಳದ ವಿಮಾನ, ಅದಕ್ಕೆ ಪವಳದ ಗಾಲಿ ನಾಲ್ಕು, ಎಂಟುಕುದುರೆಗಳಕ್ಕುಂ.

ಬಳಿಕಾ ಮಂಗಳನಿಂ ಮೇಲೆ ಎರಡುಲಕ್ಷಯೋಜನಾಂತರದಲ್ಲಿ ಕುಂಕುಮವರ್ಣದ ಬುಧನಿಹನು. ಆತಂಗೆ ರತ್ನದವಿಮಾನ. ಅದಕ್ಕೆ ಪಚ್ಚೆಯಗಾಲಿ ನಾಲ್ಕು, ಪಿಂಗಳವರ್ಣದ ಹತ್ತುಕುದುರೆಗಳಕ್ಕುಂ.

ಬಳಿಕಾ ಬುಧನಿಂ ಮೇಲೆ ಎರಡುಲಕ್ಷ ಯೋಜನಾಂತರದಲ್ಲಿ ತಪ್ತಕಾಂಚನ ವರ್ಣದ ಬೃಹಸ್ಪತಿಯಿಹನು. ಆತಂಗೆ ಸುವರ್ಣರಥ, ಅದಕ್ಕೆ ಮಾಣಿಕ್ಯದಗಾಲಿ ನಾಲ್ಕು. ಕುಂಕುಮವರ್ಣದ ಎಂಟುಕುದುರೆಗಳಕ್ಕುಂ.

ಬಳಿಕಾ ಬೃಹಸ್ಪತಿಯಿಂ ಮೇಲೆ ಎರಡುಲಕ್ಷಯೋಜನಾಂತರದಲ್ಲಿ ಕುಂದವರ್ಣದ ಶುಕ್ರನಿಹನು. ಆತಂಗೆ ರಜತವಿಮಾನ. ಅದಕ್ಕೆ ವೈಡೂರ್ಯದ ಗಾಲಿ ನಾಲ್ಕು. ಚಿತ್ರವರ್ಣದ ಹತ್ತುಕುದುರೆಗಳಕ್ಕುಂ.

ಬಳಿಕಾ ಶುಕ್ರನಿಂ ಮೇಲೆ ಎರಡುಲಕ್ಷಯೋಜನಾಂತರದಲ್ಲಿ ಭಿನ್ನಾಂಜನ ವರ್ಣದ ಕ್ರೋಧ ದೃಷ್ಟಿಯನುಳ್ಳ ಭಯಂಕರ ಮೂರ್ತಿಯಾದ ಶನೀಶ್ವರನಿಹನು ಆತಂಗೆ ಕಬ್ಬಿಣ್ಣ ವಿಮಾನ. ಅದಕ್ಕೆ ನೀಲದನಾಲ್ಕುಗಾಲಿ. ಕೃಷ್ಣವರ್ಣದ ಎಂಟು ಕುದುರೆಗಳಕ್ಕುಂ. ಬಳಿಕೀ ಮಂಗಳಾದಿ ಪಂಚಗ್ರಹಂಗಳಿಂ ಮೇಲೆ ಧ್ರುವನ್ರ ಪರಾಹವೆಂಬ ವಾಯುರಜ್ಜುವಿನಿಂಪಿಡಿದು ರುಜುಗತಿ ವಕ್ರಗತಿಗಳಾಗಿ ನಡಸುತ್ತಿರ್ಪಂ. ೫೭೪

## ರಾಹುಕೇತುಗಳು:

ಬಳಿಕಾ ಶನೀಶ್ವರ ಮಂಡಲದಲ್ಲಿಯೇ ಕ್ರಮದಿಂದಂಜನ ವರ್ಣದ, ಧೂಮ್ರ ವರ್ಣದ ರಾಹುಕೇತುಗಳಿಹವು. ಅವಕ್ಕೆ ಉಕ್ಕಿನರಥ. ಅದಕ್ಕೆ ವಜ್ರದಗಾಲಿಗಳೆಂಟು ಕುದುರೆಗಳೆಂಟು ಆ ರಾಹುಕೇತುಗಳೆರಡನು ಮೇಲೆ ಧ್ರುವನು ಪರಿವಹವೆಂಬ ವಾಯು ಸೂತ್ರದಿಂ ಪಿಡಿದು ನಡಸುತ್ತಿರ್ಪಂ. ೫೭೫

## ಗ್ರಹಮಂಡಲ ಪರಿಮಾಣ :

ಬಳಿಕ ದಿವ್ಯದೇಹಾನ್ವಿತರಾದ ಸಮಸ್ತಗ್ರಹಂಗಳೊಳಗೆ ಮೊದಲು ಪೇಳ್ವ ಸೂರ್ಯಮಂಡಲಕ್ಕಿಮ್ಮಡಿ ಚಂದ್ರಮಂಡಲ, ಅವರೀರ್ವರ ಸಮಾನವೇ ರಾಹು ಮಂಡಲ. ಆ ಚಂದ್ರಮನ ಷೋಡಶಾಂಶವೇ ಶುಕ್ರಮಂಡಲ. ಆ ಶುಕ್ರನ ನಾಲ್ಕುಭಾಗೆಯೊಳಗೊಂದು ಭಾಗೆ ಹೀನವಾದುದೆ ಬೃಹಸ್ಪತಿಯ ಮಂಡಲ. ಆ ಬೃಹಸ್ಪತಿಯ ನಾಲ್ಕಂಶದೊಳೊಂದಂಶ ಹೀನವಾದುದೇ ಶನಿಮಂಡಲ. ಅದರ ಸಮಾನವೇ ಮಂಗಳನ ಮಂಡಲ. ಅದರ ನಾಲ್ಕು ಭಾಗೆಯೊಳೊಂದು ಭಾಗೆ ಹೀನವಾದುದೇ ಬುಧನಮಂಡಲ. ಆ ಬುಧನಿಗೆ ಸಮಾನವಾದುಳಿದ ನಕ್ಷತ್ರಂಗಳೊಳಗೆ ನೂರುಯೋಜನ, ಎಂಭತ್ತುಯೋಜನ, ಐವತ್ತುಯೋಜನ ದಗಲದ ಮಂಡಲಂಗಳನುಳ್ಳವಲ್ಲದೆ, ಅದಕ್ಕೆ ಕಡಿಮೆಯಾದ ನಕ್ಷತ್ರಂಗಳಿಲ್ಲವೆಂದೇ ಕಾಣಲ್ವೇಳ್ಕುಂ. ೫೭೬

ಸೂರ್ಯ ಚಂದ್ರ ಗ್ರಹಣಂಗಳು:

ಬಳಿಕ ಆ ಗ್ರಹಂಗಳ ಮಧ್ಯದಲ್ಲಿ ಚಂದ್ರ ಸೂರ್ಯಗ್ರಹಣಂಗಳಹುದೆಂತೆನೆ: ಆವ ಸಂವತ್ಸರದಲಿ ಆವ ಮಾಸದಲಾದರೂ, ಹುಣ್ಣಿಮೆ ಅಮಾವಾಸೆಗಳಲ್ಲಿ ಮೇಷಾದಿ ಹನ್ನೆರಡು ರಾಶಿಗಳೊಳಗೆ ಚಂದ್ರ ಸೂರ್ಯರಿರ್ದ ರಾಶಿಗೆ ರಾಹುಬಂದು ಯೋಗಮಾದೊಡೆ ಆಯಾಯ ಗ್ರಹಣಂಗಳಪ್ಪವು, ಆ ರಾಶಿಗಳಲ್ಲಿ ವರ್ತಿಸುತ್ತಿರ್ದ ಅಶ್ವಿನಿ ಮೊದಲಾದ ನಕ್ಷತ್ರಂಗಳ ಒಂದುಪಾದ, ಎರಡುಪಾದ, ಮೂರುಪಾದ ನಾಲ್ಕುಪಾದಕ್ರಮದಿಂದೊಂದಂಶಗ್ರಹಣ, ಎರಡಂಶಗ್ರಹಣ, ಅಂಶತ್ರಯಗ್ರಹಣ, ಪೂರ್ಣಗ್ರಹಣವಹುದೆಂದು ನಿಶ್ಚಿತಮಕ್ಕುಂ. ೫೭೭

ಸಪ್ತರ್ಷಿ ಮಂಡಲ :

ಮತ್ತಮಾ ಶನೀಶ್ವರನಿಂ ಮೇಲೆ ಎರಡುಲಕ್ಷಯೋಜನಾಂತರದಲ್ಲಿ ಮರೀಚಿ ಅತ್ರಿ ಅಂಗೀರಸ ಪಲಸ್ತ್ಯ ಪುಲಹ ಕ್ರತು ವಶಿಷ್ಠರೆಂಬ ಸಪ್ತರ್ಷಿಮಂಡಲಮಿರ್ಕುಂ. ಬಳಿಕ್ಕಿಂತು ಪೇಳ್ದ ಭೂಲೋಕದಿಂ ಮೇಲೆ ಭುವರ್ಲೋಕದ ಸಪ್ತರ್ಷಿಮಂಡಲಪರ್ಯಂತರಂ ವಿಚಿತ್ರಮಾಗಿರ್ದ ಸ್ಥಾನಂಗಳೆಲ್ಲಂ ಮಾರುತಾಧಾರದ ಮೇಘಾಶ್ರಯಂಗಳು. ಬಳಿಕಾ ಸಪ್ತಋಷಿ ಮಂಡಲದಿಂ ಮುಂದೆ ಪೇಳ್ವ ರುದ್ರಲೋಕ ಪರ್ಯಂತಮಾಗಿ ತೋರುವ ಸ್ಥಾನಂಗಳೆಲ್ಲಂ ಪವನಾಧಾರದ ವಿಮಾನಂಗಳೆಂದೇ ವಿವರಿಸಲ್ವೇಳ್ಕುಂ ೫೭೮

ಭುವರ್ಲೋಕದ ಶಿಂಶುಮಾರ :

ಮತ್ತಮಾ ಸಪ್ತಋಷಿಮಂಡಲದಿಂ ಮೇಲೆ ಒಂದುಲಕ್ಷಯೋಜನಾಂತರದಲ್ಲಿ ಶಿಂಶುಮಾರಚಕ್ರವಿಹುದು.ಆ ಶಿಂಶುಮಾರನು ಮೊಸಳೆಯಾಕಾರದ ಧರ್ಮಸ್ವರೂಪನಪ್ಪುದರಿಂ ಮಹಾ ವೃಷಭೇಶ್ವರನೆನಿಸಿಕೊಂಬನು. ಅದರ ಶಿರವೇ ಈಶ್ವರನು, ಧರ್ಮವೇ ಮೂರ್ಧ್ನಿ, ಬ್ರಹ್ಮನೇ ಉತ್ತರಾಹನು, ಯಜ್ಞವೇ ಅಧರ, ವಿಷ್ಣುವೇ ಹೃದಯ, ಸಂವತ್ಸರವೇ ಗರ್ಭ, ಅಶ್ವಿನಿದೇವತೆಗಳೇ ಪೂರ್ವಪಾದದ್ವಯಂಗಳು. ಅತ್ರಿಯೇ ಮಧ್ಯ, ಮಿತ್ರವರುಣರೇ ಅಪರ ಪಾದದ್ವಯಂಗಳು. ಅಗ್ನಿಯೇ ಬಾಲದ ಮೊದಲು,ಇಂದ್ರನು ಆ ಬಾಲದ ಮಧ್ಯ,ಪ್ರಜಾಪತಿಯೇ ಆ ಬಾಲದಗ್ರ.ಅಭಯವ್ವಾ ಬಾಲದ ತುದಿಗಳಾಗಿರ್ಪವಾ ಬಾಲದ ಕೊನೆಯಲ್ಲಿ ಸ್ತಂಭಕತ್ವದ ಸೂತ್ರಮಂ ವಿಶ್ವಕರ್ಮಂ ನಿರ್ಮಿಸಲು ಆ ಧ್ರುವನಲ್ಲಿರ್ದು ಮೊದಲು ಪೇಳ್ದ ವಾಯುಸೂತ್ರಂಗಳಂ ಪಿಡಿದಾ ಗ್ರಹತಾರೆಗಳಂ ನಡೆಸುತ್ತಿಪ್ಪಂ. ೫೭೯

ಸ್ವರ್ಲೋಕದ ದೇವೇಂದ್ರನು :

ಮತ್ತಮಾ ಪ್ರಕಾರದ ಭುವರ್ಲೋಕದಿಂ ಮೇಲೆ ಎಂಭತ್ತೈದುಲಕ್ಷ ಯೋಜನಾಂತರದಲ್ಲಿ ಸ್ವರ್ಲೋಕವಿಹುದದಕ್ಕೆ ಕರ್ತೃವು ಆ ಇಂದ್ರನಾದೊಡೆ, ಹಿರಣ್ಮಯ ಶರೀರದಿಂ ಏಕಮುಖ ಚತುರ್ಭುಜ ಸಹಸ್ರಲೋಚನಂಗಳಿಂ ವಸ್ತ್ರಾ

ಭರಣಗಂಧಮಾಲ್ಯಾದಿಗಳಿಂದಲಂಕೃತನಾಗಿ, ದಧೀಚಿಋಷೀಶ್ವರನ ಬೆನ್ನ ನೆಟ್ಟೆಲುವೆನಿಪ, ವಜ್ರಾಯುಧವಿಡಿದು ಶಚೀದೇವಿ ಸಹಿತನಾಗಿ ಸಕಲೈಶ್ವರ್ಯ ಸಂಪನ್ನನೆನಿಸಿ ಸಮಸ್ತ ಮನು ಮುನಿ ದೇವತೆಗಳಿಂದೋಲೈಸಿಕೊಳುತ್ತಿರ್ಪಂ, ೫೮೦

## ದೇವತಾ ಭೇದಗಳು :

ಮತ್ತಮಾ ದೇವತೆಗಳಾದೊಡೆ ಆಜಾನ ದೇವತೆಗಳೆಂದುಂ, ಕರ್ಮ ದೇವತೆಗೆಳೆಂದು ಎರಡುತೆರನಲ್ಲಿ ಸೃಷ್ಟಿಪ್ರಾರಂಭದೊಳಾ ಪದವನೆಯ್ದಿದವರುಗಳೇ ಆಜಾನ ದೇವತೆಗಳು. ಮನುಷ್ಯರಾಗಿಜನಿಸಿ ಬಳಿಕಶ್ವಮೇಧಾದಿಯಜ್ಞ ಇಷ್ಟಾರ್ಥಪೂರಿತಾದಿ ಕರ್ಮಗಳಿಂದಾ ಪದಂಬಡೆದವರುಗಳೆ ಕರ್ಮದೇವತೆಗಳು. ಇಂದ್ರಾಗ್ನಿ ಯಮ ಬೃಹಸ್ಪತಿ ಮೊದಲಾದವರುಗಳೆ ಆಜಾನರೆಂದರಿಯಲ್ವೇಳ್ಕುಂ. ೫೮೧

## ದೇವತೆಗಳ ಸ್ವರೂಪ :

ಮತ್ತಮಾ ಸಕಲ ದೇವತೆಗಳಮೃತಮಯ ಶರೀರದಿಂ, ಕಂದರ್ಪ ಸಮಾನ ಲಾವಣ್ಯದಿಂದನಿಮಿಷ ಲೋಚನದಿಂ, ಮಹದೈಶ್ವರ್ಯದಿಂ, ಸುರಸ್ತ್ರೀಯರ ಸಂಭೋಗದಿಂ ಮಹಾಸುಖದಿಂಇರ್ಪರವರುಂಡ ಸುಧೆಮೊದಲಾದ ಆಹಾರವೇ ಮದನಾಂಬುವಾಗಿಯೇ ಪೋಪುದಲ್ಲದೆ ಮಲಮೂತ್ರವಾಗಿ ಪರಿಣಮಿಸಲಿಲ್ಲೆಂದು ತಿಳಿಯಲ್ವೇಳ್ಕುಂ. ೫೮೨

## ಮಹರ್ಲೋಕದ ಮಾರ್ಕಂಡೇಯ ಋಷಿ :

ಮತ್ತಮಾ ಸ್ವರ್ಲೋಕದಿಂ ಮೇಲೆ ಎರಡುಕೋಟಿ ಯೋಜನಾಂತರದಲ್ಲಿ ಮಹರ್ಲೋಕಮಿಪ್ಪುದು ಅದಕ್ಕೆ ಮೃಕಂಡುವಿನಾತ್ಮಜನಾದ ಮಾರ್ಕಂಡೇಯ ಮುನೀಶ್ವರನಧಿಪತಿಯಾಗಿ ಮರೀಚಿಮುಂತಾದ ಮುನಿಗಳೊಡಗೂಡಿ ಪರಮೇಶ್ವರಾರಾಧನೆಯ ಬಲದಿಂ ನಿತ್ಯತ್ವಮಂ ಪಡೆದು ಸುಖ ಸ್ವರೂಪನಾಗಿರ್ಪಂ, ೫೮೩

## ಜನಲೋಕ (ಪಿತೃಲೋಕ)

ಮತ್ತಮಾ ಮಹರ್ಲೋಕದಿಂ ಮೇಲೆ ಎಂಟುಕೋಟಿ ಯೋಜನಾಂತರದಲ್ಲಿ ಜನಲೋಕಮಿಹುದು. ಅದಕ್ಕೆ ವಶಿಷ್ಠಾದಿ ಋಷೀಶ್ವರರಧಿಪತಿಗಳಾಗಿ ಪಿತೃಲೋಕವೆನಿಸಿ ಪಿತೃ ಜಹ್ನು ಜನಂಗಳೊಡಗೂಡಿ ತಪೋರಾಜ್ಯಂಗೆಯ್ವುತ್ತಿರ್ಪರಲ್ಲಿಯೆ ಋಷಿಗಳ ಪಿತೃ ಪಿತಾಮಹರೆ ಭೂಲೋಕದ ಬ್ರಾಹ್ಮಣರ ಗೋತ್ರವಪ್ಪುದರಿಂದವೆ ಪಿತೃಲೋಕವೆನಿಸಿಕೊಳುತ್ತಿರ್ಕುಂ. ೫೮೪

## ತಪೋಲೋಕ :

ಮತ್ತಮಾ ಜನಲೋಕದಿಂ ಮೇಲೆ ಹನ್ನೆರಡು ಕೋಟಿ ಯೋಜನಾಂತರದಲ್ಲಿ ತಪೋಲೋಕವಿಹುದು. ಅದಕ್ಕೆ ಬ್ರಹ್ಮನ ಮಾನಸ ಪುತ್ರರಾದ ಸನಕ ಸನಂದ ಸನಾತನ ಸನತ್ಸುಜಾತ, ಸನತ್ಕುಮಾರರೆಂಬೈವರು ರಾಜರ್ಷೀಶ್ವರರಧಿಪತಿಗಳಾಗಿ [illegible]

## ಸತ್ಯಲೋಕ ಚತುರ್ಮುಖ ಬ್ರಹ್ಮನು :

ಮತ್ತಮಲ್ಲಿಂದಂ ಮೇಲೆ ಹದಿನಾರುಕೋಟಿ ಯೋಜನಾಂತರದಲ್ಲಿ ಸತ್ಯಲೋಕ ವಿಹುದು. ಅದಕ್ಕೆ ರಜೋಗುಣದಿಂ ಜಗದುತ್ಪತ್ತಿ ಕರ್ತೃವಪ್ಪ ಪಿತಾಮಹನೆ ಕರ್ತೃವು. ಆತನಾದೊಡೆ ಸುವರ್ಣಕಾಂತಿಮಯ ಶರೀರದಿಂ ಚತುರ್ಮುಖ ಲೋಚನಾಷ್ಟಕ,ಯಜ್ಞ ಸೂತ್ರಂಗಳಿಂ;ಅಕ್ಷಮಾಲೆ,ಪಾಶ,ದಂಡ,ಕಮಂಡಲಂಗಳುಳ್ಳ ವಾಮ ದಕ್ಷಿಣಕರಚತುಷ್ಟಯದಿಂ; ದಿವ್ಯವಸ್ತ್ರಾಭರಣಗಂಧ ಪುಷ್ಪಾದಿಗಳಿಂದ ಲಂಕೃತನಾಗಿ, ಸರಸ್ವತಿ ಸಹಿತನಾಗಿ, ಮೂರ್ತಿವೆತ್ತ ವೇದಪುರುಷರಿಂ; ಮರೀಚ್ಯಾದಿ ನವಬ್ರಹ್ಮರಿಂ; ಸಕಲ ಮುನಿಜನಗಳಿಂ; ವಾಸವಾದಿ ಸುರಸಂತತಿಗಳಿಂದೋಲೈಸಿ ಕೊಳುತ್ತಿರ್ಪಂ. ೫೮೭

## ಅರುವತ್ತು ನಾಲ್ಕು ಸಿದ್ಧಿಗಳಲ್ಲಿ ಪಾರ್ಥಿವ ಸಿದ್ಧಿಗಳೆಂಟು :

ಮತ್ತಮಾ ಬ್ರಹ್ಮಂಗೆ ಆರುವತ್ತುನಾಲ್ಕು ಸಿದ್ಧಿಗಳುಂಟು. ಅವಂ ಪೇಳ್ವನೆವದಿಂ ಪಿಶಾಚಾದಿ ದೇವತಾಂತರಂಗಳ ಪದವಿಗಳ ತಾರತಮ್ಯಮಂ ತೋರ್ಪೆನದೆಂತೆಂದೊಡೆ: ಸ್ಥೂಲನಾಗುಹ,ಸೂಕ್ಷ್ಮನಾಗುಹ,ಬಾಲನಾಗುಹ, ಯುವ್ವನನಾಗುಹ, ವೃದ್ಧನಾಗುಹ, ನಾನಾಜಾತಿರೂಪನೆಯುದ್ಧಹ, ಪೃಥ್ವೀ ಹೊರತಾಗಿ ಮಿಕ್ಕ ಭೂತಚತುಷ್ಟಯದಿಂದಲೆ ದೇಹಮಂ ಧರಿಸುವ, ನಿತ್ಯ ಸುಗಂಧಮಂ ಸೇವಿಸುವಹವೆಂಟು ಪಾರ್ಥಿವಸಿದ್ಧಿ ಗಳಿವೇ ಪಿಶಾಚರ ಗುಣಂಗಳಕ್ಕುಂ. ೫೮೮

## ಅಪ್‌ತತ್ವ ಸಿದ್ಧಿಗಳೆಂಟು :

ಬಳಿಕ ಜಲನಿರಸನಮಂ ಮಾಡುಹ, ಭೂಸದೃಶ ಜಲಗಮನಮಂ ಮಾಡುಹ, ಅನಾತುರ ಸಮುದ್ರಪಾನಮಂ ಮಾಡುಹ, ನಿರ್ಜಲ ಸ್ಥಾನದಲ್ಲಿ ಜಲದರ್ಶನಮಂ ಮಾಡುಹ, ಶಿಲಾದಿ ತಾಡನದಿಂ ವ್ರಣವಿಲ್ಲದಿರುಹ. ಕರಪುಟದಲ್ಲಿ ಸಮುದ್ರಮಂ ಧರಿಸುವ, ನೀರಸವಸ್ತುವಂ ಸುರಸಂ ಮಾಡುಹ, ಅಪ್ಪುಹೊರತಾಗಿ ಮೇಲಣ ಮೂರು ಭೂತಂಗಳಿಂದವೆ ದೇಹಮಂ ಧರಿಸುಹವೆಂಬವೆಂಟು ಅಪ್ಪು ಸಿದ್ಧಿಗಳಿವ ರೊಡನೆ ಪೂರ್ವೋಕ್ತ ಗುಣಂಗಳೆಂಟೂಕೂಡಿ ಹದಿನಾರು ರಾಕ್ಷಸರ ಗುಣಂಗಳಕ್ಕುಂ ೫೮೮

## ತೈಜಸ ಸಿದ್ಧಿಗಳೆಂಟು :

ಬಳಿಕ ಶರೀರದಲ್ಲಿ ಅಗ್ನಿನಿರ್ಮಾಣ, ಅಗ್ನಿಭಯ ವರ್ಜನ, ಜಲದಲ್ಲಿ ಅಗ್ನಿ ಸ್ಥಾಪನ, ಪಾಣಿಯಲ್ಲಿ ಪಾವಕಧಾರಣ,ಅಸ್ನಾತಿಪಚನ, ಅಪ್ರಯತ್ನಜಗದ್ದಹನ, ಅಗ್ನಿ ಹೊರತಾಗಿ ಮೇಲಣ ಭೂತದ್ವಯದಿಂದವೆ ದೇಹಧಾರಣವೆಂಬೇಳುಂ, ಬೇರೆ ಅತಿ ಸೂಕ್ಷ್ಮವಾಗಿ ಮರೆಯಾಗಿರ್ದ ಅತೀತ ಅನಾಗತವಸ್ತು ವಿಸರಮಂ ಯಥಾರ್ಥ ಮಾಗರಿವ ತನವೆ ಪ್ರತಿಭೇದ, ಪ್ರಯತ್ನವಿಲ್ಲದೆ ದೂರ ಶಬ್ದಗ್ರಹಣವೇ ಶ್ರವಣ,

ಸಕಲ ಜನ ವೃತ್ತಾಂತ ವಿಷಯ ಜ್ಞಾನವೇ ವಾರ್ತೆ, ಪ್ರಯತ್ನವಿಲ್ಲದೆ ದಿವ್ಯದರ್ಶನವೇ ದರ್ಶನ, ದಿವ್ಯರಸಾಸ್ವಾದನವೇ ಆಸ್ವಾದನ,ಸಕಲಲೋಕದಲ್ಲಿಯ ದಿವ್ಯ ಗಂಧಾದಿಗಳ ನರಿವುದೇ ವೇದನೆಯೆಂಬಿವೇ ಷಡೂಪಸರ್ಗಂಗಳೆನಿಸಿಕೊಂಬುವನುಳ್ಳುದೊಂದು ಇವೆಂಟು ತೈಜಸಸಿದ್ಧಿಗಳಿವರೊಡನೆ ಮೊದಲ ಹದಿನಾರುಗುಣಂಗೂಡಿ ಇಪ್ಪತ್ತ ನಾಲ್ಕು ಯಕ್ಷರಗುಣಂಗಳಕ್ಕುಂ. ೫೮೯

ವಾಯು ಸಿದ್ಧಿಗಳೆಂಟು :

ಬಳಿಕ ಮನೋಜವತ್ವ, ಭೂತಾಂತಃಪ್ರವೇಶನ, ಪರ್ವತಾದಿ ಭಾರಭರಣ, ಗುರುತ್ವ, ಲಘುತ್ವ, ಹಸ್ತಾನಿಲಧಾರಣ, ಅಗ್ರಾಂಗುಲೀ ಭೂಕಂಪನ, ವಾಯುಹೊರ ತಾಗಿ ಗಗನಮಾತ್ರದಿಂ ದೇಹಧಾರಣವೆಂಬವೆಂಟೂ ಮಾರುತಸಿದ್ಧಿಗಳಿವರೊಡನೆ ಮೊದಲ ಇಪ್ಪತ್ತನಾಲ್ಕು ಗುಣಂಗೂಡಿ ಮೂವತ್ತೆರಡು ಗಂಧರ್ವರ ಗುಣಂಗಳಕ್ಕುಂ ೫೯೦

ಅಂಬರ ಸಿದ್ಧಿಗಳೆಂಟು :

ಬಳಿಕ ಛಾಯಾ ವಿಹೀನತೆ, ಇಂದ್ರಿಯಾದೃಶ್ಯತೆ, ಖೇಚರತೆ, ಯಥೇಷ್ಟ ವಿಷಯ ಸಂಗತೆ, ಶೈಲಲಂಘನ, ಶೈಲಗರ್ಭೀಕರಣ, ಆಕಾಶ ಪಿಂಡೀಕರಣ, ಅಶರೀರತ್ವವೆಂಬವೆಂಟೂ ಅಂಬರ ಸಿದ್ಧಿಗಳಿವರೊಡನೆ ಮೊದಲ ಮೂವತ್ತೆರಡು ಗೂಡಿ ನಾಲ್ವತ್ತು ಇಂದ್ರನ ಗುಣಂಗಳಕ್ಕುಂ. ೫೯೧

ಮಾನಸ ಸಿದ್ಧಿಗಳೆಂಟು :

ಬಳಿಕ ಯಥಾಕಾಮೋಪಲಬ್ಧಿ,ಯಥಾಕಾಮ ವಿನಿರ್ಗಮನ, ಸರ್ವ ತಿರಸ್ಕರಣ, ಸಕಲಗುಹ್ಯಾರ್ಥ ದರ್ಶನ. ಕರ್ಮಾನುಗುಣ ನಿರ್ಮಾಣ, ವಶಿತ್ವ, ಪ್ರಿಯದರ್ಶನ, ಸಂಸಾರದರ್ಶನವೆಂಬವೆಂಟು ಮಾನಸ ಸಿದ್ಧಿಗಳಿವರೊಡನೆ ಮೊದಲ ನಾಲ್ವತ್ತು ಗುಣಂಗಳುಂ ಕೂಡಿ, ನಾಲ್ವತ್ತೆಂಟು ಸೌಮ್ಯನ ಗುಣಂಗಳಕ್ಕುಂ. ೫೯೨

ಅಹಂಕಾರ ಸಿದ್ಧಿಗಳೆಂಟು :

ಬಳಿಕ ಛೇದನ, ತಾಡನ, ಬಂಧನ, ಮೋಚನ, ಗ್ರಹಣ, ಸಂಸಾರಪರಿವರ್ತನ, ಪ್ರಸಾದ,ಮೃತ್ಯುಕಾಲಜಯವೆಂಬವೆಂಟು ಅಹಂಕಾರ ಸಿದ್ಧಿಗಳಿವರೊಡನೆ ಮೊದಲ ನಾಲ್ವತ್ತೆಂಟು ಗುಣಂಗೂಡಿಛ್ಪಪತ್ತಾರು ಪ್ರಜಾಪತಿಯ ಗುಣಂಗಳಕ್ಕುಂ. ೫೯೩

ಬುದ್ಧಿಸಿದ್ಧಿಗಳೆಂಟು :

ಬಳಿಕ ಜಗಜ್ಜನನ, ಜಗದ್ರಕ್ಷಣ, ಜಗತ್ಸಂಹರಣ,ಇಷ್ಟಾಧಿಕರಣ, ಅಭಿಮತ-ಲೋಕ ಪ್ರವರ್ತನ, ಅಸದೃಶನಿರ್ಮಾಣ, ಅಶುಭಕರಣ, ಶುಭಕರಣವೆಂಬವೆಂಟು ಬುದ್ಧಿಸಿದ್ಧಿಗಳಿವರೊಡನೆ ಮೊದಲೈವತ್ತಾರು ಗುಣಂಗೂಡಿದರುವತ್ತನಾಲ್ಕು ಗುಣಂಗಳಿಂ ಸಂಪನ್ನನಾಗಿ ಸತ್ಯಲೋಕದಲ್ಲಿ ಬ್ರಹ್ಮನಿಪ್ಪಂ. ೫೯೪

ಚತುರ್ಮುಖ ಸಿದ್ಧಿಗಳ ಪರ್ಯವಸಾನ :

ಇಂತು ಪೃಥ್ವಿ ಮೊದಲು ಬುದ್ಧಿ ಕಡೆಯಾದೆಂಟುತತ್ವ ಜಯದಿಂದಾದ ಸಿದ್ಧಿಗಳನುಳ್ಳ ಪಿಶಾಚಾದಿ ಬ್ರಹ್ಮಾಂತಮಾದ ದೇವತೆಗಳ ಪದವೀ ಪ್ರಕಾರಮಾಗೆ, ಮುಂದೆ ಪ್ರಕೃತಿ ತತ್ವಾದಿಗಳ ಜಯದಿಂದಾದ ಸಿದ್ಧಿಗಳನುಳ್ಳ ವಿಷ್ಣ್ವಾದಿಗಳ ಮಹಾ ಪದಂಗಳ ನೆಣಿಸಲಳವಲ್ಲೆಂದು ತಿಳಿಯಲ್ವೇಳ್ಕುಂ. ೫೯೫

ನವಬ್ರಹ್ಮರುಗಳ ಉತ್ಪತ್ತಿ :

ಮತ್ತಮಾ ಬ್ರಹ್ಮನಿಂದಖಿಳ ದೇವದಾನವಾದಿಗಳುತ್ಪತ್ತಿ ಕ್ರಮವಾವುದೆಂದೊಡೆ ಪ್ರಥಮ ಸೃಷ್ಟಿಯೊಳಾ ಬ್ರಹ್ಮನ ನೇತ್ರದಲ್ಲಿ ಮರೀಚಿ ಪುಟ್ಟಿದನು. ಹೃದಯದಲ್ಲಿ ಭೃಗು ಪುಟ್ಟಿದನು. ಶಿರದಲ್ಲಿ ಅಂಗೀರಸ ಪುಟ್ಟಿದನು. ಉದಾನವಾಯುವಿನಲ್ಲಿ ಪುಲಸ್ತ್ಯಂ ಪುಟ್ಟಿದನು. ವ್ಯಾನವಾಯುವಿನಲ್ಲಿ ಪುಲಹ ಪುಟ್ಟಿದನು. ಅಪಾನ ವಾಯುವಿನಲ್ಲಿ ಕ್ರತು ಪುಟ್ಟಿದನು. ಪ್ರಾಣವಾಯುವಿನಲ್ಲಿ ದಕ್ಷಂ ಪುಟ್ಟಿದನು. ಶ್ರೋತ್ರ ದಲ್ಲಿ ಅತ್ರಿ ಪುಟ್ಟಿದನು. ಸಮಾನವಾಯುವಿನಲ್ಲಿ ವಶಿಷ್ಠ ಪುಟ್ಟಿದನು. ಸಂಕಲ್ಪದಲ್ಲಿ ಧರ್ಮದೇವತೆ ಪುಟ್ಟಿತ್ತು. ಬಳಿಕೀ ಮರೀಚ್ಯಾದಿ ವಶಿಷ್ಠಾಂತಮಾದವರುಗಳೇ ನವ ಬ್ರಹ್ಮರುಗಳೆನಿಸಿಕೊಳುತ್ತಿರ್ಕುಂ. ೫೯೬

ಮರೀಚಿ ಬ್ರಹ್ಮನಿಂ ಕಶ್ಯಪ ಸಂತತಿ :

ಮತ್ತಮಾ ಮರೀಚಿಗೆ ಕಶ್ಯಪ ಬ್ರಹ್ಮನಾದನಾತಂಗೆ ದಕ್ಷಬ್ರಹ್ಮನ ಪುತ್ರಿಯರಾದ ದಿತಿ, ಅದಿತಿ, ಧನು, ಕಾಲೆ, ಅನಾಯು, ಸಂಹಿತೆ, ಮುನಿ, ಪ್ರವಾಹೆ, ಅರಿಷ್ಟೆ ವಿನತೆ, ಕಪಿಲೆ, ಕದ್ರುವೆ, ಕ್ರೋಧೆಯರೆಂಬ ತ್ರಯೋದಶ ಸ್ತ್ರೀಯರುಗಳವರೊಳಗೆ. ೫೬೭

ಅದಿತೇಯರಾದ ದೇವರ್ಕಳ ಸಂತತಿ :

ಅದಿತಿಗೆ ಧಾತೃ ಮೊದಲಾದ ವಿಷ್ಣು ಕಡೆಯಾದ ದ್ವಾದಶಾದಿತ್ಯರುಂ, ಇಂದ್ರಾದಿ ಮೂವತ್ತುಮೂರು ಕೋಟಿ ದೇವತೆಗಳುಂ ಪುಟ್ಟಿದರು. ಮತ್ತಮಾ ಸೂರ್ಯನಾರಾಯಣಂಗೆ ವೈವಸ್ವತಮನು ಜನಿಸಿದನು. ಅವನಿಗೆ ಇಕ್ಷ್ವಾಕುವೇ ಮೊದಲಾದ ಸಂತಾನ ಪರಂಪರೆಯಿಂ ರಾಮ, ಲಕ್ಷ್ಮಣ, ಭರತ, ಕೃಷ್ಣರು ಕಡೆಯಾದ ಸಮಸ್ತ ಕ್ಷತ್ರಿಯ ರಾಜವರ್ಗಂ ಜನಿಸಿತ್ತು. ಮತ್ತಮಾ ವೈವಸ್ವತ ಮನುವಿನ ಪುತ್ರಿಯಾದ ಇಳೆಯೆಂಬಾಕೆಗೆ ಚಂದ್ರನಸುತನಾದ ಬುಧಂಗೆಯು ಪುರೂರವಂ ಜನಿಸಿದನಾತಂಗೆ ಆಯುವೆಂಬಾತ ಮೊದಲಾಗಿ ಪಾಂಡವರಲ್ಲಿ ಜನಿಸಿದ ಜನಮೇಜಯನೇ ಕಡೆಯಾದ ಸಕಲ ಕ್ಷತ್ರಿಯಜಾತಿ ಜನಿಸಿತ್ತೆಂದರಿವುದು. ೫೯೮

ದೈತ್ಯ ಸಂತತಿ :

ಬಳಿಕ್ಕೆರಡನೆಯ ದಿತಿಗೈವತ್ತಾರು ಕೋಟಿ ರಾಕ್ಷಸರು ಜನಿಸಿದರವರೊಳಗೆ ಹಿರಣ್ಯಕಶಿಪುವಿಂಗೆ ಪ್ರಹ್ಲಾದ, ಸಹ್ಲಾದ, ಅನುಹ್ಲಾದ, ಶಿಬಿ, ಭಾಷ್ಕಳರೆಂಬೈವರು

ಪುತ್ರರಾದರವರೊಳಗೆ ಪ್ರಹ್ಲಾದಂಗೆ ವಿರೋಚನ, ಕುಂಭ,ನಿಕುಂಭರೆಂಬ ಮೂವರು ಮಕ್ಕಳುಗಳವರಲ್ಲಿ ವಿರೋಚನಂಗೆ ಬಲೀಂದ್ರನಾದನು. ಆತಂಗೆ ಬಾಣಾಸುರಂ ಮೊದಲಾದ ಶತಕುಮಾರಕರಾದರೆಂಬುದೇ ಸಿದ್ಧಮಕ್ಕುಂ. ೫೯೯

### ದನು ಕಾಲೆಯರಿಂ ರಾಕ್ಷಸ ಸಂತತಿ :

ಬಳಿಕ ಮೂರನೆಯ ದನುವೆಂಬಾಕೆಗೆ ನಾಲ್ವತ್ತು ಕ್ರೂರದಾನವರ್ಪುಟ್ಟಿದರು ನಾಲ್ಕನೆಯ ಕಾಲೆಯೆಂಬಾಕೆಗೆ ನಿವಾತ ಕವಚಾಸುರರು ಪುಟ್ಟಿದರು. ೬೦೦

### ಅಸುರ ಸಂತತಿ :

ಬಳಿಕ್ಕೈದನೆಯ ಆಯುವೆಂಬಾಕೆಗೆ ವೃತ್ರಾಸುರಂ ಮೊದಲಾದ ನಾಲ್ವತ್ತು ಮಕ್ಕಳು ಜನಿಸಿದರು. ಆರನೆಯ ಸಂಹಿಕೆಯೆಂಬಾಕೆಗೆ ರಾಹು ಮೊದಲಾದ ನಾಲ್ವರು ಮಕ್ಕಳು ಪುಟ್ಟಿದರು. ೬೦೧

### ರತ್ನ ಗಂಧರ್ವಾಪ್ಸರೋ ಗಣಾದಿಗಳ ಉತ್ಪತ್ತಿ :

ಬಳಿಕೇಳನೆಯ ಮುನಿಯೆಂಬಾಕೆಗೆ ನವರತ್ನಗಳುಂ, ದೇವ ಗಂಧರ್ವರುಂ ಪುಟ್ಟಿದರು. ಎಂಟನೆಯ ಪ್ರವಾಹಿಗೆ ಚಿಂತಾಮಣಿ, ಪರುಷ, ಸಕಲ ಲೋಹಂಗಳು, ಏಳು ಹೆಣ್ಣು ಮಕ್ಕಳು, ಹತ್ತು ಗಂಡು ಮಕ್ಕಳುಂ ಪುಟ್ಟಿದರು.
ಬಳಿಕ್ಕೊಂಭತ್ತನೆಯ ಅರಿಷ್ಟೆಗೆ ಹತ್ತು ಅಪ್ಸರಸ್ತ್ರೀಯರುಂ, ತುಂಬುರರು ಮೊದಲಾದ ನಾಲ್ವರು ಗಂಡುಮಕ್ಕಳು ಪುಟ್ಟಿದರು. ೬೦೨

### ವಿನತೆಯಿಂ ಪಕ್ಷಿ ಸಂತತಿ :

ಬಳಿಕ ಹತ್ತನೆಯ ವಿನತೆಗೆ ಗರುಡ, ಅರುಣ, ವಜ್ರ, ಸಿಡಿಲು, ವರುಣಾದಿ ಜಲದೇವತೆಗಳುಂ ಪುಟ್ಟಿದರವರಲ್ಲಿ ಸಿಡಿಲು ಗರುಡನೊಡನೆ ಪುಟ್ಟಿದುದರಿಂ ಸರ್ಪ ವೈರಿಯಾಯಿತ್ತು. ಜಲದೇವತೆಗಳೊಡಹುಟ್ಟಿದ ಕಾರಣದಿಂ ಮಳೆಗಳಾಗುವಲ್ಲಿ ಬಂದು ಗರ್ಜಿಸಿ ವ್ಯವಹರಿಸುತ್ತಿರ್ಕ್ಕುಂ. ೬೦೩

### ಕಪಿಲೆಯಿಂ ಅಮೃತ ಗೋ ಬ್ರಾಹ್ಮಣ ಸಂತತಿ :

ಬಳಿಕ ಹನ್ನೊಂದನೆಯ ಕಪಿಲೆಯೆಂಬಾಕೆಗೆ ಅಮೃತಮುಂ, ಗೋವುಗಳುಂ. ಬ್ರಾಹ್ಮಣರುಂ ಪುಟ್ಟಿದರು. ೬೦೪

### ಕದ್ರುವಿನಿಂ ಹಾವುಗಳ ಸಂತತಿ :

ಬಳಿಕ ಹನ್ನೆರಡನೆಯ ಕದ್ರುವೆಂಬಾಕೆಗೆ ಅನಂತ, ತಕ್ಷಕ, ವಾಸುಕಿ ಮೊದಲಾದ ಸಾವಿರ ಮಹಾನಾಗರ್ಗಳು ಪುಟ್ಟಿದರು. ೬೦೫

### ಮೃಗ, ಪಶು, ಪರ್ವತಾದಿಗಳ ಉತ್ಪತ್ತಿ :

ಬಳಿಕ ಹದಿಮೂರನೆಯ ಕ್ರೋಧೆಗೆ ಸಮಸ್ತ ಪರ್ವತಂಗಳುಂ, ಲೋಕಬಾಧಕರಾದ ಕೆಲರು ಕ್ರೂರಾತ್ಮರುಂ, ದ್ವಾದಶ ಪುತ್ರಿಯರುಂ ಪುಟ್ಟಿದರವರೊಳಗೆ, ಭದ್ರಾಮುದ್ರೆಯೆಂಬವಳಲ್ಲಿ ಐರಾವತಂ ಜನಿಸಿತ್ತು. ಸಿತೆಯೆಂಬವಳಲ್ಲಿ ಉಳಿದ

ದಿಗ್ಗಜಂಗಳುದಿಸಿದವು. ಮಾತಂಗೆಯಲ್ಲಿ ಮಿಕ್ಕ ಗಜಂಗಳುದಿಸಿದವು. ಗಾಂಧರ್ವೆಯಲ್ಲಿ ಕುದುರೆಗಳುದಿಸಿದವು. ಶಾರ್ದೂಲೆಯಲ್ಲಿ ಸಿಂಹಗಳಾದವು. ಹರಿಯೆಂಬಾಕೆಯಲ್ಲಿ ವಾನರಂಗಳೊಗೆದವು. ಮೃಗೆಯಲ್ಲಿ ಮೃಗಂಗಳುದ್ಭವಿಸಿದವು. ಮೃಗಮದೆಯಲ್ಲಿ ಕರಡಿಗಳುಂ, ಚಮರೀ ಮೃಗಂಗಳುಂಟಾದವು. ಸುರಸೆಯಲ್ಲಿ ಸರ್ಪಜಾತಿ ಜನಿಸಿತು. ನಲಿಯೆಂಬವಳಲ್ಲಿ ಪುಷ್ಪವಿಲ್ಲದೆ ಫಲಿಸುವ ಅಶ್ವತ್ಥಾದಿ ಮರಂಗಳುತ್ಪತ್ತಿಯಾದವು. ಕುಹೆಯೆಂಬಾಕೆಯಲ್ಲಿ ಪುಷ್ಪ ಫಲಂಗಳುಳ್ಳ ಮರಂಗಳು ಪುಟ್ಟಿದವು. ವಿರೋಧೆಯಲ್ಲಿ ಲತೆ ಗುಲ್ಮ ನಾನಾತೃಣಾದಿಗಳುದಯವಾದವಿಂತಿವೆಲ್ಲಂ ಮರೀಚಿಯಸಂತಾನ ಮಕ್ಕಳುಂ. ೬೦೭

ಭೃಗು ಬ್ರಹ್ಮ ಸೃಷ್ಟಿ :

ಅನಂತರದೊಳಾ ಭೃಗುವಿಂಗೆ ಕವಿಯೆಂಬ ಮಗನಾದನಾತಂಗೆ ಶುಕ್ರನುದ್ಭವಿಸಿ ದೈತ್ಯರ್ಗೆ ಗುರುವಾಗಿರ್ಪಂ. ೬೦೭

ಆಂಗಿರೋ ಬ್ರಹ್ಮ ಸೃಷ್ಟಿ :

ಅನಂತರದೊಳಾ ಆಂಗೀರಸನಿಗೆ ಬೃಹಸ್ಪತಿ ಜನಿಸಿ ಸುರರಿಗಾಚಾರ್ಯನಾಗಿರ್ಪಂ. ೬೦೮

ಪುಲಸ್ತ್ಯಬ್ರಹ್ಮನ ಸಂತತಿ :

ಅನಂತರದೊಳಾ ಪುಲಸ್ತ್ಯಂಗೆ ವಿಶ್ರಾವಸು ಪುಟ್ಟಿದನಾತಂಗೆ ಕುಬೇರನುಂ, ಕಿನ್ನರರುಂ ಜನಿಸಿದರು. ಮತ್ತಮಾ ವಿಶ್ರಾವಸುವಿಂಗೆ ರಾಕ್ಷಸ ಪುತ್ರಿಯಾದ ಕೈಕಸೆ. ಪುಷ್ಪೋತ್ಕಟೆಯೆಂಬೀರ್ವರು ಸ್ತ್ರೀಯರವರೊಳಗೆ, ಕೈಕಸೆಯೆಂಬಾಕೆಗೆ ರಾವಣ, ಕುಂಭಕರ್ಣ, ವಿಭೀಷಣರೆಂಬ ಮೂವರು ಪುತ್ರರಾದರು. ಪುಷ್ಪೋತ್ಕಟೆಯೆಂಬಾಕೆಗೆ ಖರ, ದೂಷಣ, ತ್ರಿಶಿರರೆಂಬ ಮೂವರು ತನುಜರೂ, ಶೂರ್ಪನಖಿಯೆಂಬ ಪುತ್ರಿಯೂ ಪುಟ್ಟಿದಳು. ೬೦೯

ಪುಲ ಕ್ರತು ಬ್ರಹ್ಮನ ಸಂತತಿ :

ಅನಂತರದೊಳಾ ಪುಲಹಂಗೆ ಕಿಂಪುರುಷ ಜಾತಿಯುಂ, ವ್ಯಾಘ್ರಾದಿ ಮೃಗಗಳುಂ ಜನಿಸಿದವು. ಅನಂತರದೊಳಾ ಕ್ರತುವಿಂಗೆ ಸೂರ್ಯಾಗ್ನಿ ತೇಜಸ್ಸನುಳ್ಳ ಕೆಲ ಋಷಿಗಳುದಿಸಿದರು. ೬೧೦

ದಕ್ಷ ಬ್ರಹ್ಮನ ಸಂತತಿ :

ಅನಂತರದೊಳಾ ದಕ್ಷನಿಗೈವತ್ತು ಪುತ್ರಿಯರುದಿಸಿದರುವರೊಳಗೆ ಕೀರ್ತಿ, ಲಕ್ಷ್ಮಿ, ಧೃತಿ, ಮೇಧೆ, ಪುಷ್ಟಿ, ಶ್ರದ್ಧೆ, ಕ್ರಿಯೆ, ಬುದ್ಧಿ, ಲಜ್ಜೆ, ಮತಿಯೆಂಬ ಹತ್ತು ಮಕ್ಕಳನೆ ಬ್ರಹ್ಮನ ಸಂಕಲ್ಪ ಜನಿತನಾದ ಧರ್ಮದೇವತೆಗೆ ಕೊಟ್ಟನು. ಅದಿತಿ ಮೊದಲಾದ ಹದಿಮೂರು ಮಕ್ಕಳನು ಪೂರ್ವೋಕ್ತ ಕಶ್ಯಪ ಬ್ರಹ್ಮನಿಗೆ ಕೊಟ್ಟನು. ಅಶ್ವಿನಿ ಮೊದಲಾದಿಪ್ಪತ್ತೇಳು ಮಕ್ಕಳನೆ ಚಂದ್ರನಿಗೆ ಕೊಟ್ಟನು. ಬಳಿಕಾ ಧರ್ಮ

ದೇವತೆಗೆ ಶಮ, ಕಾಮ, ಹರ್ಷರೆಂಬ ಮೂವರು ಪುತ್ರರವರೊಳಗೆ ಶಮಂಗೆ ಪ್ರೀತಿ, ಕಾಮಂಗೆ ರತಿ, ಹರ್ಷಂಗೆ ಆನಂದಿಯರೆಂಬ ಸ್ತ್ರೀಯರುಗಳವರೀ ಜಗತ್ತಿನ ಧರ್ಮಂಗಳಿಗೆ ಸಹಾಯಗಳಕ್ಕುಂ. ೬೧೧

## ಅತ್ರಿಬ್ರಹ್ಮನ ಸಂತತಿ ಮತ್ತು ವಶಿಷ್ಠ ಸಂತತಿ

ಅನಂತರದೊಳಾ ಅತ್ರಿಗೆ ದೂರ್ವಾಸ, ದತ್ತಾತ್ರೇಯ, ಚಂದ್ರರೆಂಬ ಮೂವರು ಪುತ್ರರಾದರು. ಆ ಚಂದ್ರಂಗೆ ಬುಧನು ಜನಿಸಿದನು.
ಅನಂತರದೊಳಾ ವಶಿಷ್ಠಂಗೆ ಶಕ್ತಿ, ಪರಾಶರ, ವ್ಯಾಸ, ಶುಕಾದಿ ಋಷಿಸಂತಾನ ಮುದಿಸಿತ್ತಿದೇ ನವಬ್ರಹ್ಮರಿಂದಾದ ಸೃಷ್ಟಿಕ್ರಮವುಕ್ಕುಂ. ೬೧೨

## ಚತುರ್ಮುಖನಿಂ ಪ್ರಜಾಪತಿ ಸಂತತಿ :

ಅನಂತರದೊಳಾ ಬ್ರಹ್ಮನಿಗೆ ಪ್ರಜಾಪತಿ ಪುಟ್ಟಿದನು. ಆತಂಗೆ ಧರ, ಧ್ರುವ, ಸೋಮ,ಆಪ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸರೆಂಬಷ್ಟವಸುಗಳು ಜನಿಸಿದರವರೊಳಗೆ: ಧರಂಗೆ ಪ್ರವಿಣನೆಂಬ ಮಗನೂ; ಧ್ರುವಂಗೆ ಕಾಲನೆಂಬ ಮಗನೂ; ಸೋಮನಿಗೆ ಸುವರ್ಚ್ಯನೆಂಬ ಮಗನೂ: ಆಪನಿಗೆ ಶಾಂತನೆಂಬ ಸುತನೂ: ಅನಿಲಂಗೆ ಪುರೋಚನನೆಂಬಾತ್ಮಜನೂ; ಅನಲಂಗೆ ಜ್ಯೋತಿಯೆಂಬ ತನಯನೂ; ಪ್ರತ್ಯೂಷಂಗೆ ದೇವಲ ಮಹಾಮುನಿಯೆಂಬ ಪುತ್ರನೂ; ಪ್ರಭಾಸಂಗೆ ಬೃಹಸ್ಪತಿಯ ಒಡಹುಟ್ಟಿದವಳಾದಯೋಗಸಿದ್ಧಿಯೆಂಬ ಸ್ತ್ರೀಯಲ್ಲಿ ವಿಶ್ವಕರ್ಮನು ಜನಿಸಿ ದೇವತೆಗಳ ಬಡಗಿಯಾದನು. ಮತ್ತಮಾ ವಿಶ್ವಕರ್ಮನ ಮಗಳು ವಡಬೆಯೆಂಬ ವಧುವಿನಲ್ಲಿ ಸೂರ್ಯಂಗೆ ಅಶ್ವಿನಿದೇವತೆಗಳು ಪುಟ್ಟಿದರು. ಮತ್ತಮಾ ಅಶ್ವಿನಿದೇವತೆಗಳಿಂ ಗುಹ್ಯಕರೆಂಬ ದೇವಜಾತಿಯುಂ, ಸಕಲೋಷಧಿಗಳೆಲ್ಲಂ ಜನಿಸಿದವು. ೬೧೩

## ಧಾತೃ ವಿಧಾತೃ ಸಂತತಿ

ಅನಂತರದೊಳಾದಿ ಬ್ರಹ್ಮಂಗೆ ಧಾತೃವೆಂದು, ವಿಧಾತೃವೆಂದೀರ್ವರು ಮಕ್ಕಳುಗಳವರೀ ಲೋಕದ ಪುಣ್ಯಪಾಪಂಗಳಂ ನಡಸುತ್ತಿರ್ಪರು. ಅವರಿಗೆ ಲಕ್ಷ್ಮಿಯೆಂದು, ಜೇಷ್ಠಾ ದೇವಿಯೆಂದೊಡವುಟ್ಟಿದರವರೊಳಗೆ, ಲಕ್ಷ್ಮಿಗೆ ಜಾತ್ಯಶ್ವಂಗಳು ಜನಿಸಿದವು. ಜೇಷ್ಠಾದೇವಿಗೆ ಶತ್ರಾದೇವಿಯೆಂಬ ಮಗಳಾದಳು. ಅವಳಿಂ ಗೌಡಿ, ಪೈಷ್ಟಿ, ಮಾಧ್ವಿಯೆಂಬ ತ್ರಿವಿಧ ಸುರೆಪುಟ್ಟಿತ್ತಾ ಸುರೆಯಿಂದ ಧರ್ಮ ಜನಿಸಿದನಾತಂಗೆ ಭಯನೆಂದು, ಮಹಾಭಯನೆಂದು, ಅಂತಕನೆಂದು ಮೂವರು ಪುತ್ರರುಗಳುಂ, ಮತ್ತೆ ಕೆಲ ಸುತೆಯರುಗಳುಂ ಪುಟ್ಟಿದರು. ಅವರಿಂದವೆ ಕ್ರೌಂಚ, ವಾಯಸ,ಹದ್ದು, ಗಿಡುಗ, ಹಂಸೆ, ಗಿಳಿ, ಕೋಗಿಲೆ, ಚಕ್ರವಾಕ, ಬಕಾದಿನಾನಾ ಪಕ್ಷಿಜಾತಿ ಪುಟ್ಟಿತ್ತೆಂದು ನಿಶ್ಚಿತಮಕ್ಕುಂ. ೬೧೪

## ಸುಖ ತಾರತಮ್ಯ

ಬಳಿಕ್ಕಿಂತು ಪೇಳ್ದ ಪ್ರಕಾರದಿಂದಖಿಳ ಜಗಜ್ಜನಕನಾದ ಬ್ರಹ್ಮನ ಸುಖಾತಿಶಯಮೆಂತೆಂದೊಡೆ: ಕ್ರಿಮಿ, ಕೀಟ, ಪತಂಗ, ಪಶು, ಮೊದಲಾದ ಜೀವಜಾತಿಗಳಿಗೆ ಮಿಗೆ ವಿಶಿಷ್ಟಮಾದುದೇ ನರಜನ್ಮವು. ಅದರಲ್ಲಿ ಆಯುರಾರೋಗ್ಯ ಕುಲ ಬಲ ಪರಾಕ್ರಮ ರೂಪು ಯವ್ವನ ವಿದ್ಯ ಕೀರ್ತಿ ಸಂಪದಾದಿ ಸೌಭಾಗ್ಯದೊಳೊಂದುಂ ಕೊರತೆಯಿಲ್ಲದೆ ಸಪ್ತಸಮುದ್ರದಧೀಶ್ವರನಾದ ಸಾರ್ವಭೌಮನಾದಾತಂಗೆ ಸರ್ವನರರಿಂ ನೂರುಮಡಿ ಸುಖವವರಿಂ ನೂರುಮಡಿ ಮನುಜಗಂಧರ್ವರ ಸುಖವವರಿಂ ನೂರುಮಡಿ ದೇವತಾ ಗಂಧರ್ವರ ಸುಖವವರಿಂ ನೂರುಮಡಿ ಪಿತೃಗಳ ಸುಖವವರಿಂ ನೂರುಮಡಿ ದೇವತಾ ಕನಿಷ್ಟರ ಸುಖವವರಿಂ ನೂರುಮಡಿ ದೇವತಾ ಮಧ್ಯರ ಸುಖವವರಿಂ ನೂರುಮಡಿ ದೇವತಾ ವಿಶಿಷ್ಟರ ಸುಖವವರಿಂ ನೂರುಮಡಿ ಇಂದ್ರನ ಸುಖವಾತನಿಂ ನೂರುಮಡಿ ಬೃಹಸ್ಪತಿಯ ಸುಖವವನಿಂ ನೂರುಮಡಿ ಬ್ರಹ್ಮನ ಸುಖವಿಂತು ಮಹಾ ಸುಖ ಸ್ವರೂಪನಾಗಿ ಸತ್ಯಲೋಕದಲ್ಲಿ ಬ್ರಹ್ಮನಿರ್ಪಂ. ೬೧೫

## ವೈಕುಂಠಲೋಕ

ಬಳಿಕಾ ಸತ್ಯಲೋಕದಿಂ ಮೇಲೆ ನಾಲ್ಕು ಕೋಟಿ ಯೋಜನಾಂತರದಲ್ಲಿ ವೈಕುಂಠಮಿರ್ಪುದು ಅಲ್ಲಿ ಅಂತಸ್ತಮೋಬಹಿಸ್ಸತ್ವಗುಣದಿಂ ಜಗತ್ತಿನ ಸೃಷ್ಟಿ ಸ್ಥಿತಿ ಕರ್ತೃವಪ್ಪ ನಾರಾಯಣನಾದೊಡೆ ನೀಲವರ್ಣಮಯ ಶರೀರದಿಂ; ಏಕಮುಖ, ದ್ವಿಲೋಚನಂಗಳಿಂ; ಶಂಖ, ಚಕ್ರ, ಗದೆ ಶಾರ್ಙಂಗಳನುಳ್ಳ ವಾಮದಕ್ಷಿಣ ಕರ ಚತುಷ್ಟಯದಿಂ; ವನಮಾಲೋಪವೀತ, ಪೀತಾಂಬರ, ಕಿರೀಟ, ಕೌಸ್ತುಭಾದ್ಯಲಂಕಾರಂಗಳಿಂ; ದಿವ್ಯಗಂಧ ಪುಷ್ಪಾದಿಗಳಿಂದತಿ ಸಿಂಗರಬಂಡೆದು ಲಕ್ಷ್ಮಿಯೊಡಗೂಡಿ ಜ್ಞಾನ, ಶಕ್ತಿ, ಬಲ, ಐಶ್ವರ್ಯ, ತೇಜ, ವೀರ್ಯಗಳೆಂಬ ವೈಷ್ಣವೋಕ್ತ ಷಡ್ಗುಣ ಸಹಿತನಾಗಿ; ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭೃಗುರಾಮ, ರಘುರಾಮ, ಯದುರಾಮ, ಬೌದ್ಧ, ಕಲ್ಕಿಯೆಂಬ ದಶಾವತಾರ ಯುಕ್ತನೆನಿಸಿ; ಅನಿರುದ್ಧ, ರುಕ್ಮಾಂಗದ, ಪ್ರಹ್ಲಾದ, ನಾರದ, ಅಂಬರೀಷ, ಪುಂಡರೀಕ, ಗಜೇಂದ್ರ, ಮುಕ್ತ, ಉದ್ಧವ, ಸಂಕೇತ, ಭೀಷ್ಮ, ವಿಭೀಷಣ, ಕ್ಷದಾಪಾದಿ ಭಾಗವತರಿಂ ಪೂಜ್ಯನಾಗಿ; ಏಕದಂಡಿ, ದ್ವಿದಂಡಿ, ತ್ರಿದಂಡಿ ಮೊದಲಾದ ತನ್ನ ಭಕ್ತರಿಂ; ಬ್ರಹ್ಮೇಂದ್ರಾದಿ ದೇವತೆಗಳಿಂದೋಲೈಸಿಕೊಳುತ್ತಿರ್ಪಂ. ೬೧೬

## ಷಣ್ಮುಖ ಲೋಕ

ಬಳಿಕಲ್ಲಿಂದಂ ಮೇಲೊಂದು ಕೋಟಿ ಯೋಜನಾಂತರದಲ್ಲಿ ಷಣ್ಮುಖನ ಲೋಕವಿಹುದು. ೬೧೭

## ಉಮಾಲೋಕ

ಮತ್ತಮಲ್ಲಿಂದಂ ಮೇಲೊಂದು ಕೋಟಿ ಯೋಜನಾಂತರದಲ್ಲಿ ಉಮಾಲೋಕವಿಹುದು. ೬೧೮

## ಕಾಮಧೇನು ಲೋಕ

ಮತ್ತಮಲ್ಲಿಂದಂ ಮೇಲೊಂದು ಕೋಟಿ ಯೋಜನಾಂತರದಲ್ಲಿ ಕಾಮಧೇನು ಲೋಕವಿರ್ಕುಂ. ೬೧೯

## ರುದ್ರಲೋಕ

ಬಳಿಕ್ಕಲ್ಲಿಂದಂ ಮೇಲೆ ಮೂರುಕೋಟಿ ಯೋಜನಾಂತರದಲ್ಲಿ ಜ್ಯೋತಿ ರ್ಮಯವಾದಮುಕ್ತಿ ಸ್ಥಾನಮಪ್ಪ ರುದ್ರಲೋಕವಿಹುದು. ಎಂತೆಂದೊಡೆ :ಕೈಲಾಸ ವೆಂದೂ ಪ್ರಮಥ ಲೋಕವೆಂದೂ ಪೆಸರ್ವಡದತಿ ಶೋಭನವತಿ ಚಿತ್ರವತ್ಯಾಶ್ಚರ್ಯ ವತಿ ಮಂಗಲಮಯವಾಗಿ ಕಂಗೊಳಿಸುತ್ತಿರ್ಪುದಲ್ಲಿ,ಅಂತಸ್ಸತ್ವ ಬಹಿಸ್ತಮೋಗುಣದಿಂ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಕೃತ್ಯ ಕರ್ತೃವಪ್ಪ ರುದ್ರನಾದೊಡೆ, ಗೋಕ್ಷೀರ ಧವಲದ್ಯುತಿಮಯ ಶರೀರದಿಂ; ಜಟಾಮಕುಟ, ಚಂದ್ರಕಲೆ, ಏಕಮುಖ, ತಿನೇತ್ರ, ನೀಲಗ್ರೀವಂಗಳಿಂ; ಪರಶು, ಮೃಗ, ವರಾಭಯಂಗಳನುಳ್ಳವಾಮ ದಕ್ಷಿಣ ಕರ ಚತುಷ್ಟಯದಿಂ; ಸ್ವಾತ್ಮಾರಾಮನಪ್ಪುದರಿಂ ಬಾಹ್ಯವಿಷಯ ವ್ಯಾಮೋಹವಿಲ್ಲಾ ಗಿಯುಂ, ದುಷ್ಟನಿಗ್ರಹತ್ವಮಂ ಸೂಚಿಸಲೋಸುಗಮಾಗಿಯುಂ; ಪೊದೆದುಟ್ಟ, ಗಜ ವ್ಯಾಘ್ರಾಜಿನ,ಸರ್ಪಾಭರಣ, ಭಸ್ಮೋದ್ಧೂಳನ, ಅಕ್ಷಮಾಲೆ, ಶಿರೋಮಾಲಾದಿ ಗಳಿಂದಲಂಕೃತನಾಗಿ; ಗಿರಿಜಾ ಸಮೇತನಾಗಿ; ಸಕಲ ದೇವತಾ ಸಾರ್ವಭೌಮನೆನಿಸಿ; ಸತ್ಯ, ಕ್ಷಮೆ, ಧೃತಿ, ಅಧಿಷ್ಠಿತಿ, ಆತ್ಮಬೋಧ, ಸೃಷ್ಟಿ, ವಿರಾಗ, ತಪಸ್ಸು, ಮತಿ, ಈಶ್ವರತ್ವವೆಂಬ ದಶಕಲ್ಯಾಣಗುಣಯುಕ್ತನಾಗಿ; ಸರ್ವಜ್ಞತ್ವಾದಿ, ಷಡಂಗಜ್ಞಾನಾದಿ ಷಡ್ಗುಣಗಳಿಂ; ಅಣಿಮಾದಿ ಮಹದೈಶ್ವರ್ಯಂಗಳಿಂ ಸಂಪನ್ನನೆನಿಸಿ ಗಂಗಾಮಾಳುಕ ಸಮಾರುದ್ರರಿಂ ಬ್ರಹ್ಮೇಂದ್ರೋಪೇಂದ್ರ ಮನು ಮುನಿ ಸುಮನಸಾದಿ ಸಕಲದೇವ ಶ್ರೇಷ್ಠರಿಂದೋಲೈಸಿಕೊಳುತ್ತಿರ್ಪಂ. ೬೨೦

## ಅಣಿಮಾದಿಗಳ ಲಕ್ಷಣಂ

ಮತ್ತಮಾ ಅಣಿಮಾದಿಗಳ ಲಕ್ಷಣಮೆಂತೆನೆ :

ಅತ್ಯಂತ ಸೂಕ್ಷ್ಮವಾದ ಪ್ರಾಣಿಗಳಾತ್ಮತ್ವದಿಂ ಪ್ರವೇಶಿಸುವ ತನಮೇ ಅಣಿಮೆ.

ಬ್ರಹ್ಮಾಂಡಾದಿ ಶಿವಾಂತಮಾದ ಮೂವತ್ತಾರು ತತ್ವಂಗಳ ಪೊರಗೆ ವ್ಯಾಪಿಸಿ ವರ್ತಿಸುವಹಿತನವೆ ಮಹಿಮೆ.

ಮಹಾಮೇರು ಪರ್ವತಕ್ಕೆ ಸಮಾನ ಶರೀರಮುಳ್ಳಾತನಂ ಮೇಲಕ್ಕೆನೆಗಹುವ ಕೃತ್ಯದಲ್ಲಿ ಪರಮಾಣುವಿಗೆ ಸದೃಶವಹತನವೇ ಲಘಿಮೆ.

ಪರಮಾಣುವಿಗೆ ಸದೃಶಮಾದ ದೇಹಿಯನುದ್ಧಕ್ಕೆಸಿಗಹುವ ಕೃತ್ಯದಲ್ಲಿ ಸುಮೇರು ವಿನೋಪಾದಿಯ ಭಾರವಹತನವೇ ಗರಿಮೆ.

ಸ್ವಸ್ಥಾನದೊಳಿರ್ದು ಸಮಸ್ತಲೋಕ ಸಾಕ್ಷಾತ್ಕಾರವೇ ಪ್ರಾಪ್ತಿ

ಸ್ವೇಚ್ಛೆಯಿಂದಾಕಾಶಗಮನಾದಿ ಸರ್ವಸಿದ್ಧಿಯೇ ಪ್ರಾಕಾಮ್ಯ

ಸ್ವಶರೀರ ಪ್ರಕಾಶದಿಂ ಸರ್ವಾರ್ಥಂಗಳಂ ಬೆಳಗುವತನವಾದೊಡೆ ಪ್ರಾಕಾಮ್ಯ-ಸ್ವೇಚ್ಛಾಮಾತ್ರದಿಂ ಜಗದುತ್ಪತ್ತ್ಯಾದಿ ಕೃತ್ಯಕರಣಮುಂ, ಸೂರ್ಯಾದಿಗಳಂ ಪ್ರೇರಿಸುವತನಮುಂ ಈಶತ್ವ.

ಸಕಲ ದಿಕ್ಪಾಲಕರೊಡಗೂಡಿದ ಜಗಮಂ ತನ್ನಾಧೀನಮಾಗಿ ನಡಸುವತನವೇ ವಶಿತ್ವಮೆಂದು ನಿಶ್ಚಿತಮಕ್ಕುಂ. ೬೨೧

ಶಿವಲೋಕ ವಿಸ್ತಾರ :

ಮತ್ತಮಾ ರುದ್ರಲೋಕದಿಂ ಬ್ರಹ್ಮಾಂಡದೂರ್ಧ್ವ ಕಟಾಹಾಂತ ಮಾಗೊಂದು ಕೋಟಿ ಯೋಜನದಳವಿಯಿರ್ಕುಂ. ಅನಂತರದೊಳಾ ಬ್ರಹ್ಮಾಂಡದ ಪೂರವಳಯ ದಗ್ರ ಪ್ರದೇಶದಲ್ಲಿ ೩೨ ಕೋಟಿ ಯೋಜನ ವಿಶಾಲೋನ್ನತಮಾಗಿ ಶಿವಲೋಕ ವಿಹುದು. ಅದಕ್ಕೆ ಜ್ಯೋತಿರ್ಮಯಮಾದ ಕೋಂಟೆ ೩೨ ಕೋಟಿ ಯೋಜನವಿಸ್ತಾರ ಮಪ್ಪುದು. ಅದಕ್ಕೆ ವಿಚಿತ್ರ ರಚನೆಯುಳ್ಳವೆಂಟು ಬಾಗಿಲುಗಳವನತ್ಯಂತ ಪರಾಕ್ರಮಿ ಗಳಾಗಿ ಕಾಯ್ದಿರ್ಪ ಭೈರವರ ಲಕ್ಷಣವೆಂತೆನೆ : ೬೨೨

ಅಷ್ಟ ಭೈರವರು :

ಮೊದಲು ರಕ್ತ ವರ್ಣಮಯ ದೀರ್ಘಶರೀರದಿಂ, ತ್ರಿನೇತ್ರಂ, ದಂಡಕಮಂಡಲು ಪಾಶ ಜಪಮಾಲೆವಿಡಿದ ಕರಚತುಷ್ಟಯದಿಂ; ಬ್ರಾಹ್ಮಿಯೆಂಬ ಶಕ್ತಿ ಸಮ್ಮೇಳದಿಂ, ಹಂಸವಾಹನದಿಂ ತನಗೆ ಸಮಾನವಾದ ಭಟರೇಳುಕೋಟಿಯಿಂದೊಪ್ಪಿ ಮೂಡಣ ಬಾಗಿಲಲ್ಲಿ ಮಹಾಭೈರವನಿರ್ಪಂ.

ಬಳಿಕ ಹಿರಣ್ಮಯ ಸ್ಥೂಲಕಾಯದಿಂ ನೇತ್ರತ್ರಯದಿಂ, ಶೂಲ ಡಮರುಗ ಖಡ್ಗ ಖಟ್ವಾಂಗವಿಡಿದ ಕರಚತುಷ್ಟಯದಿಂ, ಮಾಹೇಶ್ವರಿಯೆಂಬ ಶಕ್ತಿಸಮ್ಮೇಳದಿಂ, ಅಜವಾಹನದಿಂ, ತನಗೆ ಸಮಾನವಾದ ಹದಿನಾರುಕೋಟಿ ಭಟರಿಂದೆಸೆದು ಅಗ್ನಿ ದೆಸೆಯ ಬಾಗಿಲಲ್ಲಿ ರುರುಭೈರವನಿರ್ಪಂ.

ಬಳಿಕ ಶೋಣವರ್ಣಮಯ ಮಹಾಮೂರ್ತಿಯು ಲೋಚನತ್ರಯದಿಂ, ಗಿಳಿ, ವಜ್ರ, ಶಕ್ತಿಶೂಲವಿಡಿದ ಕರಚತುಷ್ಟಯದಿಂ, ಕಾಮಾರಿಯೆಂಬ ಶಕ್ತಿ ಸಮ್ಮೇಳದಿಂ, ಮಯೂರವಾಹನದಿಂ, ತನಗೆ ಸಮಾನಮಾದ ಭಟಕೈದುಕೋಟಿಯಿಂ ಮೆರೆದು ತೆಂಕಣಬಾಗಿಲಲ್ಲಿ ಚಂಡಭೈರವನಿರ್ಪಂ.

ಬಳಿಕ ಸುವರ್ಣಕಾಂತಿಮಯ ಚಾರುಶರೀರದಿಂ, ನಯನತ್ರಯದಿಂ, ಶಂಖ, ಚಕ್ರ, ಗದೆ, ಶಾರ್ಙವಿಡಿದ ಪಾಣಿಚತುಷ್ಟಯದಿಂ, ವೈಷ್ಣವಿಯೆಂಬ ಶಕ್ತಿ ಸಮ್ಮೇಳದಿಂ, ಗರುಡವಾಹನದಿಂ, ತನಗೆ ಸಮಾನಮಾದ ಭಟರೈದು ಕೋಟಿಯಿಂ ರಂಜಿಸಿ ನೈರುತ್ಯದ ಬಾಗಿಲಲ್ಲಿ ಕ್ರೋಧಭೈರವನಿರ್ಪಂ.

ಬಳಿಕ ಮಯೂರವರ್ಣಮಯವಾದುನ್ನತ ಗಾತ್ರದಿಂ, ಅಕ್ಷಿತ್ರಯದಿಂ, ಶಂಖ, ಫಲಕ, ಖೇಟಕ, ಮುಸಲವಿಡಿದ ಹಸ್ತಚತುಷ್ಟಯದಿಂ, ವಾರಾಹಿಯೆಂಬ ಶಕ್ತಿ

ಸಮ್ಮೇಳದಿಂ, ಮಹಿಷವಾಹನದಿಂ, ತನಗೆ ಸಮಾನಮಾದ ಭಟರಾರುಕೋಟಿಯಿಂ ಪರಿಶೋಭಿಸಿ ಪಡುವಣ ಬಾಗಿಲಲ್ಲಿ ಉನ್ಮತ್ತಭೈರವನಿರ್ಪಂ.

ಬಳಿಕ ಮಾಣಿಕ್ಯವರ್ಣಮಯ ಭೀಕರಾಕಾರದಿಂ, ದೃಷ್ಟಿತ್ರಯದಿಂ, ವಜ್ರ, ಶಕ್ತಿ, ಧನು, ಶರವಿಡಿದ ಕರಚತುಷ್ಟಯದಿಂ, ಮಾಹೇಂದ್ರಿಯೆಂಬ ಶಕ್ತಿಸಮ್ಮೇಳದಿಂ, ಗಜವಾಹನದಿಂ, ತನಗೆ ಸಮಾನಮಾದ ಮೂರುಕೋಟಿ ಭಟರಿಂ ವಿರಾಜಿಸಿ ವಾಯವ್ಯದ ಬಾಗಿಲಲ್ಲಿ ಕಪಾಲಿಭೈರವನಿರ್ಪಂ.

ಬಳಿಕ ಧೂಮ್ರವರ್ಣಮಯ ಭಯಂಕರ ತನುವಿನಿಂ, ಚಕ್ಷುತ್ರಯದಿ, ಶೂಲ ಡಮರುಗ, ಗಂಟೆ ಕಪಾಲವಿಡಿದ ಕರಚತುಷ್ಟಯದಿಂ, ಚಾಮುಂಡಿಯೆಂಬ ಶಕ್ತಿ ಸಮೇಳದಿಂ, ಕಾಕವಾಹನದಿಂ ತನಗೆ ಸಮಾನಮಾದ ದ್ವಾದಶಕೋಟಿ ಭಟರೊಡ ಗೂಡಿ ಬಡಗಣಬಾಗಿಲಲ್ಲಿ ಭೀಷಣಭೈರವನಿರ್ಪಂ.

ಬಳಿಕ ಹೇಮವರ್ಣಮಯ ಪ್ರಚಂಡವಿಗ್ರಹದಿಂ ಈಕ್ಷಣತ್ರಯದಿಂ, ಖಡ್ಗ, ಗದೆ, ಖೇಟಕ, ಫಲಕವಿಡದ ಕರಚತುಷ್ಟಯದಿಂ, ಮಹಾಕಾಳಿಯೆಂಬ ಶಕ್ತಿ ಸಮೇಳದಿಂ, ಮೂಷಕವಾಹನದಿಂ ತನಗೆ ಸಮಾನಮಾದ ಭಟರೆಂಟು ಕೋಟಿಯಿಂ ತೋರ್ಕೆವೆತ್ತು ಈಶಾನ್ಯದ ಬಾಗಿಲಲ್ಲಿ ಸಂಹಾರಭೈರವನಿರ್ಪಂ. ೬೨೩

## ಶ್ರೀ ಶಿವನಗರ :

ಮತ್ತಮಿಂತು ತಮ್ಮ ಸ್ಮರಣಮಾತ್ರದಿಂ ಸಕಲ ವಿಘ್ನಂಗಳಂ ನಿವಾರಿಸುವಷ್ಟ ಭೈರವರ ಕಾವಲ ಬಾಗಿಲಂ ಕಳಿದೊಳಗೆ ಪೊಕ್ಕುನೋಡೆ ಕಣ್ಗೆಮಂಗಳಮಾಗಿ, ಮನಕ್ಕೆ ಮನೋಹರಮೆನಿಸಿ, ನುಡಿಗೆ ನವೀನಮಾಗಿ, ಮಯಣ, ಮಾಂಡವ್ಯ, ವಿಶ್ವಕರ್ಮಾದಿ ಶಿಲ್ಪಿಗಳ ಕಲ್ಪನೆಗಳಂ ಕೀಳ್ಪಡಿಸಿ, ಮಂಜುಳಮಯ ರಂಜನೆವೆತ್ತು, ತರತರಂಗೊಂಡು ಮೆರೆವ ಚಿಂತಾಮಣಿಗೆಲಸದ, ಕರುಮಾಡ ಕೋಟ್ಯಾನುಕೋಟಿ ಗಳಳವಟ್ಟ ಸುವರ್ಣಕಳಸಂಗಳಿಂದೆಸೆವಸಂಖ್ಯಾತ ಮಹಾಗಣಂಗಳ ಮಂದಿರಂಗಳಿಂ ಸಾಲ್ಗೊಂಡು, ಸೋಮ ಸೂರ್ಯವೀಥಿ ಸಹಸ್ರಂಗಳಿಂದಪರಿಮಿತಮಾದುಪವೀಥಿ ಗಳಿಂ, ಪನ್ನೀರ ಚಳೆಯಂಗಳಿಂ, ಕಸ್ತೂರಿಯಸಾರಣೆಗಳಿಂ, ಕುಂಕುಮದ ಕಾರಣೆ ಗಳಿಂ ಮುತ್ತಿನರಂಗವಲ್ಲಿಗಳಿಂ,ತಳಿರತೋರಣ, ಮಕರತೋರಣ, ಗುಡಿತೋರಣಾದಿ ರಚನೆಗಳಿಂ, ವೃಷಭಧ್ವಜ ಪತಾಕೆಗಳಿಂ, ಕುಸುಮವೃಷ್ಟಿಗಳಿಂ, ಧೂಪ ಧೂಮಂ ಗಳಿಂ, ವೇದಾಗಮಶಾಸ್ತ್ರ ಘೋಷಂಗಳಿಂ, ನಾನಾ ವಾದ್ಯಧ್ವನಿಗಳಿಂ ಸಂಚರಿಪ ಸಕಲ ಗಣೇಶ್ವರರ ಸಂದಣಿಗಳಿಂ, ಶೃಂಗಾರಲಾವಣ್ಯ ಸುಕುಮಾರತೆಗಳೆ ಶರೀರಂಬಡೆದೆ ಡೆಯಾಡುವಂತಿರ್ದ ರುದ್ರಗಣಿಕೆಯರಿಂ, ಸಕಲ ಸುರಭೋಗ ಪರಿಕರಂಗಳಿಂ ಸಂಪನ್ನ ಮಾಗಿಪ್ಪುದರಿಂದತ್ಯಾಶ್ಚರ್ಯವದ್ಭುತವತಿ ಕೌತುಕವತಿ ಚಿತ್ರವತಿ ಶೋಭನವತಿ ನೂತನ ವತಿ ರಮ್ಯವತಿ ವಿಲಾಸಮಾಗಿರ್ಪುದು. ೬೨೪

## ಮಹಾದೇವನರಮನೆ :

ಆ ಪುರದ ಮಧ್ಯದ ಪ್ರದೇಶದಲ್ಲಿ ಮಹಾದೇವನರಮನೆ ಪಂಚವಿಂಶತಿಕೋಟಿ ಯೋಜನ ವಿಶಾಲವು. ಅದಕ್ಕೆ ಚತುರ್ದ್ವಾರಗಳು. ಅವರಲ್ಲಿ ಪೂರ್ವದಿಕ್ಕಿನ ದ್ವಾರದ ಗೋಪುರವೆ ಋಗ್ವೇದಮಯವಾಗಿ ನಾಲ್ಕುಲಕ್ಷ ಯೋಜನ ವಿಶಾಲೋನ್ನತವಾಗಿ, ಧವಲಾಕಾರಮಾಗಿರ್ಪುದು. ಆ ಬಾಗಿಲಂ ನಾಲ್ಕರ್ಬುದ ಕೂಷ್ಮಾಂಡ ಗಣೇಶ್ವರರೊಂದುಗೂಡಿ, ವೇತ್ರಹಸ್ತನಾದ ನಂದಿಕೇಶ್ವರಂ ಕಾಯ್ದಿರ್ಪಂ. ಮತ್ತಮಾ ದಕ್ಷಿಣದಿಕ್ಕಿನ ದ್ವಾರಗೋಪುರವೆ ಯಜುರ್ವೇದಮಯವೆನಿಸಿ ಲಕ್ಷಯೋಜನ ವಿಶಾಲೋನ್ನತವಾಗಿ ನೀಲವರ್ಣದಾಕಾರಮಾಗಿರ್ಪುದು. ಆ ಬಾಗಿಲನಸಂಖ್ಯಾತ ರೋಮಜ ಗಣೇಶ್ವರರು ಸಹಿತನಾಗಿ ವೀರೇಶ್ವರಂ ಕಾಯ್ದಿರ್ಪಂ. ಮತ್ತಮಾ ಪಶ್ಚಿಮದಿಕ್ಕಿನ ದ್ವಾರಗೋಪುರವೇ ಸಾಮವೇದಮಯವಾಗಿ ಲಕ್ಷಯೋಜನ ವಿಶಾಲೋನ್ನತವೆನಿಸಿ ಶುಭ್ರಾಕಾರಮಾಗಿರ್ಪುದು. ಆ ಬಾಗಿಲನಗಣಿತ ರುದ್ರಗಣಂಗಳೊಡಗೂಡಿ ನೀಲಲೋಹಿತಂ ಕಾಯ್ದಿರ್ಪಂ. ಮತ್ತಮಾ ಉತ್ತರದಿಕ್ಕಿನ ದ್ವಾರ ಗೋಪುರವೇ ಅಥರ್ವಣವೇದಮಯವಾಗಿ ಲಕ್ಷಯೋಜನ ವಿಶಾಲೋನ್ನತವೆನಿಸಿ ಕುಂಕುಮವರ್ಣದ ಆಕಾರಮಾಗಿರ್ಪುದು. ಆ ಬಾಗಿಲನಪರಿಮಿತ ಪ್ರಮಥಗಣ ಸಮೇತನಾಗಿ ಮಹಾಕಾಳಂ ಕಾಯ್ದಿರ್ಪಂ. ೭೫

## ಶಿವ ಸಭಾಸ್ಥಾನ :

ಬಳಿಕಾ ನಾಲ್ದೆಸೆಯ, ಬಾಗಿಲನೊಳಹೊಕ್ಕು ನಿರೀಕ್ಷಿಸೆ ದೃಷ್ಟಿಗಚ್ಚರಿದೋರಿ, ವರ್ಣನೆಗನುಪಮವಾಗಿ, ಸರ್ವೇಶ್ವರನ ಸಭಾಮಂಟಪಂ ಪರಿಶೋಭಿಸುತ್ತಿಹುದದರ ನಟ್ಟನಡುವೆ,ಕೋಟಿ ಸೂರ್ಯಪ್ರಕಾಶಮಂ ಕೀಳ್ಪಡಿಸುವ ದಿವ್ಯಸಿಂಹಾಸನಮೊಂದು ಲಕ್ಷಯೋಜನ ವಿಶಾಲೋನ್ನತಮಾಗಿ ರಂಜಿಸುತ್ತಿಹುದು. ಆ ಸಿಂಹಾಸನಾಗ್ರದಲ್ಲಿ ಗುಣತ್ರಯಾತೀತನಾದ, ಪ್ರಣವದರ್ಥಮಾದ ಬ್ರಹ್ಮಾದಿ ಮೂರ್ತಿಗಳಿಂ ಧ್ಯೇಯಮಾನನಾದ, ತನಗೊಂದು ವಸ್ತ್ವಂತರ ಧ್ಯಾನವಿಲ್ಲದೆ, ತ್ರಿಮೂರ್ತಿಗಳ ಮಧ್ಯದಲ್ಲಿ ತುರ್ಯನಾದ, ಘೃತಕಾಠಿಣ್ಯದಂತೆ ಸಚ್ಚಿದಾನಂದಾತ್ಮಕ ಬ್ರಹ್ಮದ ಸಾಕ್ಷಾತ್ಕಾರಮಾದ ಶಿವ ರುದ್ರ ಮಹಾದೇವ ಮಹಾಲಿಂಗ ಮಹಾಭಸ್ಮಾದಿ ಪರಿಯಾಯ ಸಂಜ್ಞಕನಾದ, ಸೃಷ್ಟ್ಯಾದಿ ಪಂಚಕೃತ್ಯ ಕರ್ತೃವಾದ, ಸತ್ಯಕಾಮ, ಸತ್ಯಸಂಕಲ್ಪಾದಿ ಕಲ್ಯಾಣಗುಣ ಮಣಿಸಿಂಧುವಾದ, ಸಕಲದೇವತಾ ಶೀಕರಂಗಳಿಗೆ ಸಮುದ್ರಸ್ಥಾಯಿಯಾದ, ಸ್ವಸ್ವರೂಪಾನುಸಂಧಾನ ಪ್ರಮೋದದಿಂ ನರ್ತನ ಶೀಲನಾದ, ಸರ್ವಾಂತರ್ಯಾಮಿಯಾದ, ಸರ್ವಕಾರಣನಾದ, ಮಾಯಾವಿಯಾದ, ಸ್ಮರಣಮಾತ್ರದಿಂದಖಿಳ ಪಾಪಕ್ಷಯಂ ಮಾಡಿ ಭೋಗಮೋಕ್ಷಪ್ರದನಾದಸಾಂಬಶಿವನಾದೊಡೆ ಸ್ಫಟಿಕವರ್ಣಮಯ್ಯ ಶರೀರದಿಂ, ಚಂದ್ರಾರ್ಧಮಂಡಿತ ಮಸ್ತಕದಿಂ, ಪ್ರಸನ್ನವದನದಿಂ, ಅನಂತ ಕೋಟಿ ಕಂದರ್ಪಲಾವಣ್ಯದಿಂ, ತ್ರಿನೇತ್ರದಿಂ, ನೀಲಗ್ರೀವದಿಂ, ವರದಾಭಯ ಕರದ್ವಯದಿಂ

ಧವಲಯಜ್ಞಸೂತ್ರದಿಂ, ಉಮಾಸಮೇತಮಾದ ವಾಮಾಂಗದಿಂ, ಪೊದೆದುಟ್ಟ ವ್ಯಾಘ್ರಗಜ ಚರ್ಮಾಂಬರದಿಂ, ಮೃದುಪಾದಪದ್ಮದ್ವಯದಿಂ, ಕಟಕ ಮಕುಟ ಕೇಯೂರ ಕುಂಡಲಾದಿ ಸರ್ವಾಭರಣ ಗಂಧಪುಷ್ಪಾದಿಗಳಿಂದಲಂಕೃತನಾಗಿ ಮಹೇಶ್ವರನೊಪ್ಪುತ್ತಿರಲು, ಆ ಸಿಂಹಾಸನದ ಕೆಳಗೆ ಎಡಬಲದಲ್ಲಿ ಕುಳ್ಳಿರ್ದಗುಹ ಗಣಪರಿಂ, ಸೂಳರಿದಿಕ್ಕೆಲದೊಳಿಕ್ಕುವ ಚಾಮರ ಸೀಗುರಿಕಾರರಿಂ, ಕೊಂಡಾಡುವ ಚಂಡಕೀರ್ತಿಗಳಿಂ, ನುತಿಸುವ ಸಕಲವೇದ ಶಾಸ್ತ್ರಂಗಳಿಂ, ಪೊಗಳುವ ಮುನಿಜನಂ ಗಳಿಂ, ಕೈವಾರಿಸುವ ಮನುಗಳಿಂ, ಪೊಡಮಡುವ ಹರಿಯಜೇಂದ್ರಾದಿ ದೇವ ಶ್ರೇಷ್ಠರಿಂ, ಹರಸುವ ಪ್ರಸೂತಿ, ಕೂತಿ, ಖ್ಯಾತಿ, ಧೃತಿ, ಸಂಭೂತಿ, ಪ್ರೀತಿ, ಕ್ಷಮೆ, ಸಂನ್ನತಿ, ಅನಸೂಯೆ, ದೇವಮಾತೆ, ಅರುಂಧತಿಯರೆಂಬ ಏಕಾದಶ ಪತಿವ್ರತೆಯರಿಂ, ಮುದ್ದಿಸುವ ಭಕ್ತಿಕಾಂತೆಯರಿಂ, ಕರೆಕರೆದು ಸಮ್ಮುಖಂಗೆಯ್ವ ಸಾವಿತ್ರ್ಯಾದಿ ಮಂತ್ರಶಕ್ತಿಯರಿಂ,ಪರಿವರಿದು ಪರಿಚರ್ಯಂಗೆಳಂ ಮಾಳ್ಪ ಸಿರಿ ಸರಸ್ವತಿ ಶಚೀದೇವಿ ಯರಿಂ, ಪಾಡುವ ತುಂಬುರ ನಾರದಾದಿಗಳಿಂ, ನರ್ತಿಸುವ ರಂಭಾದಿ ದೇವಗಣಿಕೆ ಯರಿಂ, ಪರಿವೇಷ್ಟಿಸಿರ್ದ ರುದ್ರಗಣ, ಪ್ರಮಥಗಣ, ದೇವಗಣ, ಭಕ್ತಮಹಾಗಣಂ ಗಳಿಂ ಕಿಕ್ಕಿರಿಗಿರಿದು ಕೋಲಾಹಳಂಬೆರಸಿ ಮತಿಗೆ ಮಂಗಳಕರವಾಗಿರ್ಪುದಲ್ಲಿ ೬೨೬

## ಮೂಡಣ ಸಭಾ ಸ್ಥಾನ :

ನಂದಿಕೇಶ್ವರ, ಭೃಂಗೀಶ್ವರ, ಸ್ಕಂದ, ಮಹಾಕಾಳ, ಕಿರೀಟಿ, ಘಂಟಾಕಾಲ, ವೀರಭದ್ರ, ಘಂಟಾಕರ್ಣ, ಸುಘೋಷ, ದಂಡಿ, ಈಶಾನ್ಯರೆಂಬ ಏಕಾದಶಮುಖ್ಯ ಗಣೇಶ್ವರರ ಪರಿವಿಡಿದವರೊಡನನಂತ ಗಣಸಂಭ್ರಮದಿಂ ಮೂಡಣದೆಸೆಯೋಲಗ ಮೊಪ್ಪಿರ್ಕುಂ. ೬೨೭

## ತೆಂಕಣ ಸಭಾಸ್ಥಾನ:

ಬಳಿಕ ಬ್ರಹ್ಮನು, ಮುನಿಗಳು, ಕಾಲಾಗ್ನಿರುದ್ರ, ವೀರಭದ್ರ, ಪಿನಾಕಿ ಕಾಲಕಂಠ, ಅಂಘ್ರಿಕರಾಳ, ಕೇಶಕರಾಳ, ಮುಖಕರಾಳ, ನೇತ್ರಕರಾಳ, ಶ್ರೋತ್ರ ಕರಾಳ, ಮುಂಡಮಾಲಾಧರ, ತ್ರಿಶೂಲಿ, ವಿಶ್ವಮಾಲಾಪತಿ, ಅಂಡಾಧಿನಾಥ, ಕಾಲಾಂತಕ, ಲಕುಲೀಶ, ಮಯೂರಾನನರೆಂಬ ಹದಿನೆಂಟು ಮುಖ್ಯಗಣವರರ ಪರಿವಿಡಿದವರೊಡನಸಂಖ್ಯಾತ ಗಣಸಂಕುಳದಿಂ ತೆಂಕಣದೆಸೆಯೋಲಗವೊಪ್ಪು ತ್ತಿರ್ಕುಂ. ೬೨೮

## ಪಡುವಣ ಸಭಾಸ್ಥಾನ :

ಬಳಿಕ ದಂಡಧರ, ದಂಡಪಾದ, ದಂಡಬಾಹು, ಪ್ರಚಂಡ, ಪ್ರಚಂಡಾ ರ್ಚಿತ, ಪ್ರಚಂಡಕರ, ವರಬಲ, ಪ್ರಮಥಬಲ, ಬಲವಿಕರಣ, ಸುಮಾಲ್ಯ,

ಸರ್ವಭೂತದಮನ, ಮನೋನ್ಮನರೆಂಬ ದ್ವಾದಶಮುಖ್ಯಗಣಾಗ್ರಗಣ್ಯರ ಪರಿವಿಡಿದವ ರವರೊಡನಗಣಿತ ಗಣನಿಕರದಿಂ ಪಡುವಣ ದೆಸೆಯೋಲಗವೊಪ್ಪುತ್ತಿರ್ಕುಂ. ೯೨೯

## ಬಡಗಣಸಭಾಸ್ಥಾನ:

ಬಳಿಕ ನಾರಾಯಣನು, ದಿಕ್ಪಾಲಕರು, ಏಕಾದಶರುದ್ರರುಂ,ಅಷ್ಟವಸುಗಳುಂ, ಪ್ರಭಾವ, ಮುಷ್ಕರ, ಆಷಾಡಿ, ಡಿಂಡಿ, ಅಮರೇಶ, ನೈಮಿಷ, ಅನಾಕುಲರೆಂಬ ದ್ವಾದಶ ಮುಖ್ಯದೇವತೆಗಳ ಪರಿವಿಡಿದವರವರೊಡನಪರಿಮಿತ ದೇವತಾ ಸಮೂಹದಿಂ ಬಡಗಣದೆಸೆಯೋಲಗವೊಪ್ಪುತಿಹುದಿಂತು ಪೇಳ್ದ ಶಿವಲೋಕದ ಸಭಾಮಧ್ಯದಲ್ಲಿ ಸಕಲವರಪ್ರದನಾಗಿ ಸರ್ವೇಶ್ವರನಾದ ಸಾಂಬಶಿವನೊಪ್ಪುತ್ತಿರ್ಪಂ. ೬೩೦

## ದೇವತೆಗಳ ತಾರತಮ್ಯ :

ಬಳಿಕೀ ಪೂರ್ವೋಕ್ತ ದೇವತೆಗಳ ತಾರತಮ್ಯ ಕ್ರಮವೆಂತೆಂದೊಡೆ ಭೂಮ್ಯಾದ್ಯಚೇತನಂಗಳಿಂ ಚೇತನಪ್ರಾಣಿಗಳು ವಿಶೇಷವವರಿಂ ಮನುಷ್ಯ ಜಾತಿವಿಶೇಷವವರಿಂ, ದ್ವಿಜರು ವಿಶೇಷವವರಿಂ ಬ್ರಾಹ್ಮಣರು ವಿಶೇಷವವರಿಂ ಮರ್ತ್ಯಗಂಧರ್ವರು ವಿಶೇಷವವರಿಂ ದೇವಗಂಧರ್ವರು ವಿಶೇಷವವರಿಂ ಕರ್ಮ ದೇವತೆಗಳು ವಿಶೇಷವವರಿಂ ಆಜಾನದೇವತೆಗಳು ವಿಶೇಷವವರಿಂ ಸುರಪತಿವಿಶೇಷ ವಾತನಿಂ ಬೃಹಸ್ಪತಿ ವಿಶೇಷವವನಿಂ ಪ್ರಜಾಪತಿವಿಶೇಷವವನಿಂ ಬ್ರಹ್ಮನುವಿಶೇಷ ವಾತನಿಂ ವಿಷ್ಣು ವಿಶೇಷವವನಿಂ ರುದ್ರ ವಿಶೇಷವಾ ರುದ್ರನಿಂ ಸಾಂಬಶಿವನೆನಿಪ ಮಹೇಶ್ವರನೇ ವಿಶೇಷವೆಂದು ಸ್ಮೃತಿ, ಪುರಾಣಸಿದ್ಧಾಂತಮಕ್ಕುಂ. ೬೩೧

## ದೇವತಾ ಪೂಜಾಭೇದ:

ಬಳಿಕಿಲ್ಲಿ ಗುಣಾಭಿಮಾನಿಯಾದ ಸಕಲದೇವತಾ ವಲ್ಲಭನಾದ ರುದ್ರನು, ಗುಣಾತೀತನಾದ ಮಾಯಾವಿಯಾದ ಮಹೇಶ್ವರನೆಂಬೀರ್ವರಿಗೂ ಲಿಂಗಲಕ್ಷಣ ಮಾದ ಏಕಾದಿಕರಣ ಪೂಜೆ ಸಲ್ಪುದರಿಂ ಪ್ರಣವ ಪಂಚಾಕ್ಷರಾದಿ ಮಂತ್ರಂಗಳಾ ಉಭಯ ಪೂಜೆಯಲ್ಲಿಯೂ ಸಮಾನವಹುದು. ಆ ಪೂಜೆ ಪಂಚವಿಧವಹುದು ಅದರಲ್ಲಿ ಕೇವಲ ರುದ್ರಪೂಜೆಯೇ ಕನಿಷ್ಟವೆನಿಸೂದು. ಅವರೀರ್ವರೊಳಗೆ ರುದ್ರ ಪ್ರಧಾನವಾದ ಪೂಜೆಯೇ ಮಧ್ಯಮವೆನಿಸೂದು. ಆ ಶಿವರುದ್ರರ ಸಮಪ್ರಧಾನ ಪೂಜೆಯೆ ಉತ್ತಮಾಧಮವೆನಿಸೂದು. ಕೇವಲ ಶಿವಪ್ರಧಾನವಾದ ಪೂಜೆಯೇ ಮಧ್ಯಮೋತ್ತಮವೆನಿಸೂದು. ಆ ಮಹೇಶ್ವರನ ನಿರುಪಾಧಿಕಮಾದ ಸಚ್ಚಿದಾನಂದ ಪೂಜೆಯೇ ಉತ್ತಮೋತ್ತಮವೆನಿಸೂದು. ಈ ಉತ್ತಮೋತ್ತಮ ಪೂಜೆಯೇ ಶಿವಪ್ರೀತಿಕರಮಕ್ಕುಂ. ಬಳಿಕ ವಹ್ನಿ, ಸೂರ್ಯ, ಇಂದ್ರ, ಬ್ರಹ್ಮ, ವಿಷ್ಣು, ಮೊದಲಾದ ದೇವತೆಗಳಿಗೆ ಶಿವನೊಡನೇಕಾಧಿಕರಣ ಪೂಜೆಯಿಲ್ಲಾಗಿ, ಭಿನ್ನಾಧಿ ಕರಣ, ಭಿನ್ನಮಂತ್ರ, ಭಿನ್ನಪೂಜೆಗಳೇ ಕರ್ತವ್ಯವೆಂದು ಪುರಾಣೋಕ್ತಮಕ್ಕುಂ. ೬೩೨

## ಶಿವಪೂಜೆ ಲಭಿಸೂದಕ್ಕೆ ಕಾರಣ:

ಬಳಿಕ ಅಗ್ನಿ ಸೂರ್ಯೇಂದ್ರಾದಿ ದೇವತಾ ಭಜನೆಯಿಂ ಬ್ರಹ್ಮಪೂಜೆ ದೊರಕೊಂಬುದು. ಬ್ರಹ್ಮಪೂಜೆಯಿಂ ವಿಷ್ಣುವಿನಾರ್ಚನೆ ದೊರೆಕೊಂಬುದು. ವಿಷ್ಣುವಿನರ್ಚನೆಯಿಂ ರುದ್ರಾರಾಧನೆ ದೊರೆಕೊಂಬುದು. ರುದ್ರಾರಾಧನೆಯಿಂ ಶಿವಭಕ್ತಿ ದೊರೆಕೊಂಬುದು. ೬೩೩

## ಶಿವಭಕ್ತಿ ಪ್ರಾಶಸ್ತ್ಯ:

ಶಿವಭಕ್ತಿಯಿಂದವೆ ಇಹಪರ ಭೋಗಂಗಳುಂ, ಪರಾಪರಮುಕ್ತಿಗಳುಂ ಸಿದ್ಧಿಸುತ್ತಿಹವಾಗಿ ಶಿವಭಕ್ತಿಯೇ ಸರ್ವೋತ್ಕರ್ಷವಪ್ಪುದೆಂದು ನಿರ್ಧರಿಸಲ್ವೇಳ್ಪುಂ. ೬೩೪

## ಊರ್ಧ್ವಾಂಡ ಕಟಾಹದ ಲೋಕಪರಿಮಿತಿ:

ಬಳಿಕ್ಕಂತು ಪೇಳ್ದ ಪ್ರಕಾರದಿಂದೆಣಿಸಿ ನೋಡೆ, ಭೂಲೋಕಂ ತೊಡಗಿ ಧ್ರುವಮಂಡಲ ಪರ್ಯಂತಮಾದ ಭುವರ್ಲೋಕವೆ ಹದಿನೈದು ಲಕ್ಷಯೋಜನ ವದರ ಮೇಲೆ ಸ್ವರ್ಲೋಕವೆಂಭತ್ತೈದು ಲಕ್ಷಯೋಜನಮುಭಯಂಗೂಡಿ ಒಂದು ಕೋಟಿಯೋಜನವು. ಆ ಮಹರ್ಲೋಕವೆರಡು ಕೋಟಿಯೋಜನವು. ಆ ಜನರ್ಲೋಕವೆಂಟು ಕೋಟಿಯೋಜನವು. ಆ ತಪೋಲೋಕವೆ ಹನ್ನೆರಡು ಕೋಟಿಯೋಜನವು. ಆ ಸತ್ಯಲೋಕವು ಹದಿನಾರು ಕೋಟಿಯೋಜನವು. ಆ ವಿಷ್ಣುಲೋಕವೆ ನಾಲ್ಕುಕೋಟಿಯೋಜನವು, ಆ ಕುಮಾರಾದಿ ಲೋಕಸಹರುದ್ರ ಲೋಕವಾರು ಕೋಟಿಯೋಜನವು, ಆ ರುದ್ರ ಲೋಕದಿಂ ಬ್ರಹ್ಮಾಂಡದೂರ್ಧ್ವ ಕಟಾಹಾಂತಮಾಗಿ ಒಂದುಕೋಟಿಯೋಜನ ಪ್ರಮಾಣವಹುದು. ಇಂತು ಭೂಮ್ಯಾದಿ ಬ್ರಹ್ಮಾಂಡದೂರ್ಧ್ವ ಕಟಾಹ ಪರಿಯಂತಮಾಗೈವತ್ತು ಕೋಟಿಯೋಜನದಳವಿಯುಕ್ಕುಂ. ಬಳಿಕ್ಕದಃಕಟಾಹಾದಿ ಭೂ ಪೃಷ್ಠ ಪರಿಯಂತಮಾಗೈವತ್ತು ಕೋಟಿಯೋಜನದಳತೆಯಹುದು. ಅಂತು ಉಭಯಂಗೂಡಿ ಬ್ರಹ್ಮಾಂಡಗೋಳಕಂ ನೂರು ಕೋಟಿಯೋಜನ ಪ್ರಮಾಣೋನ್ನತವೆಂದು ವಿವೇಕಿಸಲ್ವೇಳ್ಕುಂ. ೬೩೫

## ಅನೇಕ ಬ್ರಹ್ಮಾಂಡಗಳು—ನಿದರ್ಶನ:

ಬಳಿಕೀ ಪ್ರಕಾರದಿಂ ವಿಚಿತ್ರ ರಚನೆಯುಳ್ಳ ಬ್ರಹ್ಮಾಂಡದೊಳವಳಯದ ಪೂರ್ವಾದಿ ದಿಕ್ಕೆಂಟರೊಳಿಂದ್ರಾದಿ ಲೋಕಪಾಲಾಷ್ಟಕರಿರ್ದದಂ ರಕ್ಷಿಸುತ್ತಿರ್ಪರು. ಇಂತಪ್ಪ ಬ್ರಹ್ಮಾಂಡಂಗಳನಂತ ಕೋಟಿಗಳುಂಟೆಂದು ನಿಶ್ಚೈಸಲ್ವೇಳ್ಕುಂ. ಬಳಿಕಿಲ್ಲಿ ಮಾಯಾತ್ಮರ ಸಂಬಂಧ, ಲಕ್ಷಣ, ಕಾಲ, ತತ್ವವೆಂಬ ಔದುಂಬರ ವೃಷದೊಳೊಂದೇ ಸಮಯದಲ್ಲಿ ಜನಿಸುತ್ತಿರ್ದ, ಜನಿಸಿದ, ಜನಿಸಿ ಕೆಡುತ್ತಿರ್ದ ತನ್ನೊಳೊಂದೊಂ

ದರ ವೃತ್ತಾಂತವನೊಂದೊಂದರಿಯದಿರ್ಪ, ಸಕಲ ಪ್ರಾಣಿಗಳೆಂಬ ಮಸಕ ವಿಸರಂ ಗಳೊಳೆಸೆವ ಅಜಾಂಡಂಗಳೆಂಬ ಫಲಂಗಳಸಂಖ್ಯಾತಂಗಳುಂಟೆಂಬುದುಪಮಾನ ಮಕ್ಕುಂ. ೬೩೬

ಯೋಜನ ಲಕ್ಷಣ :

ಅನಂತರದೊಳೀ ಯೋಜನ ಪ್ರಮಾಣದಿಂದವೆ ಸಮಸ್ತ ತತ್ತ್ವವ್ಯಾಪ್ಯ ವ್ಯಾಪಕಸ್ಥಿತಿ ಮೊದಲಾದವನರಿಯಲ್ತಕ್ಕುದಾಗಿ ಯೋಜನಲಕ್ಷಣಮಂ ಪೇಳ್ವೆ ನದೆಂತೆಂದೊಡೆ : ಎಂಟು ಪರಮಾಣು ಕೂಡಲೊಂದು ತ್ರಸರೇಣುವೆನಿಸುಗುಂ. ಅದೇ ಗವಾಕ್ಷಮಧ್ಯಗತ ಸೂರ್ಯರಶ್ಮಿಯಲ್ಲಿ ತೋರ್ಪ ರಜಸ್ಸೆನಿಸುಗುಂ. ಆ ತ್ರಸ ರೇಣುಗಳೆಂಟಾಗಲೊಂದು ವಾಲಾಗ್ರವೆನಿಸುಗುಂ. ಆ ವಾಲಾಗ್ರವೆಂಟಾಗಲೊಂದು ಲಿಕ್ಷೆ ಯೆನಿಸುಗಂ. ಆ ಲಿಕ್ಷೆ ಎಂಟಾಗಲೊಂದು ಯೂಕವೆನಿಸುಗುಂ, ಆ ಯೂಕವೆಂಟಾಗಲೊಂದು ಯವವೆನಿಸುಗುಂ ಆ ಯವವೆಂಟಾಗಲೊಂದು ಉತ್ತಮಮಾನಾಂಗುಲವೆನಿಸುಗುಂ. ಏಳರಿಂ ಮಧ್ಯಮಮಾನಾಂಗುಲವೆನಿಸುಗುಂ. ಮೂರರಿಂದಧಮ ಮಾನಾಂಗುಲವೆನಿಸುಗುಂ. ಇದೇ ಮಾನಾಂಗುಲದ ವಿವರ ಮಕ್ಕುಂ.

ಬಳಿಕ ಮಾತ್ರಾಂಗುಲವೆಂತೆನೆ : ಕರ್ತೃವಿನ ಮಧ್ಯಮಾಂಗುಲಿಯ ನಡುವಣ ಪರ್ವದ ದೀರ್ಘವೇ ಮಾತ್ರಾಂಗುಲವೆನಿಸುಗುಂ. ಅದಕ್ಕೊಂದು ಕಾಲುಭಾಗೆ ಕಡಿಮೆಯಾಗೆ ಮಧ್ಯಮ ಮಾತ್ರಾಂಗುಲವೆನಿಸಿಕೊಳ್ಗುಂ.

ಇನ್ನು ದೇಹ ಲಬ್ಧಾಂಗುಲಮೆಂತೆನೆ : ತನ್ನಿಂ ಗ್ರಹಿಸಲ್ಪಟ್ಟ ಪ್ರತಿಮೆಯ ದೀರ್ಘ ವನೆ ಆಯಾಯ ತಾಲದಂಗುಲದ ಸಂಖ್ಯೆಯಿಂದೊಂದೊಂದವಯವಕ್ಕಿಷ್ಟಿಷ್ಟು ಭಾಗೆಯೆಂದು ವಿಭಾಗಿಸೂದೇ ದೇಹಲಬ್ಧಾಂಗುಲಮಕ್ಕುಂ. ೬೩೭

ಬಳಿಕ್ಕಲ್ಲಿ ಉಪ್ಪರಿಗೆ ಮೊದಲಾದವನೆ ಮಾನಾಂಗಲದಿಂ ಮಾಡುವುದು. ಕುಂಡ ಮೊದಲಾದವನು ಗೃಹೋಪಕರಣಾದಿಗಳನು ಮಾತ್ರಾಂಗುಲದಿಂ ಮಾಡೂದು ಪ್ರತಿಮೆಯ ಅವಯವನೆ ದೇಹ ಲಬ್ಧಾಂಗುಲಿಯಿಂ ಮಾಡೂದು. ಈ ಪ್ರಕಾ ರದಿಂದಂಗುಲಿ ಭೇದವನರಿವುದು. ಇನ್ನು ಹಸ್ತ ಭೇದವೆಂತೆನೆ: ಪೂರ್ವೋಕ್ತ ಮಾನಾಂಗುಲವು ಇಪ್ಪತ್ತನಾಲ್ಕಾದರೊಂದು ಕಿಷ್ಕುರ್ಹಸ್ತವೆನಿಸೂದು. ಅದು ಇಪ್ಪತ್ತೈದಾದರೆ ಪ್ರಜಾಪತ್ಯ ಹಸ್ತವೆನಿಸುಗುಂ. ಅದು ಇಪ್ಪತ್ತಾರಾದರೆ ಧನುರ್ಮುಷ್ಟಿ ಹಸ್ತವೆನಿಸುಗುಂ. ಅದು ಇಪ್ಪತ್ತೇಳಾದರೆ ಧನುರ್ಗ್ರಹ ಹಸ್ತ ವೆನಿಸಿಕೊಳ್ಗುಂ. ಬಳಿಕಿಲ್ಲಿ ಮಂಚಾದಿಕವನೆ ಕಿಷ್ಕುರ್ಹಸ್ತದಿಂ ಮಾಡೂದು, ಮನೆ ದೇವಾಲಯ ಲಿಂಗಾದಿಗಳನೆ ಪ್ರಜಾಪತ್ಯಹಸ್ತದಿಂ ಮಾಡೂದು, ಪಟ್ಟಣಾದಿಕವನೆ ಧನುರ್ಮುಷ್ಟಿ ಹಸ್ತದಿಂ ಮಾಡೂದು. ಕ್ಷೇತ್ರ ಪ್ರಮಾಣವನೂ, ಯೋಜನವನೂ, ಧನುರ್ಗ್ರ

ಹಸ್ತದಿಂ ಮಾಡೂದು. ಮತ್ತಮಾ ಧನುರ್ಗ್ರಹಸ್ತವು ನಾಲ್ಕಾಗಲೊಂದು ಧನುವೆನಿಸುಗುಂ. ಆ ಧನುವೆರಡಾಗಲೊಂದು ದಂಡವೆನಿಸುಗುಂ. ಆ ದಂಡವೆರಡು ಸಾವಿರಮಾಗಲೊಂದು ಕ್ರೋಶವೆನಿಸುಗುಂ. ಆ ಕ್ರೋಶವೆರಡಾಗಲೊಂದು ಗವ್ಯೂತಿಯೆನಿಸುಗುಂ. ಆ ಗವ್ಯೂತಿಯೆರಡಾಗಲೊಂದು ಯೋಜನವೆಂದು ಪ್ರಮಾಣಿಸಲ್ವೇಳ್ಕುಂ. ೬೩೮

## ಇತಿ ದೇವಲೋಕಸ್ಥಿತಿ ವರ್ಣನಂ

## ಷಷ್ಠಮ ಪರಿಚ್ಛೇದ :

# ಸಪ್ತಮ ಪರಿಚ್ಛೇದ

ಕಂದ ॥ ವಿದಿತವೆನೆ ಕಮಲ ಜನ್ಮಾಂ
ಡದೊಳುಳ್ಳಖಿಳ ಪ್ರಪಂಚಮಂ ಪೇಳಿದೆನಿ ।
ನ್ನದರ ಬಹಿರ್ಭಾಗದ ಸಂ
ಪದಮಂ ಸಾಲ್ಗೊಂಡು ಸರ್ವರರಿವಂತುಸುರ್ವೆಂ ॥

ಅದೆಂತೆಂದೊಡೆ :

ಆವಾತನಿಂದಾವಾತನಧಿಕವಾದ ಜ್ಞಾನ ತೇಜೋಬಲೈಶ್ವರ್ಯಾದಿ ಗುಣ ವಿಶಿಷ್ಟನವನೂರ್ಧ್ವಲೋಕ ಸ್ಥಿತನೆಂಬಾಗಮ ಪ್ರಮಾಣದಿಂದಿಲ್ಲಿಂದಂ ಮೇಲೆ ಪೇಳ್ವ ಭುವನಪತಿಗಳನುತ್ತರೋತ್ತರ ಸುಖ ಭೋಗಿಗಳೆಂದರಿಯಲ್ತಕ್ಕುದಾಗಿ, ಪೂರ್ವೋಕ್ತ ಪಾಂಚಭೌತಿಕ ಬ್ರಹ್ಮಾಂಡವನುಳಿದದರ ಬಹಿರ್ಭಾಗದ ಕೇವಲ ಪೃಥ್ವೀತತ್ವದ ಇಂದ್ರಾದಿ ದಶದಿಕ್ಕಿನೊಳಿರ್ದ, ಇಂದ್ರಾದಿಗಳ್ಗೆ ನಿಯಂತೃಗಳಾಗಿ, ಪರಮೈಶ್ವರ್ಯ ಸಂಪನ್ನರಾಗಿ, ತಮ್ಮೊಡನೆ ವಿಚಿತ್ರ ವೇಷಧಾರಿಗಳಾದ ಮಹಾಪರಾಕ್ರಮಿಗಳಪ್ಪ ನಾನಾ ಶಸ್ತ್ರಪಾಣಿಗಳಾದ, ಗಂಗಾವಾಳುಕ ಸಮಾನ ರುದ್ರರೊಡಗೂಡಿ ತದ್ ಬ್ರಹ್ಮಾಂಡ ರಕ್ಷಕರಾದ ಶತರುದ್ರರ ನಾಮಧೇಯಂಗಳಾವಾವೆಂತೆಂದೊಡೆ: ೬೩೯

ಶತರುದ್ರರ ನಾಮಧೇಯ :

ಕಪಾಲೀಶ, ಅಜ, ಬುದ್ಧ, ವಜ್ರದೇಹ, ಪ್ರಮರ್ದನ, ಪ್ರಭೂತಿ, ಅವ್ಯಯು ಶಾಸ್ತ್ರ, ಪಿನಾಕಿ, ತ್ರಿದಶವಂದಿತರೆಂಬ ದಶರುದ್ರರಿಂದ್ರ ದಿಕ್ಕಿನಲ್ಲಿಹರು.

ಅಗ್ನಿರುದ್ರ, ಹುತಾಶಿ, ಪಿಂಗಲ, ಬಾಧಕ, ಹರ, ಜ್ವಲನ, ದಹನ, ಬಭ್ರು, ಭಸ್ಮಾಂತಕ ಕ್ಷಯಾಂತಕರೆಂಬ ದಶರುದ್ರರಗ್ನಿ ದಿಕ್ಕಿನಲ್ಲಿಹರು.

ಯಾಮ್ಯ,ಮೃತ್ಯುಹರ, ಧಾತೃ, ವಿಧಾತೃ, ಕರ್ತೃ, ಕಾಲ, ಧರ್ಮ, ಅಧರ್ಮ, ಸಂಯೋಕ್ತ, ವಿಯೋಕ್ತರೆಂಬ ದಶರುದ್ರರು ಯಮನ ದಿಕ್ಕಿನಲ್ಲಿಹರು.

ನೈರುತ್ಯ, ಮಾರಣ, ಹಂತ್ರ, ಕ್ರೂರದೃಷ್ಟಿ, ಭಯಾನಕ, ಊರ್ಧ್ವಶೀಷ, ವಿರೂಪಾಕ್ಷ, ಧೂಮ್ರ, ಲೋಹಿತ, ದಂಷ್ಟ್ರಗಳೆಂಬ ದಶರುದ್ರರೆ ನೈರುತ್ಯ ದಿಕ್ಕಿನಲ್ಲಿಹರು.

ಬಲ, ಅತಿಬಲ, ಪಾಶಹಸ್ತ, ಮಹಾಬಲ, ಶ್ವೇತ, ಜಯಭದ್ರ, ದೀರ್ಘಬಾಹು, ಜ್ವಲಾಂತರ, ಬಡಬಾಮುಖಿ, ಭೀಮರೆಂಬ ದಶರುದ್ರರೆ ವರುಣ ದಿಕ್ಕಿನಲ್ಲಿಹರು.

ಶೀಘ್ರ, ಲಘು, ವಾಯುವೇಗ, ಸೂಕ್ಷ್ಮ, ತೀಕ್ಷ್ಣ, ಕ್ಷಯಾಂತಕ, ಪಂಚಾಂತಕ, ಪಂಚಶಿಖಿ, ಕಪರ್ದಿ, ಮೇಘವಾಹನರೆಂಬ ದಶರುದ್ರರೆ ವಾಯವ್ಯ ದಿಕ್ಕಿನಲ್ಲಿಹರು.

ಜಟಾಮುಕುಟಾಧಾರಿ, ನಾನಾರತ್ನಾಧರ, ನಿಧೀಶ, ರೂಪವಾನ್, ಧನ್ಯ, ಸೌಮ್ಯದೇಹ, ಪ್ರಸಾದಕೃತ್, ಪ್ರಕಾಶ, ಲಕ್ಷ್ಮೀವಾನ್, ಕಾಮರೂಪರೆಂಬ ದಶರುದ್ರರೆ ಕುಬೇರ ದಿಕ್ಕಿನಲ್ಲಿಹರು.

ವಿದ್ಯಾಧರ, ಜ್ಞಾನಧರ, ಸರ್ವಜ್ಞ, ವೇದಪಾರಗ, ಮಾತೃವೃತ್ತ, ಪಿಂಗಳಾಕ್ಷ, ಭೂತಪಾಲ, ಬಲಿಪ್ರಿಯ, ಸರ್ವವಿದ್ಯಾ ವಿಧಾತೃ, ಸುಖ ದುಃಖಕರರೆಂಬ ದಶರುದ್ರರೀಶಾನ್ಯ ದಿಕ್ಕಿನಲ್ಲಿಹರು.

ಅನಂತ, ಧೀರ, ಪಾಲಕ, ಪಾತಾಳೇಶ, ವೃಷಭ, ವೃಷಧರ, ಸುವೀರ್ಯ, ಗ್ರಸನ, ಶುಭ, ಲೋಹಿತರೆಂಬ ದಶರುದ್ರರಾ ಬ್ರಹ್ಮಾಂಡದಧೋ ಭಾಗದಲ್ಲಿಹರು.

ಶಂಭು, ವಿಭುಗುಣ, ಅಧ್ಯಕ್ಷ, ತ್ರ್ಯಕ್ಷ, ತ್ರಿದಶವಂದಿತ, ಸಂವಾಹ, ವಿವಾಹ ನಭೋಲಿಪ್ಸು, ವಿಚಕ್ಷಣರೆಂಬ, ದಶರುದ್ರರೂರ್ಧ್ವ ಪ್ರದೇಶದಲ್ಲಿಹರು.

ಬಳಿಕೀ ಪ್ರಕಾರದಿಂದ ಇಂದ್ರಾದಿ ಲೋಕಪಾಲಾಷ್ಟಕರಿಂ ಬ್ರಹ್ಮಾಚ್ಯುತರಿಂ, ದಿಕ್ಪರಿವಿಡಿದು ಪೂಜ್ಯರಾದ ತಮ್ಮ ನಾಮೋಚ್ಚರಣಾರಾಧನೆಗಳಿಂದಿಷ್ಟಾರ್ಥ ಪ್ರದರಾದ, ಸರ್ವಜ್ಞರಾದ, ಶತರುದ್ರರಿಗೆ ಕರ್ತೃವಾದ ವೀರಭದ್ರನಾದೊಡೆ, ೬೪೦

### ಶತರುದ್ರಪತಿ ವೀರಭದ್ರ :

ನೀಲವರ್ಣಮಯ ಶರೀರದಿಂ, ಜಟಾಮುಕುಟದಿಂ, ಏಕಮುಖ ತ್ರಿನೇತ್ರದಿಂ, ದೀಪ್ತದಂಷ್ಟ್ರಂಗಳಿಂ, ಖಡ್ಗ, ಫಲಕ ಚಾಪ ಬಾಣಂಗಳಾಂತ ವಾಮದಕ್ಷಿಣ ಕರಚತುಷ್ಟಯದಿಂ, ವಸ್ತ್ರ, ಗಂಧ, ಮಾಲ್ಯಾಭರಣಾದಿಗಳಿಂದಲಕೃತನಾಗಿ, ಭದ್ರಕಾಳಿ ಸಹಿತನಾಗಿ, ದುಷ್ಟನಿಗ್ರಹ ಶಿಷ್ಟಪ್ರತಿಪಾಲಕನೆನಿಸಿ ಪೃಥುವ್ಯಾದಿ ಸೂಕ್ಷ್ಮಭೂತವರ್ಗದಲ್ಲಿರ್ಪಂ. ೬೪೧

### ತತ್ವಗಳಿಗಭಿಮಾನಿ ರುದ್ರರು :

ಅನಂತರದೊಳಾ ಸ್ಥೂಲರೂಪ ಪೃಥ್ವಿತತ್ವದತ್ತಣಿಂ ದಶಗುಣಾಧಿಕಮಾಗಾವರಿಸಿರ್ದ ಅಪ್ಪುತತ್ವದಲ್ಲಿ ಅಮರೇಶ, ಪ್ರಭಾಸ, ನೈಮಿಷ, ಪುಷ್ಕರ, ಅಷಾಢಿ, ಡಿಂಡಿ, ಭಾರಭೂತಿ, ನಾಕುಲರೆಂಬ ಗುಹ್ಯಾಷ್ಟಕರಿಹರು.

ಮತ್ತಮಾ ಅಪ್ಪುತತ್ವದತ್ತಣಿಂ ದಶಗುಣಾಧಿಕಮಾಗಾವರಿಸಿರ್ದ, ತೇಜಸ್ತತ್ವದಲ್ಲಿ ಹರಿಶ್ಚಂದ್ರ, ಶ್ರೀಶೈಲ, ಕಲ್ಪಮಾನ್ಯ, ಮಾತೃಕೇಶ್ವರ, ಮಹಾಕಾಳ ಮಧ್ಯಮ, ಕೇತಾರ, ಭೈರವರೆಂಬ ಆದಿ ಗುಹ್ಯಾಷ್ಟಕರಿಹರು.

ಮತ್ತಮಾ ತೇಜಸತ್ವದತ್ತಣಿಂ ದಶಗುಣಾಧಿಕಮಾಗಾವರಿಸಿರ್ದ ವಾಯುತತ್ವದಲ್ಲಿ ಗಯೆ, ಕುರುಕ್ಷೇತ್ರ, ನಾಖಲಂಡ, ಖಲ, ವಿಮಲ, ಅಟ್ಟಹಾಸ, ಮಹೇಂದ್ರ, ಭೀಮರೆಂಬ ಗುಹ್ಯಾದ್ಗುಹ್ಯಾಷ್ಟಕರಿಹರು.

ಮತ್ತಮಾ ವಾಯುತತ್ವದತ್ತಣಿಂ ದಶಗುಣಾಧಿಕಮಾಗಾವರಿಸಿರ್ದ ವ್ಯೋಮ ತತ್ವದಲ್ಲಿ ವಸ್ತ್ರಾಪದ, ರುದ್ರಕೋಟಿ, ಅವಿಮುಕ್ತ, ಮಹಾಬಲ, ಭದ್ರಕರ್ಣ, ಗೋಕರ್ಣ, ಸ್ವರ್ಣಾಕ್ಷ, ಸ್ಥಾಣುಗಳೆಂಬ ಪವಿತ್ರಾಷ್ಟಕರಿಹರು. ಬಳಿಂತು ಪೂರ್ವೋಕ್ತ ಲೋಕಪಾಲಾಷ್ಟಕರೊಡಗೂಡಿದ ಈ ಪಂಚಾಷ್ಟಕರಾದ ನಾಲ್ವತ್ತು ಭುವನಪತಿಗಳ್ ಸರ್ವಜ್ಞತ್ವ,ಸರ್ವಕರ್ತೃತ್ವ ಸಹಿತರಾಗಿ ಭೂಲೋಕದೊಳಾಯಾಯ ನಾಮಧೇಯಂಗಳಿಂದವತರಿಸಿ ಸಕಲಲೋಕಾಭಿಮತ ಫಲಪ್ರದಾಯಕರಾಗಿರ್ಪರ್. ೬೪೨

## ಪಂಚಾತನ್ಮಾತ್ರ ರುದ್ರರು :

ಮತ್ತಮಾ ಪೃಥುವ್ಯಾದಿ ಪಂಚಮಹಾಭೂತಂಗಳಿಗೆ ಕ್ರಮದಿಂ ಕಾರಣಮಾದ, ಗಂಧಾದಿ ಪಂಚತನ್ಮಾತ್ರಗಳೆಂಬೈದರಲ್ಲಿ ಪರಿವಿಡಿದು ಮಂತ್ರರೂಪಿ, ಸುಬಾಹು, ಭಾಸುರ, ಸರ್ವವಿತ್, ಅಗಜೇಶ್ವರರೆಂಬ ಪಂಚಭುವನಪತಿಗಳೊಡನೆ, ಗಂಧಾಂಗ, ಜಲೋದರ, ಭಾನುಮಾನ್, ಬಲವತ್ತರ, ಸೂಕ್ಷ್ಮನಾದರೆಂಬ ರುದ್ರರುಗಳಾಕ್ರಮದಿಂದಿಹರು. ೬೪೩

## ಕರ್ಮೇಂದ್ರಿಯ ಜ್ಞಾನೇಂದ್ರಿಯ ರುದ್ರರು :

ಮತ್ತಮಾ ತನ್ಮಾತ್ರೆಗಳಿಂ ಮೇಲೆ ವಾಗಾದಿ ಕರ್ಮೇಂದ್ರಿಯ ಪಂಚಕದಲ್ಲಿ ಕ್ರಮದಿಂ, ಕಾಲದಂಷ್ಟ್ರ, ಪಿಂಗಳಾಕ್ಷ, ರೌದ್ರ, ಜಟಿಲ, ವಿಶಾಲರೆಂಬ ಪಂಚಭುವನಪತಿಗಳೊಡನೆ ದುಂಧುಭಿ, ಸಮಾಧಾನ, ತೂರ್ಣಕ, ರುದ್ರಪ್ರಣವ, ಘನಾನಂದರುಗಳೆಂಬ ರುದ್ರರುಗಳಾ ತರುವಾಯಿಂದಿಹರು.

ಬಳಿಕ ಕರ್ಮೇಂದ್ರಿಯದಿಂ ಮೇಲೆ ಶ್ರೋತ್ರಾದಿ ಜ್ಞಾನೇಂದ್ರಿಯ ಮನಸ್ಸುಗಳೆಂಬಾರರಲ್ಲಿ ಕ್ರಮದಿಂ ಕಾಮರೂಪಿ, ಹುತಾಶನ, ಪ್ರಜಾಪತಿ, ಘೋರಕ, ವಿಧೂಕರ, ಅನುಪಮಗುಣಯುತರೆಂಬಾರು ಭುವನಪತಿಗಳೊಡನೆ,ವ್ಯೋಮಾಚಾರ, ಸರ್ವಾಂಗ, ಪ್ರಕಾಶಕ, ಮಹಾವಕ್ತ್ರ, ನಿಲುಂಪಕ, ಸಂಕಲ್ಪಕರೆಂಬ ರುದ್ರರುಗಳಾ ಪರಿವಿಡಿಯಿಂದಿಹರು. ೬೪೪

## ಅಹಂಕಾರಭುವನ ರುದ್ರರು :

ಬಳಿಕಾ ಗಂಧತನ್ಮಾತ್ರಾದಿ ಮಾನಸಾಂತಮಾದ ಷೋಡಶ ವಿಕಾರಂಗಳಿಗೆ ಕಾರಣಮಾಗಿ, ಪೂರ್ವೋಕ್ತಮಾದಾಕಾಶದತ್ತಣಿಂ ದಶಗುಣಾಧಿಕಮಾಗಾವರಿಸಿರ್ದ

ಅಹಂಕಾರತತ್ವದಲ್ಲಿ ಛಾಗಲಂಡ,ದುರಂಡ,ಹಾರೋಟಿ, ಮಂಡಲೇಶ್ವರ, ಕಾಳಾಂಜನ ಶಂಖಕರ್ಣ, ಸ್ಥಲೇಶ್ವರ, ಸ್ಥೂಲೇಶ್ವರರೆಂಬ ಸ್ಥಾಣ್ವಷ್ಟಕರಿಹರು. ೬೪೫

## ಬುದ್ಧಿತತ್ವ ಗುಣತತ್ವ ರುದ್ರರು :

ಬಳಿಕಹಂಕಾರ ತತ್ವದತ್ತಣಿಂ ದಶಗುಣಾಧಿಕಮಾಗಾವರಿಸಿರ್ದ ಬುದ್ಧಿತತ್ವದಲ್ಲಿ, ಪಿಶಾಚ, ರಾಕ್ಷಸ, ಯಕ್ಷ, ಗಂಧರ್ವ, ಇಂದ್ರ, ಸೌಮ್ಯ, ಪ್ರಜೇಶ, ಬ್ರಹ್ಮರೆಂಬ ದೇವಾಷ್ಟಕರಿಹರು.

ಬಳಿಕಾ ಬುದ್ಧಿತತ್ವದತ್ತಣಿಂ ದಶಗುಣಾಧಿಕ ಮಾಗಾವರಿಸಿರ್ದ ಗುಣತತ್ವದಲ್ಲಿ ಅಕೃತ, ಕೃತ, ಭೈರವ, ಬ್ರಹ್ಮ, ವಿಷ್ಣು, ಕುಮಾರ, ಉಮೆ, ಶ್ರೀಕಂಠರೆಂಬ ಯೋಗಾಷ್ಟಕರಿಹರು. ೬೪೬

## ಪ್ರಕೃತಿತತ್ವ ರುದ್ರರು :

ಬಳಿಕಾ ಗುಣತತ್ವದತ್ತಣಿಂ ದಶಗುಣಾಧಿಕಮಾಗಾವರಿಸಿರ್ದ ಪ್ರಕೃತಿ ತತ್ವದಲ್ಲಿ ಕ್ರೋಧೇಶ, ಚಂಡ, ಸಂವರ್ತ, ಜ್ಯೋತಿಪಿಂಗಳ, ಸೂರಗ, ಪಂಚಾಂತಕ, ಏಕವೀರ, ಶಿಖೇಧರೆಂಬ ಮಹಾದೇವಾಷ್ಟಕರಿಹರು. ೬೪೭

## ಪುರುಷತತ್ವ ರುದ್ರರು ;

ಮತ್ತಮಾ ಪ್ರಕೃತಿ ತತ್ವದತ್ತಣಿಂ ನೂರುಮಡಿಯಾಗಾವರಿಸಿರ್ದ ಪುರುಷ ತತ್ವದಲ್ಲಿ ಸರ್ವೇಂದ್ರಿಯು, ಸರ್ವತನು, ಸರ್ವಾಂತಃಕರಣಾಶ್ರಯರೆಂಬ ರುದ್ರರಿರ್ಪರಲ್ಲಿ ಪುರುಷನಾವೊಡೆ ನಿತ್ಯವ್ಯಾಪಕ ಚೈತನ್ಯಮಯನಾಗಿ, ಕಾರ್ಯರೂಪನಲ್ಲದೊಡಂ ಮುಂದೆ ಪೇಳ್ವ ರಾಗಾದಿ ಕಾಲಾಂತಮಾದ ಪಂಚಕಂಚುಕಯುಕ್ತನಪ್ಪುದರಿಂದುಪಚಾರದಿಂ ತತ್ವಂಗಳೊಳಗೆ ಗಣನೆಗೆ ಬಹನಾಗಿ, ಭುವನಾಶ್ರಯನಲ್ಲು. ಮತ್ತೇನೆನೆ, ಗಂಗೆಯಲ್ಲಿ ಹಳ್ಳಿಯಿದ್ಧಿತ್ತೆಂಬುದರಂತೆ, ಲಕ್ಷಣಾವೃತ್ತಿಯಿಂ ತತ್ವಸಮೀಪದ ಪ್ರಕೃತಿ ಮಸ್ತಕದೊಳಾಭುವನಂಗಳಿಹವೆಂದು ವಿಭಾಗಿಸಲ್ವೇಳ್ಕುಂ. ೬೪೮

## ರಾಗ ವಿದ್ಯಾ ನಿಯತಿತತ್ವ ರುದ್ರರು:

ಬಳಿಕಾ ಪುರುಷತತ್ವದತ್ತಣಿಂ ನೂರುಮಡಿಯಾಗಾವರಿಸಿರ್ದ ರಾಗತತ್ವದಲ್ಲಿ ವಾಮದೇವ, ಭೀಮ, ಉಗ್ರ, ಭಯ, ಸರ್ವೇಶಾನ, ಏಕವೀರ, ಪ್ರಚಂಡ, ಈಶ್ವರ, ಉಮಾಭರ್ತೃ, ಜಯ, ಅನಂತ, ಏಕಶಿವರೆಂಬ ರುದ್ರರುಗಳಿಹರು. ೬೪೯

ಬಳಿಕಾ ರಾಗತತ್ವದತ್ತಣಿಂ ಸಾವಿರಮಡಿಯಾಗಾವರಿಸಿರ್ದ ವಿದ್ಯಾತತ್ವದಲ್ಲಿ ಮಹಾತೇಜ, ಮಹಾದೇವ, ಭವ, ಉದ್ಭವ, ಜ್ಯೋತಿ ಪಿಂಗೇಕ್ಷಣ, ಈಶಾನ, ಭುವನೇಶ್ವರ, ಅಂಗುಷ್ಠಮಾತ್ರರೆಂಬ ರುದ್ರರುಂ; ಸಂಹೃಷ್ಟ, ಸುಹೃಷ್ಟ, ಸುರೂಪ, ರೂಪವರ್ಧನ, ಮನೋನ್ಮನರೆಂಬ ಶಿಷ್ಯಪಂಚಕಂಗೂಡಿ; ಮಹಾವೀರ್ಯ, ಕಲ್ಯಾಣ, ಪಿಂಗಲ, ಬಭ್ರು, ವೀರ, ಪ್ರಭವ, ಮೇಧಾತಿಥಿ, ಮಂದಕ, ದಾಹಕ, ಶಾಸ್ತ್ರಕಾರಕರೆಂಬಾಚಾರ್ಯ ದಶಮಿರ್ಕುಂ. ೬೫೦

ಮತ್ತಮಾ ವಿದ್ಯಾತತ್ವದತ್ತಣಿಂ ಲಕ್ಷಮಡಿಯಾಗಾವರಿಸಿರ್ದ ನಿಯತಿತತ್ವದಲ್ಲಿ ಶೂಲಧರ, ವಟರುದ್ರ, ಬಲಭುಕ್, ನೀಲಲೋಹಿತ, ಜ್ಯೋತಿರೂಪ, ಪರಮೇಶ್ವರ, ಪರಮ, ಪಿಂಗೇಕ್ಷಣ, ವಾಮದೇವ, ಸರ್ವ, ಭವ, ಉದ್ಭವ, ವಜ್ರದೇಹ, ಪ್ರಭು, ಕ್ರಮ, ವಿಕ್ರಮ, ಸುಪ್ರಭರೆಂಬರುದ್ರರುಂ; ಸ್ಥಾಪಕ, ವಾಳುಕಾಕ್ಷ, ಯಮ, ತ್ರಿಶಿರ, ಚಿರಪುಟ್ಟಿಗಳೆಂಬ ಶಿಲ್ಪಿರುದ್ರರುಗಳೈವರುಮಾ ಜಗತ್ತಿನಲ್ಲಿ ಅಸಿ, ಮಸಿ, ಕೃಷಿ, ವಾಣಿಜ್ಯ, ಸೇವನನಿರ್ಮಾಣವೆಂಬ ಪಂಚಕೃತ್ಯ ನಿಯಾಮಕರಾಗಿರ್ಪ್ಪರ್ಗಂ. ೬೫೧

## ಕಾಲತತ್ವ ಕಲಾತತ್ವ ಮಾಯಾತತ್ವ ರುದ್ರರು :

ಮತ್ತಮಾ ನಿಯತಿತತ್ವದತ್ತಣಿಂ ಲಕ್ಷಮಡಿಯಾಗಾವರಿಸಿರ್ದ ಕಾಲತತ್ವದಲ್ಲಿ ಮಾಯಿಾಯ್ಯ, ಹಾಲಾಹಲ, ಕ್ರೋಧನ, ಬಡಭಾಮುಖ, ಉಚ್ಛ್ರಷ್ಟಶಾಚರ, ಚಂಡಮಾತಂಗ ಘೋರರೂಪ, ಶುದ್ಧ, ಬುದ್ಧ, ಪ್ರಬುದ್ಧ, ಪ್ರಶಾಂತ, ಪರಮಾತ್ಮ ಶಿವ, ಸುಶಿವ, ಬಭ್ರು, ಅಕ್ಷರಾಟ್, ಶಂಭುಗಳೆಂಬ ರುದ್ರರಿಹರು.

ಮತ್ತಮಾ ಕಾಲತತ್ವದತ್ತಣಿಂ ದಶಲಕ್ಷಗುಣಾಧಿಕಮಾಗಾವರಿಸಿರ್ದ ಕಲಾ ತತ್ವದಲ್ಲಿ ಗಹನೇಶ, ಸಾಧ್ಯ, ವಿಷ್ಣು, ಹರ, ದಶೇಶಾನ, ಮಹಾವೀರ್ಯ, ತ್ರಿಕಲಾ, ಗೋಪತಿಗಳೆಂಬ ರುದ್ರರಿಹರು.

ಮತ್ತಮಾ ಕಲಾತತ್ವದತ್ತಣಿಂ ಕೋಟಿಗುಣಾಧಿಕಮಾಗಾವರಿಸಿರ್ದ ಮಾಯಾ ತತ್ವದಲ್ಲಿ ಅನಂತ, ತ್ರಿಕಲ, ಗೋಪ್ತ್ರ, ಕ್ಷೇಮಾಶ, ಬ್ರಹ್ಮಪತಿ, ಧ್ರುವ, ತೇಜೋ-ಧಿಪ, ಸಹನೇಶರೆಂಬ ರುದ್ರರಿರ್ಪರ್ಗಂ. ೬೫೨

## ರುದ್ರ ಪ್ರಪಂಚ :

ಮತ್ತಮಿಾ ಪ್ರಕಾರಮಾದ ಪೃಥುವ್ಯಾದಿ ಮಾಯಾಂತಮಾದ ಸಮಸ್ತ ತತ್ವಂ ಗಳಲ್ಲಿರ್ಪರೆಂದು ಪೇಳ್ದ ರುದ್ರರುಗಳ ನಾಮಧೇಯಂಗಳಿಂದವೆ ಅಲ್ಲಲ್ಲಿಯ ಭುವನಂ ಗಳಿರ್ಪವಾ ಭುವನಂಗಳಸಂಖ್ಯಾತಂಗಳಪ್ಪವಿಲ್ಲಿ ಮುಖ್ಯಭುವನಂಗಳೆ ಹವಣಿಸಿ ಪೇಳಲ್ಪಟ್ಟವಾ ಭುವನಂಗಳೆಲ್ಲಂ ವಿಚಿತ್ರನದಿ, ನಂದನ, ಸರಸಿ, ಪುರ, ಪ್ರಾಕಾರ, ದ್ವಾರ, ವೀಥಿ, ಮಂದಿರ, ಪ್ರಾಸಾದಾದಿ ರಚನೆಗಳಿಂ; ಗೀತ ವಾದ್ಯ ನೃತ್ಯಂಗಳಿಂ; ವನಿತಾದಿ ಸಕಲ ಸುಖಭೋಗ ಸಾಧನಂಗಳಿಂ ಸಂಪನ್ನರುಗಳಾಗಿ ಯಜ್ಞ, ದಾನ, ತಪೋವ್ರತ ಸತ್ಕ್ರಿಯಾನಿಷ್ಠರಿಂದ್ಯೆದಲ್ತುಕ್ಕವಾಗಿರ್ಪರ್ಗಂ. ೬೫೩

ಇತಿ ಊರ್ಧ್ವ ಲೋಕಸ್ಥಿತಿ ವರ್ಣನಂ ಸಮಾಪ್ತಿ
ಸಪ್ತಮ ಪರಿಚ್ಛೇದಃ

# ಅಷ್ಟಮ ಪರಿಚ್ಛೇದ

ಕಂದ॥ ಈ ತೆರದಿನಧೋ ಮಾಯಾ
ಜಾತ ಪದಾರ್ಥ ಪ್ರತಾನಮಂ ತಿಳುಪಿದೆನಿ ।
ನ್ನೀತೂರ್ಧ್ವ ಪ್ರಕೃತಿಯಿನಾ
ದಾ ತತ್ತ್ವಾದಿಕವನುಪೂರ್ವೆನರಿವಂತಿಳೆಯೊಳ್ ॥

ಅದೆಂತೆಂದೊಡೆ

## ಶುದ್ಧವಿದ್ಯಾತತ್ತ್ವರುದ್ರರು :

ಪೂರ್ವೋಕ್ತ ಮಾಯಾತತ್ತ್ವದತ್ತಣಿಂ ದಶಕೋಟಿ ಮಿಗಿಲಾಗಾವರಿಸಿರ್ದ ಶುದ್ಧವಿದ್ಯಾತತ್ತ್ವದಲ್ಲಿ : ವಾಮ, ಜ್ಯೇಷ್ಠ, ರುದ್ರ, ಕಾಲ, ಕಲವಿಕರಣ, ಬಲವಿಕರಣ, ಬಲಪ್ರಮಥನ, ಸರ್ವಭೂತದಮನ, ಮನೋನ್ಮನ, ತ್ರಿಗುಣೆ, ಬ್ರಹ್ಮವೇತಾಳ, ಸ್ಥಾಣುಮತಿ, ಅಂಬಿಕೆ, ರೂಪಿಣಿ, ನಂದಿನಿ, ಜ್ವಾಲೆ, ವಿದ್ಯಾಧಿಪತಿಯೆಂಬ ರುದ್ರರುಂ, ಅವರ ಭುವನಂಗಳಿರ್ಪರಲ್ಲಿ ಕಾಮಿಕಾದಿ ವಾತೂಲಾಂತಮಾದ ಇಪ್ಪತ್ತೆಂಟಾಗಮಂಗಳುಂ, ಮನನತ್ರಾಣ ಧರ್ಮವುಳ್ಳ ಜ್ಞಾನ ಶಕ್ತ್ಯಧಿಕಮಾದ ಕ್ರಿಯಾಶಕ್ತಿನ್ಯೂನಮಾದ ಸಪ್ತಕೋಟಿ ಮಹಾಮಂತ್ರಂಗಳಿರ್ಪವವರೊಳಗೆ ಮೂರುವರೆ ಕೋಟಿ ಮಂತ್ರಂಗಳೆ ಪರಮೇಶ್ವರನ ನಿರಧಿಕರಣ ದೀಕ್ಷೆಗೆ ಸಾಧನಂಗಳಾಗಿಹವು. ಮಿಕ್ಕ ಮೂರುವರೆ ಕೋಟಿ ಮಂತ್ರಂಗಳೆ ಗುರುಸ್ವರೂಪನಾದೀಶ್ವರನ ಸಾಧಿಕರಣ ದೀಕ್ಷೆಗೆ ಸಾಧನಂಗಳಾಗಿರ್ಕುಂ.

## ವಿದ್ಯಾತತ್ವ ರುದ್ರರು :

ಮತ್ತಮಾ ವಿದ್ಯಾತತ್ವದಲ್ಲಿಯ ಶ್ರೀಕಂಠ, ಅನಂತ, ಸೂಕ್ಷ್ಮ, ತ್ರಿಮೂರ್ತಿ, ಅಮರೇಶ್ವರ, ಅರ್ಘೀಶ, ಭಾರಭೂತಿ, ತ್ರಿಧೀಶ, ಸ್ಥಾಣುಕ, ಹರ, ಝಂಟೀಶ, ಭೌತಿಕ, ಸದ್ಯೋಜಾತ, ಅನುಗ್ರಹೇಶ್ವರ, ಅಕ್ರೂರ, ಮಹಾಸೇನ, ಕ್ರೋಧೀಶ. ಚಂಡೀಶ, ಪಂಚಾಂತಕ, ಶಿವೋತ್ತಮ, ಏಕರುದ್ರ, ಕೂರ್ಮ, ಏಕನೇತ್ರ, ಅಜೇಶ, ಚತುರಾನನ, ಸರ್ವ, ಸೋಮೇಶ್ವರ, ಲಾಂಗುಲಿ, ದಾರುಕ, ಅರ್ಧನಾರೀಶ್ವರ, ಉಮಾಕಾಂತ,ಆಷಾಡಿ, ಡಿಂಡಿ, ಅತ್ರಿ, ಮೀನ, ಮೇಷ, ಲೋಹಿತ,ಶಿಖಿ, ಖಡ್ಗೀಶ, ಸ್ಥಗಲಂಡ, ದ್ವಿಲಂಡ, ಮಹಾಕಾಳ, ವಾಲಿ, ಭುಜಂಗೇಶ, ಪಿನಾಕೀಶ, ಬಕಶ್ವೇತ, ಭೃಗು, ಲಕುಲೀಶ, ಶಿವ, ಸಂವರ್ತಕರೆಂಬ ಅಕಾರಾದಿ ಕ್ಷಕಾರಾಂತಮಾದೈವತ್ತೊಂದು ಮಾತೃಕಮೂರ್ತಿಗಳಪ್ಪರುದ್ರರುಗಳಾದೊಡೆ; ಪೂರ್ಣೋದರಿ,ವಿರಜೆ, ಶಾಲ್ಮಲಿ, ಲೋಲಾಕ್ಷಿ, ವರ್ತುಳಾಕ್ಷಿ, ದೀರ್ಘನಾಸಿಕೆ, ದೀರ್ಘಮುಖಿ, ಗೋಮುಖಿ ದೀರ್ಘಜಿಹ್ವೆ, ಕುಂಡೋದರಿ,ಅರ್ಧಕೇಶಿ,ವಿಕೃತಮುಖಿ, ಜ್ವಾಲಾಮುಖಿ,ಶ್ರೀಮುಖಿ, ಉಲ್ಕಾಮುಖಿ, ವಿದ್ಯಾಮುಖಿ, ಮಹಾಕಾಳಿ, ಸರಸ್ವತಿ, ಸರ್ವಸಿದ್ಧಿ, ಸಮನ್ವಿತೆ ಗೌರಿ, ತ್ರೈಲೋಕ್ಯವಿದ್ಯೆ, ಮಂತ್ರಶಕ್ತಿ, ಆತ್ಮಶಕ್ತಿ, ಭೂತಮಾತೆ, ಲಂಬೋದರಿ, ದ್ರಾವಿಣಿನಗರಿ, ಖೇಚರಿ, ಮಂಜರಿ, ರೂಪಿಣಿ, ವಿರಾಜೆ, ಕಾಲೋದರಿ, ಪೂತಿನಿ, ಭದ್ರಕಾಳಿ, ಯೋಗಿಣಿ, ಶಂಖಿನಿ, ಘರ್ಜಿನಿ, ಕಾಳರಾತ್ರಿ, ಕುರ್ದನ್ಯೆ, ಕಪರ್ದಿನಿ, ವಾಙ್ಮಯೆ, ಜಯೆ, ಸುಮುಖ್ಯೆಶ್ವರ್ಯೆ, ರೇವತಿ, ಮಾಧವಿ, ವಾರುಣಿ, ವ್ಯಾಪಿನಿ, ರಕ್ಷೋವಧಾರಿಣಿ, ಸಹಜೆ, ಲಕ್ಷ್ಮಿ, ಮಾಯಾನ್ವಿತೆಯುರೆಂಬೈವತ್ತೊಂದು ಶಕ್ತಿಗಳೊಡನೆ ಕ್ರಮದಿಕೂಡಿ ರಕ್ತಾಂಗಚ್ಛವಿಯುಳ್ಳವರಾಗಿ, ಶೂಲ, ಕಪಾಲಪಾಣಿಗಳೆನಿಸಿಕೊಂಡು ತಮ್ಮ ಮೂರ್ತಿಧ್ಯಾನ ನಾಮೋಚ್ಚರಣಮಾತ್ರದಿಂ ಸರ್ವಸಿದ್ಧಿಪ್ರದಾಯಕರಾಗಿರ್ಪರ್. ೬೫೫

## ಈಶ್ವರ ತತ್ವ ಅಷ್ಟವಿದ್ಯೇಶ್ವರರು :

ಮತ್ತಮಾ ವಿದ್ಯಾತತ್ವದತ್ತಣಿಂ ನೂರುಕೋಟಿ ಮಿಗಿಲಾಗಾವರಿಸಿರ್ದ ಈಶ್ವರ ತತ್ವದಲ್ಲಿ ಅನಂತ, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿಗಳೆಂಬ ಭುವನಂಗಳಪ್ಪವವರಲ್ಲಿ, ಕ್ರಮದಿಂದಾಯಾಮ ನಾಮಧೇಯಂಗಳನುಳ್ಳ ಜ್ಞಾನಶಕ್ತಿನ್ಯೂನ, ಕ್ರಿಯಶಕ್ತಿಬಾಹುಳ್ಯಮೊದಲಾದಷ್ಟವಿದ್ಯೇಶ್ವರರಿರ್ಪರವರೊಳಗೆ : ಮೊದಲ ಅನಂತನೆಂಬಾತನೆ ಅಧೋ ಮಾಯಾಕ್ಷೋಭಕನಾಗಿ, ಸಕಲಾತ್ಮರರ್ಗೆ ಭೋಗಮೋಕ್ಷ ಪ್ರದನಾಗಿರ್ಪಂ.

ಮತ್ತಮಾ ಈಶ್ವರ ತತ್ವಮೆಂಬ ಬಿಂದುವಿನ ಅಧಿಕಾರಸ್ತೋಪಾಧಿಯಿಂ; ಪರಶಿವನು ತಾನೆ ಜಗದ್ಧಿತಾರ್ಥಮಾಗಿ ಜ್ಯೋತಿರ್ಮಯ, ಮಂತ್ರಮಯ ಶರೀರದಿಂ;

ಜಟಾಮಕುಟ, ಏಕಮುಖ, ತ್ರಿನೇತ್ರಂಗಳಿಂ; ವರದಾಭಯ ಹಸ್ತಂಗಳಿಂ; ದಿವ್ಯ ವಸ್ತ್ರಾಭರಣ ಗಂಧಮಾಲ್ಯಾದಿಗಳಿಂದಲಂಕೃತನಾಗಿ. ಅಂಬಿಕೆಯೆಂಬ ಶಕ್ತಿ ಸಹಿತನಾಗಿ. ೬೫೬

## ಮಹೇಶ್ವರ ತತ್ವಸ್ವರೂಪ—೨೫ ಲೀಲೆಗಳು :

ಬಳಿಕ ಬೇರೆ ಬೇರೆ ತೋರ್ಪ ಸೋಮಧಾರಿತ್ವ, ಉಮಾಸಮೇತತ್ವ, ವೃಷಭಾರೂಢತ್ವ, ನೃತ್ಯವಿಲಾಸಿತ್ವ, ವಿವಾಹೋತ್ಸಾಹಿತ್ವ, ಭಿಕ್ಷಾಟನತ್ವ, ಕಾಮಾರಿತ್ವ, ಕಾಲಾರಿತ್ವ, ಚಕ್ರಪ್ರಧಾನರೂಪತ್ವ, ತ್ರಿಪುರಾರಿತ್ವ, ಜಲಂಧರಾರಿತ್ವ, ಅಜಾರಿತ್ವ, ವೀರಭದ್ರಾವತಾರಿತ್ವ, ಹರಿಧ್ವಂಸಿತ್ವ, ಅರ್ಧನಾರಿತ್ವ, ಕಿರಾತರೂಪತ್ವ, ಕಂಕಾಳಧಾರಿತ್ವ, ಚಂಡೇಶಾನುಗ್ರಹತ್ವ, ವಿಷಾಪಹಾರಿತ್ವ, ವಿಘ್ನೇಶ್ವರ ಪ್ರದಾಭಿಮುಖತ್ವ, ಉಮಾಕುಮಾರ ಸಹಿತತ್ವ, ಏಕಪಾದತ್ವ, ಸುಖಪ್ರದತ್ವ, ದಕ್ಷಿಣಾಮೂರ್ತಿಸ್ವರೂಪತ್ವ, ಮಹಾಲಿಂಗ ಸ್ವರೂಪತ್ವಂಗಳೆಂಬ ಪಂಚವಿಂಶನ್ಮೂರ್ತಿ ಲೀಲಾಧರನೆನಿಸಿ, ಸಕಲನು, ಅಧಿಕಾರಿ, ಅಧೀಶ್ವರನು, ಪ್ರವೃತ್ತನು, ಪ್ರಭಾವನುಮೆನಿಸಿಕೊಂಡು ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳಂ ಮಾಡುತ್ತ ತನ್ನ ಧ್ಯಾನ ಪೂಜಾಸ್ಥಿತರ್ಗೆ ಭೋಗಮೋಕ್ಷಪ್ರದನಾಗಿ ಮಾಹೇಶ್ವರ ತತ್ವವೆನಿಸಿಕೊಳ್ಳುತಿರ್ಪಂ. ೬೫೭

## ಸದಾಶಿವ ತತ್ವಸ್ವರೂಪ :

ಮತ್ತಮಾ ಈಶ್ವರತತ್ವದತ್ತಣಿಂ ಸಹಸ್ರಕೋಟಿ ಮಿಗಿಲಾಗಾವರಿಸಿರ್ದ ಸದಾಶಿವ ತತ್ವದಲ್ಲಿ, ನಿವೃತ್ತಿ, ಪ್ರತಿಷ್ಠೆ, ವಿದ್ಯೆ, ಶಾಂತಿ, ಶಾಂತ್ಯಾತೀತೆ, ಪವಿತ್ರಾಂಗ, ಸಾದಾಖ್ಯ, ಧ್ವನಿಪತಿಗಳೆಂಬ ಭುವನಂಗಳಿರ್ಪವವರಲ್ಲಿ ; ಜ್ಞಾನ, ಕ್ರಿಯಾ, ಶಕ್ತಿ ಸಮಾನರಾದ ನಿತ್ಯಸುಖಿಗಳಾದ ಅಣುಸದಾಶಿವರಿರ್ಪರಾ ಸದಾಶಿವತತ್ವವೆಂಬ ಬಿಂದುವಿನ ಭೋಗಾಸನೋಪಾದಿಯಿಂ ಪರಶಿವನು ತಾನೆ ಯೋಗಿಗಳ ಧ್ಯಾನಪೂಜಾರ್ಥಮಾಗಿ ಸ್ಫಟಿಕವರ್ಣಮಯ ಶರೀರದಿಂ;ಪಂಚಜಟಾಮಕುಟಂಗಳಿಂ ;ಚಂದ್ರಕಲೆಯಿಂ; ಪಂಚಮುಖ, ಪಂಚದಶಲೋಚನಂಗಳಿಂ; ಶೂಲ, ಪರಶು, ಖಡ್ಗ, ಅಭಯಂಗಳನುಳ್ಳ ದಕ್ಷಿಣ ಪಂಚಹಸ್ತಂಗಳಿಂ ; ಸರ್ಪ, ಪಾಶ, ಅಂಕುಶ, ಗಂಟೆ, ಅಗ್ನಿಗಳನುಳ್ಳ ವಾಮಪಂಚಕರಂಗಳಿಂ ; ಸರ್ವಲಕ್ಷಣ ಸಂಪನ್ನನಾಗಿ, ದಿವ್ಯವಸ್ತ್ರಾಭರಣ ಗಂಧಮಾಲಾದಿಗಳಿಂದಲಂಕೃತನಾಗಿ, ಮನೋನ್ಮನಿಯೆಂಬ ಶಕ್ತಿಸಹಿತನಾಗಿ;ಸದ್ಯೋಜಾತಾದಿ ಮೂವತ್ತೆಂಟು ಕಳಾನ್ವಿತನೆನಿಸಿ ; ಕರ್ತೃಸಾದಾಖ್ಯ, ಕರ್ಮಸಾದಾಖ್ಯ, ಮೂರ್ತಿಸಾದಾಖ್ಯ ಅಮೂರ್ತಿಸಾದಾಖ್ಯ, ಶಿವಸಾದಾಖ್ಯವೆಂಬ ಪಂಚಮೂರ್ತಿ ಭೇದಂಗಳಂಧರಿಸಿ; ಸಕಲ, ನಿಷ್ಕಲ, ಭೋಗಿ, ಅಭೋಗಿ, ಉದ್ಯುಕ್ತನು, ಅಮೂರ್ತಿಯೆನಿಸಿಕೊಂಡು, ಮೂರ್ತಿಯೆನಿಸಿಕೊಂಡು ತನ್ನ ಧ್ಯಾನ ಪೂಜಾನ್ವಿತರ್ಗೆ ಧರ್ಮ ಅರ್ಥಕಾಮ, ಮೋಕ್ಷಾದಿಗಳೆಂಬ ಚತುರ್ವಿಧ ಪುರುಷಾರ್ಥಗಳಂ ಕೊಡುತ್ತ ಸದಾಶಿವ ತತ್ವವೆನಿಸಿಕೊಳುತ್ತಿರ್ಪಂ. ೬೫೮

ಶಕ್ತಿತತ್ತ್ವ :

ಮತ್ತಮಾ ಸದಾಶಿವ ತತ್ವದತ್ತಣಿಂದೊಂದರ್ಬುದ ಮಿಗಿಲಾಗಾವರಿಸಿರ್ದ ಶಕ್ತಿತತ್ವದಲ್ಲಿ ಇಂದಿಕೆ, ದೀಪಿಕೆ, ರೋಚಿಕೆ, ಮೋಚಿಕೆ, ಊರ್ಧ್ವಗಾಮಿ, ವ್ಯೋಮರೂಪೆ, ಭೋಗಿಗಳಾದ ಅಪರ ಮುಕ್ತರಾದ ಶಿವರುಗಳಿರ್ಕುಂ ೬೫೯

ಶಿವತತ್ತ್ವ :

ಮತ್ತಮಾ ಶಕ್ತಿತತ್ವದತ್ತಣಿಂದಸಂಖ್ಯಾತ ಮಿಗಿಲಾಗಾವರಿಸಿರ್ದ ಪರಶಿವಂಗೆ ನಿತ್ಯಾಧಿಷ್ಟೇಯಮಾದ ಶಿವತತ್ವಮೆನಿಸಿಕೊಂಬ ಬಿಂದುವಾದೊಡೆ : ಪರಿಪೂರ್ಣ ಪರಂಜ್ಯೋತಿಸ್ವರೂಪಮಾಗಿರ್ಪುದಾ ಬಿಂದುವೆಂಬ ಲಯಾವಸ್ಥೋಪಾದಿಯಿಂ. ಪರಶಿವನು ತಾನೇ ಶಿವ, ಪರಾತ್ಪರ, ಸೂಕ್ಷ್ಮ, ನಿತ್ಯ ಸರ್ವಗತ, ಅವ್ಯಯ ಅನಿಂದಿತ, ಅನೌಪಮ್ಯ, ಅಪ್ರಮಾಣ, ಅನಾಮಯಮೆಂಬ ದಶನಾಮಧೇಯಂಗಳಿಂ; ಪರ, ಗೂಢ, ಶರೀರಸ್ಥ ಲಿಂಗಕ್ಷೇತ್ರ, ಅನಾದಿವತ್ತೆಂಬ ಪಂಚಸಂಜ್ಞೆಯನುಳ ಲಿಂಗಸ್ವರೂಪನೆನಿಸಿ; ನಿಷ್ಕಲನು, ಲಯಿ, ಶಕ್ತನು, ಈಶನು, ತತ್ಸಮೆನಿಸಿಕೊಂಡು ಸರ್ವಕಾರಣಕ್ಕೆ ತಾನೆ ಮೂಲಕಾರಣನಾಗಿ ಶಿವತತ್ವಮೆನಿಸಿಕೊಳುತ್ತಿರ್ಕುಂ. ೬೬೦

ಷಡಂಗ ಸ್ವರೂಪಿಣಿ ಚಿಚ್ಛಕ್ತಿ :

ಮತ್ತಮಾ ಬಿಂದುವನೊಳಕೊಂಡು ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿ-ಸಿದ್ಧ ಬೋಧತ್ವ, ಸ್ವತಂತ್ರತ್ವ, ಅಲುಪ್ತ ಶಕ್ತಿತ್ವ, ಅನಂತಶಕ್ತಿತ್ವಮೆಂಬ ಷಡಂಗ ಸ್ವರೂಪಿಣಿಯಾಗಿ ಪರಮಪ್ರಕಾಶಮಾದ ಚಿಚ್ಛಕ್ತಿಯಾದೊಡೆ ಪರಶಿವಂಗೆ ಸಾಕ್ಷಾಚ್ಛರೀರೇಂದ್ರಿಯಾಂತಃಕರಣಾಶ್ರಯಾದಿಕಂ ತಾನೆನಿಸಿ, ಅಗ್ನಿ-ಅಗ್ನಿಯೂಷ್ಮದಂತೆ, ಸೂರ್ಯ-ಸೂರ್ಯಕಿರಣದಂತೆ, ಪರಶಿವನೊಡನೆ ತಾದಾತ್ಮ್ಯ, ಸಂಬಂಧದಿಂದೆಸೆದು ತಾನೊಂದೆಯಾದೊಡಂ, ಜ್ಞಾತೃ ಕರ್ತೃತ್ವಾದಿ ವ್ಯಾಪಾರೋಪಾಧಿ ಭೇದದಿಂ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ, ವಾಮೆ, ಜೇಷ್ಟೆ, ರೌದ್ರಿ, ಕಾಲಿ, ಕಲವಿಕರಣೆ, ಬಲವಿಕರಣೆ ಬಲಪ್ರಮಥಿನಿ ಸರ್ವಭೂತದಮನೆ, ಮನೋನ್ಮನಿಯೆಂಬಿವು ಮೊದಲಾದನೇಕ ನಾಮಧೇಯಂಗಳನುಳ್ಳುದೆನಿಸಿ ಭಕ್ತವತ್ಸಲೆಯಾಗಿರ್ಕುಂ. ೬೬೧

ಸರ್ವಾಶ್ರಯ ಶ್ರೀಶಂಭುಲಿಂಗ :

ಮತ್ತಮಾ ಚಿಚ್ಛಕ್ತಿಯೆಂಬ ತೇಜೋಮಂಡಲ ಮಧ್ಯದಲ್ಲಿ ಸತ್ಯ, ಶುದ್ಧ ಸ್ವಯಂಪ್ರಕಾಶ ಚಿನ್ಮಾತ್ರ ಸ್ವರೂಪಮಪ್ಪ ಶ್ರೀಗುರು ಶಂಭುಲಿಂಗಮೊಪ್ಪುತ್ತಿರ್ಕುಂ.

ಬಳಿಕಿಂತು ಪೇಳ್ದ ಸಕಲ ದೇಹಾದಿ ವಿಷಯಂಗಳೇ ಕಾಲಾಗ್ನಿವೊದಲಾದ ಭುವನಂಗಳನಾಶ್ರೈಸಿಹವು, ಆ ಭುವನಂಗಳೇ ಭೂಮ್ಯಾದಿ ತತ್ವಂಗಳನಾಶ್ರೈಸಿಹವು. ಆ ತತ್ವಂಗಳೇ ನಿವೃತ್ಯಾದಿ ಕಲೆಗಳನಾಶ್ರೈಸಿಹವು. ಆ ಕಲೆಗಳೇ ಬಿಂದುವನಾಶ್ರೈಸಿಹವು. ಆ ಬಿಂದುವೇ ಚಿಚ್ಛಕ್ತಿಯನಾಶ್ರೈಸಿಹುದು. ಆ ಚಿಚ್ಛಕ್ತಿಯೇ ಶ್ರೀಗುರುಶಂಭುಲಿಂಗವನಾಶ್ರೈಸಿಹುದು.ಆ ಶಂಭುಲಿಂಗವೇ ಸರ್ವಾಶ್ರಯಂ ತಾನಾಗಿ ತಾನೊಂದನಾಶ್ರೈಸದೆ ನಿರ್ವಿಕಾರ ಸ್ವರೂಪದಿಂ, ಸರ್ವಾತ್ಮರ್ಗೆ ಸುಖಕರಮಾಗಿ ವಿರಾಜಿಸುತ್ತಿರ್ಕುಂ. ೬೬೨

ಇತಿ ಶುದ್ಧ ಭುವನಸ್ಥಿತಿ ವರ್ಣನಂ
ಅಷ್ಟಮ ಪರಿಚ್ಛೇದ :

# ನವಮ ಪರಿಚ್ಛೇದ

ಕಂದ॥

ಇಂತಖಿಳ ಭುವನ ಶುದ್ಧಿ
ಯಂ ತಿಳುಪಿದೆನಿನ್ನು ಜೀವರಾ ಭುವನವನೋ ।
ರಂತೆಯಿದ್ದು ಕರ್ಮಫಲವಂ
ಸಂತತಮನುಭವಿಸುವಂದಮಂ ವಿವರಿಸುವೆಂ॥

ಅದೆಂತೆಂದೊಡೆ ।

## ಮೂಢತ್ವದಿಂ ನಾಸ್ತಿಕ್ಯಬುದ್ಧಿ ;

ಅನ್ನೆಬರಮೀಲೋಕದಲ್ಲಿ ಆತ್ಮಾನಾತ್ಮ ವಿವೇಕ ಶೂನ್ಯರಾದ ಮೂಢ ಜನಂಗಳಾದೊಡೆ, ಪ್ರತ್ಯಕ್ಷಮಾದುದನೆ ಒಡಂಬಟ್ಟು ಅನುಮಾನಾಗಮಾದಿ ಪ್ರಮಾಣಂಗಳನುದಾಸೀನಂ ಮಾಡಿ, ನಾನು ಹ್ರಸ್ವನು, ನಾನು ದೀರ್ಘನು, ನಾನು ಕೆಂಚನು, ನಾನು ಬಡವಾದೆನು, ನಾನು ತೋರವಾದೆನೆಂಬಿವು ಮೊದಲಾದ ತಮ್ಮನುಭವಂಗಳಿಂ ಬಳಿಕೀ ದೇಹಮಂ ಸೀಳಿನೋಡಿದಡೆಯುಂ ಒಳಗೊಬ್ಬಾತ್ಮನಂ ಕಾಣಬಾರದೆಂಬಿವು ಮೊದಲಾದ ಯುಕ್ತಿಗಳಿಂದವೂ, ಆ ದೇಹವೇ ಆತ್ಮನೆಂದು ಬಗೆದು, ಬೆಳಗುತ್ತಿರ್ದ ದೀಪಂ ಕೆಟ್ಟುಮೇಲದಕ್ಕೆ ಮರಳಿತೋರ್ಕೆಯಿಲ್ಲದಂತೆ, ದೇಹವಳಿದಡೆ ಬೇರೊಬ್ಬಾತ್ಮನಿಲ್ಲಾಗಿ ಸ್ವರ್ಗ ನರಕಗಳನೆಯ್ದಿ ಮರಳಿ ಜನಿಸುವತನವಿಲ್ಲ. ಅದರಿಂ ದೇಹವೇ ಆತ್ಮನು, ಮರಣವೇ ಮೋಕ್ಷ, ಸುಖವೇ ಸ್ವರ್ಗ, ದುಃಖವೇ ನರಕ ಇಂತಲ್ಲದೆ ಬೇರೊಂದು ತೆರನಿಲ್ಲಾಗಿ, ವಿಧಿ ನಿಷೇಧ, ಪುಣ್ಯ ಪಾಪವಿಲ್ಲವೆಂದು ನಾಸ್ತಿಕ ಬುದ್ಧಿಯಿಂ ಗಳಹುತ್ತಿರ್ಪರ್. ಅದಕ್ಕೆ ಪರಿಹಾರಮೆಂತೆನೆ. ೭೭೩

ವಿಚಾರದಿಂದ ಆಸ್ತಿಕ್ಯ ಸಿದ್ಧಿ :

ಲೋಕದೊಳೊಂದರೊಳೊಂದಿಲ್ಲದ ಬಾಲ್ಯ, ಯೌವನ, ವಾರ್ಧಿಕ್ಯಂಗಳೆಂಬ ನಾನಾವಸ್ಥೆಯನೆಯ್ದುವೀ ದೇಹದೊಳಾತ್ಮನೋರ್ವನೆಂಬುದು ಬಾಲ್ಯದಲ್ಲನುಭವಿಸಿರ್ದ ಅರ್ಥಮಂ ವಾರ್ಧಿಕ್ಯದಲ್ಲಿ ಸ್ಮರಿಸುತ್ತಿರ್ಪುದರಿಂದನುಭವಿತೃ, ಸ್ಮರ್ತೃವೊಬ್ಬನೆಯಕ್ಕುಮದಾಗಿ, ಪ್ರತ್ಯಭಿಜ್ಞಾನ ಪ್ರಮಾಣಸಿದ್ಧಮಪ್ಪುದೆಂತಂತೆ. ೬೬೪

ಪೂರ್ವದಲ್ಲಿ ಹೋದ, ಮುಂದೆ ಬರವರಲುಳ್ಳ ಶರೀರಂಗಳಲ್ಲಿಯೂ ಆತ್ಮನೊಬ್ಬನೇ ಎಂಬುದು, ಮುನ್ನಲಿವಂ ಪುಣ್ಯಾಧಿಕನು, ಮುನ್ನಲೀತಂ ಪಾಪಿಷ್ಟನೆಂದು ಲೋಕ ಪ್ರಸಿದ್ಧಮಾದ ಸುಖ ದುಃಖ ತಾರತಮ್ಯದಿಂದರಿಯಲ್ತಕ್ಕುದಾಗಿಯುಂ; ಆಗ ಪುಟ್ಟಿದ ಕರು ತಾಯಮೊಲೆಯುಂಬ ಪೂರ್ವ ಸಂಸ್ಕಾರಂ ದೃಷ್ಟಮಪ್ಪುದಾಗಿಯುಂ; ಮೃತರಾಗಿ ಕೂಡಲೇ ಚೇತನಂಬಡೆದು ಯಮಲೋಕಾದಿಗಳಲ್ಲಿ ತಮಗಾದಬಾಧೆ ಮೊದಲಾದವರ ಗುರುಹುದೋರ್ಪವರಂ ಕಾಣ್ಬವಾಗಿಯುಂ; ರತಿಕಾಮ, ಬಲಿಕಾಮ, ಹಂತುಕಾಮಾದಿ ಗ್ರಹಾವಿಷ್ಟರಂ ಮಂತ್ರವಾದಿಗಳು ನುಡಿಸೆ ಮುನ್ನ ನಾವೀ ಪ್ರಕಾರದವರು, ಈಗಳು ಇಂತಾದೆವಿನ್ನು ನಾವಾವ ಪ್ರಕಾರವವಪ್ಪುವೆಂದು ತಮ್ಮ ಪೂರ್ವಾಪರ ಸ್ಥಿತಿಗಳಂ ಪೇಳ್ವ ಬ್ರಹ್ಮರಾಕ್ಷಸ, ಭೂತ, ವೇತಾಳರ ಮಾತುಗೇಳ್ವವಾಗಿಯುಂ; ಬಳಿಕೀ ದೇಹೋತ್ಪತ್ತಿಯೆಂಬುದು ಪೂರ್ವಜನ್ಮದಲ್ಲಿ ಕರ್ತೃಮಾಡಿದ ಕರ್ಮಾಧೀನದಿಂದ ಈಗಳು ಆತನ ಭೋಗ ಸಾಧನಮಾಗಿಯೆ ಜನಿಸಿತ್ತೆಂಬುದನೊಡಂಬಡದೆ, ತಾನೇಯಾಯಿತ್ತೆನೆ, ಕಾರಣಮಿಲ್ಲದೆ, ಸಕಲ ಕಾರ್ಯಮಿಂತಾಗಬೇಕೆಂಬ ಅಕೃತಾಭ್ಯಾಗಮರೂಪ ಬಾಧೆಯುಂಟಾಗಿಯುಂ, ಬಳಿಕ ಮುಳ್ಳಿಗೆ ಮೊನೆ, ಕೋಗಿಲೆಗೆ ಸುಸ್ವರ ನೈಜಮಾದಂತೆ ಪುರುಷನ ವೀರ್ಯಕ್ಕೆ ದೇಹಮಹುದೇ ಸ್ವಭಾವಮೆಂತೆಂದೊಡೆ, ದಿನದಿನದಲ್ಲಿ ವ್ಯರ್ಥಮಾಗಿ ಪೋಗುವ ವೀರ್ಯದಿಂದದು ಘಟಿಸದಾಗಿಯುಂ, ಬಳಿಕ, ಲೋಕದಲ್ಲಿ ಸರ್ವಜನವೆಲ್ಲಂ ಬಹು ಪ್ರಯಾಸದಿಂ ಮಾಳ್ಪ ಯಜ್ಞ, ದಾನ, ವ್ರತೋಪಾಸನಾದಿ ಪುಣ್ಯಫಲಮಂ ಮೇಲನುಭವಿಸುವಾತನಿಲ್ಲದೊಡೆ, ಕೃತನಾಶಮೆಂಬ ದೋಷಮುಂಟಾಗಿಯುಂ, ಬಳಿಕ ನನ್ನಮನೆ, ನನ್ನಧನಮೆಂಬಲ್ಲಿಂತಂತೆ, ನನ್ನ ದೇಹಮೆಂಬಲ್ಲಿಯೂ, ದೇಹದೇಹಿಗಳ ಭೇದಮಂ ಸೂಚಿಪ ಮುಕ್ತಿಯುಂಟಾಗಿಯುಂ, ಬಳಿಕ ದೇಹಮಾತ್ಮನಲ್ಲ ಭೂತಕಾರ್ಯಮಾದ ಕಾರಣಮಾಗಿ ಘಟದಂತೆಂಬನುಮಾನಮುಂಟಾಗಿಯುಂ, ಬಳಿಕ ಶಾಸ್ತ್ರೋಕ್ತಮಾದ ತುಲಾಭಾರಮೆಂಬುದುಂಟಾಗಿ, ದೀಕ್ಷೆ ಪಡೆದಾತಂಗೆ ಮಂತ್ರಸಂಸ್ಕಾರದಿಂ ಪಾಪಕ್ಷಯಂ ಪ್ರತ್ಯಕ್ಷಮಪ್ಪುದಂತೆ, ಚಂದ್ರ ಸೂರ್ಯಗ್ರಹಣಾದಿಗಳಂ ಪೇಳ್ವಶಾಸ್ತ್ರಂ ತಪ್ಪದಂತೆ, ದೇಹಾನ್ಯನಾತ್ಮನೆಂಬಾಗಮ ಪ್ರಮಾಣದಲ್ಲಿ ಪುಸಿಪೋರ್ದದಾಗಿಯುಂ, ದೇಹ ವಿಲಕ್ಷಣನಾದೋರ್ವಾತ್ಮನುಂಟೆಂಬುದೇ ಸಿದ್ಧಮಕ್ಕುಂ. ೬೬೫

## ಪಿತೃಯಾನ-ಸ್ವರ್ಗಲೋಕ ಪ್ರಾಪ್ತಿ :

ಮತ್ತಮಾ ದೇಹಾನ್ಯಾತ್ಮನು ನಿತ್ಯವ್ಯಾಪಕ ಚೈತನ್ಯರೂಪನಾದೊಡಂ, ತನ್ನ ಅಜ್ಞಾನ ಬಲದಿಂ ಕರ್ಮಾಧೀನದಿಂ ಈಶ್ವರಪ್ರೇರಣೆಯಿಂ ಘಟಾಕಾಶದಂತೆ ಸೂಕ್ಷ್ಮ ಶರೀರದೆಡೆಯಾಟವೆ ತನ್ನಡೆಯಾಟವಾಗಿ, ಸಕಲ ಲೋಕದಲ್ಲಿಯು ಸುಖ ದುಃಖಂಗಳಂ ಮುಕ್ತಿಯಪ್ಪನ್ನಬರಮನುಭವಿಸುತ್ತಿರ್ಪನೆಂಬುದೇ ಸತ್ಯವದೆಂತೆಂದೊಡೆ : ಕರ್ಮಭೂಮಿಯೆನಿಸುವೀ ಲೋಕದಲ್ಲಿ ಅರವೆ, ಕೂಪ, ತಟಾಕಾದಿ ಪೂರ್ತವೆಂಬ ಪೆಸರನುಳ್ಳ ಪುಣ್ಯವಿಶೇಷದಲ್ಲಿ ತತ್ಪರರಾದ ಲೌಕಿಕರ್ಗೆಯೂ, ಜ್ಯೋತಿಷ್ಟೋಮ, ಅಶ್ವಮೇಧಯಾಗಾದಿಷ್ಟವೆಂಬ ಪೆಸರನುಳ್ಳ ಕರ್ಮನಿಷ್ಟರ್ಗೆಯೂ; ವಾಮ ನಾಸಾಪುಟದ ಈಡೆಯೆಂಬ ನಾಡಿಮಾರ್ಗದಿಂ ಪ್ರಾಣತ್ಯಾಗವಾಗೆ, ಮೊದಲು ಧೂಮವನೆಯ್ದಿ, ಧೂಮದಿಂ ರಾತ್ರಿ, ರಾತ್ರಿಯಿಂ ಕೃಷ್ಣಪಕ್ಷ, ಆ ಕೃಷ್ಣ ಪಕ್ಷದಿಂ ದಕ್ಷಿಣಾಯನ, ಆ ದಕ್ಷಿಣಾಯನದಿಂ ಸಂವತ್ಸರ, ಆ ಸಂವತ್ಸರದಿಂ ಪಿತೃ ಲೋಕ, ಆ ಪಿತೃಲೋಕದಿಂದಾಕಾಶ, ಆ ಆಕಾಶದಿಂ ಚಂದ್ರ, ಆ ಚಂದ್ರನಿಂದಡರಿ ಮೇಲೀಕ್ರಮದಿಂ ಸ್ವರ್ಗಲೋಕ ಪ್ರಾಪ್ತಿಯಕ್ಕುಂ. ೬೬೬

## ಪುಣ್ಯಕ್ಷಯದಿಂ ಪುನರಾವೃತ್ತಿ -ಮಲೋತ್ಪತ್ತಿ :

ಮತ್ತಮಾ ಸ್ವರ್ಗದೊಳಿಂದ್ರನ ಸಾಲೋಕ್ಯ ಸಾಮಿಪ್ಯಾದಿ ಪದಸ್ಥರಾಗಿ, ಬಳಿಕಲ್ಲಿ, ಪ್ರಿಯವಿಷಯ ಭೋಗವೋಕ್ಷಕ್ಷಯ ದುಃಖ, ಅನ್ಯರತಿಶಯ ಸುಖಮಂ ಸೈರಿಸದ ದುಃಖ, ಪತನಭಯ ದುಃಖವೆಂಬ ದುಃಖತ್ರಯಂ ಬಂದು ಬಂದಡಿಗಡಿಗೆ ಮುಸುಕುತಿರ್ದ ವನಿತಾದಿ ಮಹಾಸುಖ ಭೋಗವನುಂಡು ತೀರೆ, ಪುನರಾವೃತ್ತಿ ಘಟಿಸುವ ಸಮಯದಲ್ಲಿಯು, ಮೊದಲು ಗಗನವಾ ಗಗನದಿಂ ವಾಯುವಾ ವಾಯುವಿನಿಂಧೂಮವಾ ಧೂಮದಿಂ ಮೇಘವಾ ಮೇಘದಿಂ ವೃಷ್ಟಿಯಾ ವೃಷ್ಟಿಯಿಂ ಶಾಲ್ಯಾದ್ಯನ್ನವ, ಆ ಅನ್ನ ರೂಪದಿಂದೀಕ್ರಮದೊಳೆಯ್ದಿ ಬರೆ, ಬಳಿಕಾ ಪಂಚಭೂತಾತ್ಮಕವಾದನ್ನವೆ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಹ್ಯ, ಪಿಚ್ಛಲ, ಪಾನೀಯವೆಂದು ಷಡ್ವಿಧಮಾಗಿ ರ್ಪವದನೆ ಜಾಯಾಪತಿಗಳು ಭುಂಜಿಸಲದಾದೊಡೆ, ಉದರಾಗ್ನಿಯಿಂಪಚಿಸಿ ಕಿಟ್ಟವೆಂದು ರಸವೆಂದಿತ್ತೆರನಹುದಾ ಕಿಟ್ಟವೆ ಮಲ ಮೂತ್ರವೆನಿಸಿ ಗುದಗುಹ್ಯದ್ವಾರದೊಳಪಾನ ವಾಯು ವ್ಯಾಪಾರದಿಂ ಪೊರಮಟ್ಟು ಪೋಪುದು. ಮತ್ತಮಾ ರಸವನೆ ನಾಭಿಸ್ಥಾನದಲ್ಲಿರ್ದ ಸಮಾನವಾಯುವಿಗೆ ಸರ್ವಾಂಗಕ್ಕೆ ಹಂಚಿಕೊಡಲಾ ರಸವಲ್ಲಲ್ಲಿ ಪಚಿಸಿ ಮತ್ತೆ ಕಿಟ್ಟವೆಂದು ರಸವೆಂದೆರಡು ಪ್ರಕಾರವಹುದಾ ಕಿಟ್ಟವೆ ಕಫ, ಸ್ವೇದ, ಮಲ ಮೂತ್ರ, ಜಿಹ್ವಾಮಲ, ದಂತಮಲ, ನಾಸಾಮಲ, ನೇತ್ರಮಲ, ಶ್ರೋತ್ರಮಲ ಗುದಮಲ, ಗುಹ್ಯಮಲ, ನಖಮಲಂಗಳೆಂಬ ದ್ವಾದಶವಿಧಮಲ ರೂಪದಿಂದೊ:

ಸರಿಸಿ ಪೋಪುದುಳಿದ ರಸವೆ ಸ್ಥೂಲರಸ, ಸೂಕ್ಷ್ಮರಸವೆಂದು ದ್ವಿವಿಧವಹುದದರಲ್ಲಿ ಸೂಕ್ಷ್ಮರೂಪರಸದಿಂ ಪ್ರಾಣೇಂದ್ರಿಯಾಂತಃಕರಣಾದಿಗಳೆಲ್ಲಂ ಪರಿಪೋಷಿಸುತ್ತಿಹವು. ೬೬೭

ಪಿಂಡೋತ್ಪತ್ತಿ :

ಮಿಕ್ಕ ಸ್ಥೂಲ ರೂಪ ರಸದಿಂ ರುಧಿರ, ಮಾಂಸ, ಮೇಧಸ್ಸು, ಸ್ನಾಯು, ಅಸ್ಥಿ, ಮಜ್ಜೆ, ಶುಕ್ಲವೆಂಬ ಸಪ್ತಧಾತುಗಳು ಕ್ರಮದಿಂ ವರ್ಧಿಸಲಾ ಜೀವನಾದೊಡೆ ಆಯಾಯ ಧಾತುಮಯನಾಗಿ ಪುರುಷನ ಗರ್ಭದಲ್ಲಿ ಮಾಸತ್ರಯಮಿರ್ದು ಮೇಲೆ ಸ್ತ್ರೀ ಪುರುಷರ ಸಂಭೋಗ ಸಮಯದೊಳಾ ಪಿಂಡವೆ ಕಾಲಕರ್ಮವಶದಿಂ ಶುಕ್ಲ ಸಂಬಂಧದಿಂದಿಳಿದು ಸ್ತ್ರೀ ಋತುಮತಿಯಾದ ದಿನಂ ತೊಡಗಿ ಹದಿನೈದು ದಿನ ಪರಿಯಂತರಂ ತಾವರೆಯ ಕುಸುಮದಂತೆ ವಿಕಸಿತಮಾಗಿರ್ದ ನಿರ್ದೋಷಮಾದ ಗರ್ಭಾಶ್ರಯಮೆಂಬ ಕೋಶಮಂ ವಾಯುವಶದಿಂ ಪ್ರವೇಶವಹುದಾ ವಾಯು ವಿಕಾರದಿಂದಾ ಶುಕ್ಲವೆರಡಾಗಿ, ಜರಾಯುಜವೆಂಬ ಮಾಂಸ ಕೂಪಾಸಮನಾಶ್ರೈಸೆ ಜವಳಿ ಪಿಂಡಮುದಿಸುತ್ತಿಹುದಲ್ಲಿ. ಉದರಾಗ್ನಿಯಿಂದ ಅನ್ನಾದಿಕವೆಲ್ಲಂ ಪಚಿಸಿಪೋಗುತ್ತಿರಲಾ ಶುಕ್ಲಪಿಂಡಂ ಸುಸ್ಥಿತಮಾಗಿಪುದೆಂತೆನಲು, ಆ ಶುಕ್ಲಮಯ ಪಿಂಡಕ್ಕೆ ವಹ್ನಿ ಸೆಕೆ ಸೋಂಕದಂತೆ ಮೇಲೆ ನೀರ್ಪೊಟ್ಟಣವಿಹುದು, ಅದರಮೇಲೆ ಅಗ್ನಿಯನೂರ್ಧ್ವ ಮುಖವಾಗಿಯೆ ವಾಯು ನಿರೋಧಿಸಿಕೊಂಡಿಹುದರಿಂ ಕೆಳಗಿರ್ದ ಶುಕ್ಲಪಿಂಡಂ ಬೆಂದುಕೆಡದೆ ಶುಕ್ತಿಯಲ್ಲಿ ಬಿರ್ದ ಸ್ವಾತಿಯುದಕಂ ಬಲಿದು ಮುತ್ತಾಗುವಂತೆ ಆ ಪಿಂಡಮಯಮಾದ ಪುರುಷನ ವೀರ್ಯಂ ಸ್ತ್ರೀರಕ್ತ ದೊಡವೆರೆದೊಂದು ದಿನಕ್ಕೆ ಕಲಲವಹುದು, ಐದು ದಿನಕ್ಕೆ ಬೊಬ್ಬುಳಿಕೆಯಹುದು, ಹತ್ತುದಿನಕ್ಕೆ ರಕ್ತಾತ್ಮಕವಹುದು, ಹದಿನೈದು ದಿನಕ್ಕೆ ಮಾಂಸಮಯವಾದ ಅಂಡಾಕಾರವಹುದು, ಇಪ್ಪತ್ತುದಿನಕ್ಕದು ಬಲಿಕೆಯಹುದು ಇಪ್ಪತ್ತೈದುದಿನಕ್ಕಲ್ಲಿ ಪಂಚಾಂಕುರಸೀಮೆದೋರ್ಪುದು. ತಿಂಗಳೊಂದಕ್ಕೆ ಶಿರಸ್ಸುಪುಟ್ಟುದು. ತಿಂಗಳೆರಡಕ್ಕೆ ಭುಜಂಗಳುದಿಸುತ್ತಿಹವು. ಮೂರು ತಿಂಗಳಿಗೆ ಪಾದಾಂಕುರ ಕೇಶ ಗುಹ್ಯಾದಿಗಳಹವು. ನಾಲ್ಕುತಿಂಗಳಿಗೆ ನಾಸಾಕ್ಷಿ ಶ್ರೋತ್ರಾದಿ ರಂಧ್ರಗಳಹವು. ತಿಂಗಳೈದಕ್ಕೆ ಸ್ಕಂದ ಜಠರಾದಿಗಳಹವು. ತಿಂಗಳಾರಕ್ಕೆ ಗುದ ಪಾದಾಂಗುಲಿಗಳಹವು. ಏಳುತಿಂಗಳಿಗೆ ಸರ್ವಾಂಗ ಸಂಧಿ ಸಂಪೂರ್ಣಮಾಗಿ ಚೇತನಂ ಪುಟ್ಟಿ, ಮಾತೆಯುಂಡನ್ನರಸಮಂ ನಾಭೀ ಸೂತ್ರದಿಂದುಣುತ್ತಿಹುದು. ಎಂಟುತಿಂಗಳಿಗಾ ಗರ್ಭಾಶ್ರಯಮೆಂಬ ರೌರವನರಕದ ಮಲ ಮೂತ್ರಾದಿಗಳ ಹೇಸಿಕೆಯೆಂಬ ಬಚ್ಚಲಪುಳುವಿನಂತೆ ಮಹಾದುಃಖವನನುಭವಿಸುತ್ತೆ ವಿಚಾರಿಸಿ ನೋಡಿ, ಮುನ್ನ ನಾನಜ್ಞಾನ ಬಲದಿಂ ಶಿವಜ್ಞಾನ ಹೀನನಾಗಿಂತು ನಾನಾಜನ್ಮಂಗಳಲ್ಲಿ ತೊಳಲಿಬಳಲಿದೆನಿನ್ನೀ ಗರ್ಭಾಶ್ರಯದಿಂದೆಂತಕ್ಕೆ ಪೊರಮಟ್ಟು

ಶ್ರೀಗುರುವನೆಯ್ದಿ ಶಿವಭಕ್ತಿ, ಶಿವಜ್ಞಾನ, ಶಿವಧ್ಯಾನ, ಶಿವಾರ್ಚನೆ, ಶಿವವ್ರತ, ಶಿವಮಾಹೇಶ್ವರರ ಸಂಸರ್ಗಾದಿ ಸಂಪನ್ನನಾಗಿ, ಜನ್ಮ ಜರಾಮರಣರೂಪ ಸಂಸಾರ ಸಾಗರಮಂ ದಾಂಟುವೆನೆಂದು ತನ್ನ ಪೂರ್ವಾಪರ ಸ್ಥಿತಿಗತಿಗಳಂ ಗರ್ಭೋಪನಿಷತ್ಸಮ್ಮತದಿಂ ನೆನೆವುತ್ತಿಹುದು. ೬೬೮

ಬಳಿಕಾ ಮಾತೆಯುಂಡ ಮಧುರ, ಅಮ್ಲ, ತಿಕ್ತ, ಕಟು, ಕಷಾಯ ಲವಣವೆಂಬ ಷಡ್ವಿಧ ರಸಾನ್ನ, ಪರಿಣಾಮ ಭೇದದಿಂ; ಶ್ವೇತ, ಪೀತ, ಕಪೋತ, ಹರೀತ, ಕೃಷ್ಣ, ಮಾಂಜಿಷ್ಟವೆಂಬ ಷಡ್ವರ್ಣವಾಂತು : ಶುಕ್ಲಾಧಿಕ್ಯದಿಂ ಪುರುಷನು, ಶೋಣಿತಾಧಿಕ್ಯದಿಂ ಸ್ತ್ರೀಯು, ಶುಕ್ಲಶೋಣಿತ ಸಮತ್ವದಿಂ ನಪುಂಸಕನೆನಿಸಿ, ಶುಭಕರ್ಮದಿಂ ಸಲ್ಲಕ್ಷಣ ಶರೀರಂದಳೆದು, ಹೀನ ಕರ್ಮದಿಂ ಬದಿರಾಂಧ ಪಂಗುಳನಾಗಿ, ಬಳಿಕಾ ಶುಕ್ಲ ಶೋಣಿತಂಗಳಿಗೆ ಕ್ರಮದಿಂ ಮೂರು ಮೂರಾದ ರೋಮ, ನಾಡಿ, ಅಸ್ಥಿ, ರಕ್ತ, ಮಾಂಸ, ತ್ವಕ್ಕುಗಳೆಂಬ ಷಟ್ಕೌಶಿಕಯುಕ್ತಮಾದ ; ಅಂಗ, ಪ್ರತ್ಯಂಗಾದಿಕವೆಲ್ಲಂ ಸಂಪೂರ್ಣಮಾಗಿ ; ಆಯುಷ್ಯ, ಕರ್ಮ, ದ್ರವ್ಯ, ವಿದ್ಯೆ, ಮರಣವೆಂಬವೈದು ನಿಯತಮಾದ ವಿಧಿಲಿಖಿತಂಬಡೆದಲ್ಲಿ ಪಿರಿದಾಯಾಸಂಗೊಳುತ್ತಿರೆ, ನವಮಾಸಂ ತುಂಬೆ ಮೇಲೊಂದು ಕೋಟಿ ಮುದ್ಗರವೆರಸಿದಂತೆ ಪೊಡೆದು ಕೆಡುಪುವ, ಸೂತಿವಾಯುವಿನ ಘಾತಿಯಿಂ ದಿಮ್ಮಿದಿರುಗಿ, ದಿಗ್ಭ್ರಾಂತಿ ಪುಟ್ಟಿ ಮೊದಲ ವಿವೇಕಂ ಕೆಟ್ಟು, ಉಪಮಿಸಬಾರದ ವೇದನೆಯಿಂ ಕಬ್ಬೋನ್ನು ಸರಿಗೆಯುಪ್ಪಂತೆ, ಯೋನಿದ್ವಾರದಿಂ ಪೊರಮಟ್ಟು, ಮೂರ್ಛಿಸಿ, ಮೆಲ್ಲಮೆಲ್ಲನೆ ಚೇತರಿಸಿ ಕ್ರಮದಿಂದಾಯಾಯ ಜಾತಿಸಂಸ್ಕಾರವಳವಟ್ಟು, ಕೆಂಬರ, ಈರಲು, ಗುಳಿ, ಬಾಲಗ್ರಹಾದಿ ಕಂಟಕಂಗಳಂ ಕಳಿದು, ಬಾಲಲೀಲೆ ಮುಂತಾದ ವಿನೋದಂಗಳಂ ನಟಿಸಿ, ವೃದ್ಧ ಸಂಕೇತದಿಂದಾಯಾಯ ಜಾತಿ ಭಾಷೆಗಲಿತು. ಬಳಿಕಾ ಗರ್ಭದೊಳಗೆ ಮೂರು, ಹೊರಗೆಮೂರುವರ್ತಿಸುವ ಜಾಯತೆ, ಅಸ್ತಿತೆ, ಪರಿಣಮತೆ, ವಿವರ್ಧತೆ, ಅಪಕ್ಷತೆ, ವಿನಶ್ಯತೆಯೆಂಬ ಷಡ್ಭಾವವಿಕಾರಮುಳ್ಳಾತನೆನಿಸಿ, ಪುಣ್ಯಶೇಷದಿಂ ಬ್ರಾಹ್ಮಣಾದಿ ವಿಶಿಷ್ಟಜನ್ಮಿ, ಪಾಪಶೇಷದಿಂ ಶುನಕ ಸೂಕರಾದಿ ಹೀನ ಯೋನಿಜನೆನಿಸಿ, ಮತ್ತಮಾ ಕರ್ಮವೈಚಿತ್ರದಿಂ ಪುರುಷನೆ ಸ್ತ್ರೀಯಾಗಿ ಸ್ತ್ರೀಯೆ ಪುರುಷನಾಗಿ ಪುಟ್ಟಿ, ಬಳಿಕ್ಕಲ್ಲಿ ಮಾಳ್ಪ ಪುಣ್ಯದಿಂ ದೇವತ್ವಮಂ, ಪಾಪದಿಂ ಸ್ಥಾವರತ್ವಮಂ, ಪುಣ್ಯಪಾಪಸಮಾನದಿಂ ಮನುಜತ್ವಮಂ ಮುಂದೆ ಪಡೆಯಲುತ್ಪಾತನಾಗಿ, ಈ ಪ್ರಕಾರದಿಂ ಸ್ವರ್ಗಲೋಕಾದಿಗಳನೆಯ್ದಿ ಮರಳಿಂತು ಜನಿಪುದೆ ಪಿತೃಯಾನಮಕ್ಕುಂ. ೬೬೯

ಬಳಿಕ ಬ್ರಹ್ಮ ವಿಷ್ಣು ರುದ್ರಾದಿ ಸಗುಣದೇವತಾ ಮೂರ್ತ್ಯುಪಾಸಕರಾಗಿರ್ದ, ಆಯಾಯಭಕ್ತರ್ಗೆ ದಕ್ಷಿಣನಾಸಾಪುಟದ ಪಿಂಗಲೆಯೆಂಬ ನಾಡೀಮಾರ್ಗದಿಂ, ಪ್ರಾಣವಿಯೋಗಮಾಗೆ, ಮೊದಲು ಜ್ವಾಲೆಯನೆಯ್ದಿ, ಜ್ವಾಲೆಯಿಂ

ದಿವಸ, ಆ ದಿವಸದಿಂ ಶುಕ್ಲಪಕ್ಷ, ಆ ಶುಕ್ಲಪಕ್ಷದಿಂದುತ್ತರಾಯಣ, ಅದರಿಂ ಸಂವತ್ಸರ, ಆ ಸಂವತ್ಸರದಿಂ ವಾಯು, ವಾಯುವಿನಿಂ ಸೂರ್ಯ, ಆ ಸೂರ್ಯನಿಂ ಸುಧಾಂಶು, ಆ ಸುಧಾಂಶುವಿನಿಂ ಮಿಂಚು, ಮಿಂಚಿನಿಂದಿಂದ್ರ, ಆ ಇಂದ್ರನಿಂದಡರಿ ಮೇಲೀಕ್ರಮದಿಂದಾ ಬ್ರಹ್ಮ ವಿಷ್ಣು ರುದ್ರಾದಿ ದೇವತಾ ಲೋಕಪ್ರಾಪ್ತಿಯಹುದು. ಅಲ್ಲಿ ಬ್ರಹ್ಮನ ಕಾಮಧೇನು, ವಾಹನ ಹಂಸಾದಿಗಳೆಂತಂತೆ, ಆಯಾಯ ದೇವತಾ ಲೋಕದಲ್ಲಿಹತನವೇ ಸಾಲೋಕ್ಯವೆನಿಸೂದು. ಮತ್ತಮಾ ಬ್ರಹ್ಮ ಸಂಬಂಧವಾದ ಸಾವಿತ್ರ್ಯಾದಿ ಮಂತ್ರ ಶಕ್ತಿಗಳೆಂತಂತೆ ಆಯಾಯ ದೇವತೆಗಳತ್ಯಂತ ಸಮೀಪಸ್ಥಿತಿಯೇ ಸಾಮೀಪ್ಯವೆನಿಸೂದು. ಮತ್ತಮಾ ಶಿವ ಸಂಬಂಧಮಾದ ರುದ್ರಾಣಿಗಳೆಂತಂತೆ ಆಯಾಯ ದೇವತಾ ಸಮಾನಾಕಾರತ್ವವೇ ಸಾರೂಪ್ಯವೆನಿಸೂದು. ಮತ್ತಮಾ ವಿಷ್ಣು ಸಂಬಂಧಮಾದ ಶಿಶುಪಾಲಾದಿಗಳೆಂತಂತೆ ಆಯಾಯ ದೇವತೆಯೊಡನೆ ಏಕದೇಹಲಕ್ಷಣವೆ ಸಾಯುಜ್ಯವೆನಿಸೂದು. ಮತ್ತಮಾ ಶಿವಸಂಬಂಧಮಾದ ನಂದೀಶ್ವರಾದಿಗಳೆಂತಂತೆ ಆಯಾಯ ದೇವತಾ ಸಮಾನಮಾದೈಶ್ವರ್ಯವೇ ಸಾರೂಪ್ಯವೆನಿಸೂದು. (ಸಾರ್ಷ್ಟ್ಯವೆನಿಸೂದು). ಬಳಿಕೀ ಪ್ರಕಾರಮಾದೈದು ಪದ ತಾರತಮ್ಯದಿಂದಾಯಾಯ ದೇವತಾ ಲೋಕಂಗಳಲ್ಲಿ ಮಹಾಸುಖದಿಂದಿರ್ದು, ಬಳಿಕ್ಕಲ್ಲಿಯೆ ಪ್ರಳಯಕಾಲದೊಳಗಾಯಾಯ ದೇವತೆಯೊಡಗೂಡಿಯಾದೊಡಂ, ಅಲ್ಲಮತ್ತೆ, ಅಲ್ಲಿ ವೈರಾಗ್ಯದಿಂದಾದೊಡಂ ಸಮ್ಯಜ್ಞಾನಬಲದಿಂ ನಿಜಮೋಕ್ಷಮಕ್ಕುಂ. ೬೭೦

ಬಳಿಕೆತ್ತಲಾನಲ್ಲಿಂದಿಲ್ಲಿಗೈತಂದರೂ ಪುನರಾವೃತ್ತಿ ಲಕ್ಷಣ ಸಂಸಾರಮೋಹಕವಿಲ್ಲದೆ ಜಗದ್ಧಿತಾರ್ಥಮೆನಿಸಿ ಉಭಯಕುಲ ಶುದ್ಧರಾದ ಶ್ರೀಮಾನ್ನುಗಳ ಗರ್ಭದಲ್ಲಾದರೂ; ಸಂಪ್ರದಾಯ ಸಿದ್ಧಾರಾದ ಆಚಾರ್ಯಕುಲದೊಳಾದೊಡಂ ಜನಿಸಿ, ಮೇಲೆ ಜ್ಞಾನ ಕ್ರಿಯಾ ಸಂಪನ್ನರಾಗಿ ಸಹಜಕೈವಲ್ಯಂಬಡೆವರು. ಇದೇ ದೇವಯಾನಮಕ್ಕುಂ. ೬೭೧

## ಯೋಗಸಿದ್ಧರ ಗತಿ :

ಬಳಿಕ ಯಮ ನಿಯಮಾದ್ಯಷ್ಟಾಂಗ ಯೋಗ ಸಿದ್ಧಾರಾದ ಯೋಗೀಶ್ವರರ್ಗೆ ರೇಚಕಾದಿ ಸಪ್ತ ಪ್ರಾಣಾಯಾಮ ಬಲದಿಂ ಸುಷುಮ್ನಾ ನಾಡೀ ಮಾರ್ಗದಲ್ಲಿ ಶಿರೋರಂಧ್ರದಿಂ ಪ್ರಾಣೋತ್ಕ್ರಾಂತಮಾಗೆ ಸಕಾಮದಿಂ ಸ್ವೇಚ್ಛಾಲೋಕಪ್ರಾಪ್ತಿ, ನಿಷ್ಕಾಮದಿಂ ಬ್ರಹ್ಮಲೋಕಾದಿ ವ್ಯವಧಾನಮಿಲ್ಲದೆ, ತತ್ತ್ವಾತೀತಮಾದ ಶಿವತತ್ತ್ವ ಪ್ರಾಪ್ತಿಯಕ್ಕುಂ. ೬೭೨

ಜ್ಞಾನಿಗಳ ಗತಿ :

ಬಳಿಕ ವಿಶಿಷ್ಟ ಜ್ಞಾನ ದೀಕ್ಷಾ ಸಂಪನ್ನರ್ಗೆ ಜೀವನ್ಮುಕ್ತಿ ಸಿದ್ಧಿಸಿತ್ತಾಗಿಯುಂ, ಪೂರ್ಣ ಸ್ವರೂಪದಲ್ಲಿ ಗಗನದಂತೆ ಗಮನಾಗಮನವಿಲ್ಲಾಗಿಯುಂ, ನಾಡೀಮಾರ್ಗ ನಿಯಮವಿಲ್ಲದೆ ಕಾಶಿಯಲ್ಲಾಗಲಿ, ಹೀನಾಶ್ರಯದಲ್ಲಾಗಲಿ, ಅರಿವು ಮರವೆಗಳಿಂದಾಗಲಿ, ಆವ ಪ್ರಕಾರದಿಂ ಪ್ರಾಣಪ್ರಯಾಣಮಾದರೂ ಮೇಲೆ ನಿಜಮೋಕ್ಷವಹುದೆಂಬುದೇ ಸಿದ್ಧಮಕ್ಕುಂ. ೬೭೩

ಪಾಪಿಗಳ ಗತಿ :

ಮತ್ತಮಾ ಕರ್ಮ ಭಕ್ತಿ ಯೋಗ ಜ್ಞಾನಾದಿ ಪುಣ್ಯಹೀನರಾದ ಪಾಪಾತ್ಮರ್ಗೆ ತೃಣಜಲೂಕ ನ್ಯಾಯದಿಂ ಯಾತನಾ ಶರೀರವಿಡಿದು, ಗುದಗುಹ್ಯಂಗಳಲ್ಲಿ ಪ್ರಾಣಂ ಪೊರಮಟ್ಟು ಪೋಗೆ, ಮೇಲೆ ನೀಲಾದ್ರಿಯಂತೆ ಕಾರೊಡಲು, ಕೆಂಗಣ್ಣು, ಕೋರೆದಾಡೆಯು, ಪಾಶದಂಡಕರದ, ರಕ್ತವಸ್ತ್ರ, ರಕ್ತಾಭರಣ, ರಕ್ತಚಂದನ, ರಕ್ತಪುಷ್ಪಗಳಿಂದಲಂಕೃತರಾದ ಉಗ್ರಕಂಠಕ, ಅತ್ಯುಗ್ರ, ಸುರಕಂಠಕ, ಉಗ್ರಚಂಡ, ಸಮುಗ್ರ, ಉದುಂಬಲಾದಿ ಯಮದೂತರತಿ ಭಯಂಕರ ಮಾರ್ಗದೊಳೆಳೆದೊಯ್ದು, ದಂಡಧರನ ಸನ್ನಿಧಿಯಲ್ಲಿ ನಿಲಿಸಿ ಚಿತ್ರಗುಪ್ತರಾಣತಿಯಿಂದಾಯುಾಯ ಪಾಪಾನುಸಾರಮಾವ ಮಹಾಬಾಧೆಗೊಳಿಸಿ, ಪೂರ್ವೋಕ್ತ ನರಕಾರ್ಣವದಲ್ಲಿ ಕೆಡಹುತ್ತಿಹರೆಂಬುದು ಸತ್ಯಮಕ್ಕುಂ. ೬೭೪

ಪ್ರಾಣ ವಿಯೋಗಕ್ರಮ ಗತಿ :

ಬಳಿಕ್ಕುಳಿದ ಸಾಮಾನ್ಯ ಜೀವ ಜಾಲಕ್ಕೆ ಗುದಗುಹ್ಯಂಗಳಿಂ ಪ್ರಾಣವೆಯ್ದೆ, ಪಿಶಾಚಿ ಪದ ಪ್ರಾಪ್ತಿ, ಶ್ರೋತ್ರದಿಂ ಪ್ರಾಣತ್ಯಾಗಮಾಗೆ ಪಿತೃಲೋಕ ಪ್ರಾಪ್ತಿ. ಜಿಹ್ವೆಯಿಂ ಪ್ರಾಣ ವಿಯೋಗಮಾಗೆ ದೈತ್ಯಲೋಕ ಪ್ರಾಪ್ತಿ. ನೇತ್ರದಿಂ ಪ್ರಾಣ ಪ್ರಯಾಣಮಾಗೆ ಸ್ವರ್ಗಲೋಕ ಪ್ರಾಪ್ತಿ.ನಾಸಿಕದಿಂ ಪ್ರಾಣಂಗಮಿಸೆ ಮರ್ತ್ಯಲೋಕ ಪ್ರಾಪ್ತಿ. ಸ್ತನಂಗಳಿಂ ಪ್ರಾಣಂಪೋಗೆ ಕಾಮಧೇನುಲೋಕ ಪ್ರಾಪ್ತಿಗಳಕ್ಕುಂ. ೬೭೫

ಸಮಯಾಂತರಾಭಿಮಾನಿಗಳ ಗತಿಭೇದ :

ಮತ್ತಮಿಾ ಪ್ರಕಾರದಿಂ ಕೌಳಯಾಮಳಾದಿ ಮತಾಂತರಾಭಿಮಾನಿಗಳಿಗೆ ಪಿಶಾಚಪದ ಪ್ರಾಪ್ತಿ. ಚಾರ್ವಾಕ, ಜೋತಿಷಿ, ಪೂರ್ವಮಿಾಮಾಂಸಕರುಗಳಿಗೆ ಸ್ಥೂಲ ಭೂತಾಂತರ ಪ್ರಾಪ್ತಿ. ಸ್ಮಾರ್ತರಿಗೆ ತನ್ಮಾತ್ರ ಪ್ರಾಪ್ತಿ. ಇಂದ್ರಿಯ ಚೈತನಿಕರಿಗೆ ಇಂದ್ರಿಯ ಪ್ರಾಪ್ತಿ. ಮನಶ್ಚೈತನಿಕರಿಗೆ ಮನಃಪ್ರಾಪ್ತಿ. ಅಹಂಕಾರ ಚೈತನಿಕರಿಗೆ, ಪ್ರಾಣಚೈತನಿಕರಿಗೆಯೂ ಅಹಂಕಾರ ತತ್ವ ಪ್ರಾಪ್ತಿ. ಬೌದ್ಧನೈಯ್ಯಾಯಿಕ ವೈಶೇಷಿಕರ್ಗೆ ಬುದ್ಧಿತತ್ವ ಪ್ರಾಪ್ತಿ. ಅರ್ಹತರಿಗೆ, ಸತ್ವ ಸಂಭೋಗವಾದಿಗಳಿಗೆಯೂ ಗುಣತತ್ವಪ್ರಾಪ್ತಿ. ಪಾಂಚರಾತ್ರರಿಗೆ ಪ್ರಕೃತಿ ತತ್ವ ಪ್ರಾಪ್ತಿ.

ಸಾಂಖ್ಯರ್ಗೆ ಪ್ರಕೃತಿ ಮಸ್ತಕದಲ್ಲಿಯ ಭುವನ ಪ್ರಾಪ್ತಿ. ಅದ್ವೈತಿಗಳಿಗೆ ಪುರುಷತತ್ವ ಪ್ರಾಪ್ತಿ. ಪೌರಾಣಿಕರಿಗೆ ರಾಗತತ್ವ ಪ್ರಾಪ್ತಿ. ಕಾಪಾಲಿಕರಿಗೆ ಕಾಲತತ್ವ ಪ್ರಾಪ್ತಿ. ಪಾಶುಪತರಿಗೆಯೂ, ಉತ್ಪತ್ತಿ ಸಾಮ್ಯವಾದಿಗಳಿಗೆಯೂ, ಆವೇಶ ಸಾಮ್ಯವಾದಿಗಳಿಗೆಯೂ, ಮಾಯಾತತ್ವ ಪ್ರಾಪ್ತಿ. ಮಹಾವ್ರತರಿಗೆ ಶುದ್ಧವಿದ್ಯಾತತ್ವ ಪ್ರಾಪ್ತಿ. ಶಿವ ಪ್ರಯೋಜ್ಯ ಕರ್ತೃತ್ವವಾದಿಗಳಿಗೆ, ಈಶ್ವರೌದಾಸೀನ್ಯಯುಕ್ತ ಕರ್ತೃತ್ವವಾದಿಗಳಿಗೆಯೂ ಈಶ್ವರತತ್ವ ಪ್ರಾಪ್ತಿ. ಗಾರುಡ, ದಕ್ಷಿಣ, ವಾಮ, ಭೂತ ತಾಂತ್ರಿಕರಿಗೆ ನಿವೃತ್ತ್ಯಾದಿ ಭುವನ ಪ್ರಾಪ್ತಿ. ಶುದ್ಧ ಶಾಕ್ತರಿಗೆ ಶಕ್ತಿತತ್ವ ಪ್ರಾಪ್ತಿ. ಶೈವರ್ಗೆ ಪರಶಿವ ಸಮಾನತ್ವಪ್ರಾಪ್ತಿ. ವೇದ ವೇದಾಂತಾಗಮ ಪುರಾಣಗಳಲ್ಲಿ ಸಾರತರಮೆನಿಸಿದ ಅತಿ ರಹಸ್ಯಾರ್ಥಪ್ರತಿಪಾದಕಮಾದ ವೀರಶೈವ ಮಾರ್ಗದಿಂ ಲಿಂಗಾಂಗ ಸಂಬಂಧಿಗಳಾದ ಷಟ್ಸ್ಥಲ ಜ್ಞಾನಿಗಳಿಗೆ ಸರ್ವೋತ್ಕರ್ಷಮಾದ ಅವಿರಳ ಶಿವೈಕ್ಯ ಪ್ರಾಪ್ತಿಯಹುದೆಂದು ವಿವೇಕಿಸಲ್ವೇಳ್ಕುಂ. ೬೭೬

ಇತಿ ಭುವನಾಂತರ ಪ್ರಾಪ್ತಿ ವರ್ಣನಂ

ನವಮ ಪರಿಚ್ಛೇದಃ

# ದಶಮ ಪರಿಚ್ಛೇದ

ಕಂದ ||

ಮತವೆನೆ ಜೀವರ್ಗೆಹಪರ
ಗತಿಗಳನಿಂತುಸುರ್ದೆನೊಲಿದು ಬಳಿಕಮವರ್ಗೆ |
ಸ್ಥಿತಿ ಕಾಲ ಕ್ರಮಮಂ ನಿ
ಶ್ಚಿತಮಿದೆನಿಪ್ಪಂದದಿಂದೆ ಪೇಳ್ವೆನಮೋಘಂ ||

## ಕಾಲಸ್ವರೂಪ ಭೇದಗಳು :

ಅದೆಂತೆಂದೊಡೆ, ಆ ಕಾಲಮೆಂಬುದೇ ಮಾಯಾಕಾರ್ಯಮಪ್ಪುದು. ಅದು ಸ್ಥೂಲಕಾಲವೆಂದು, ಸೂಕ್ಷ್ಮಕಾಲವೆಂದು ದ್ವಿಪ್ರಕಾರವಹುದವರಲ್ಲಿ ಲೌಕಿಕವೇ ಸ್ಥೂಲಕಾಲವೆನಿಸೂದು, ಆಧ್ಯಾತ್ಮಿಕಕಾಲವೇ ಸೂಕ್ಷ್ಮಕಾಲಮಕ್ಕುಂ. ೬೭೭

ಮತ್ತಮಾ ಕಾಲವೇ ಮನುಷ್ಯರ, ಪಿತೃಗಳ, ದೇವತೆಗಳ, ಬ್ರಹ್ಮಾದಿಗಳ ಸಂಬಂಧದಿಂ ಬಹುವಿಧಮಾಗಿ ಸಕಲಾತ್ಮರ್ಗೆ ನಾನಾವ್ಯವಹಾರಂಗಳೆನಿಸಿ ಕೊಡುತ್ತಿಹುದು. ಆ ಸ್ಥೂಲಮಾದ ಲೌಕಿಕಕಾಲದ ಲಕ್ಷಣವೆಂತೆನೆ: ಒಮ್ಮೆ ಕಣ್ಣವೆಯುನಿಕ್ಕುವನಿತರ ಭಾಗೆಯೊಳಗೊಂದು ಭಾಗವೆ ತೃಟಿಯೆನಿಸುಗುಮದು ಎರಡಾಗಲೊಂದು ಲವವೆನಿಸುಗುಂ. ಅದೆರಡಾಗಲೊಂದು ಕಾಷ್ಠೆಯೆನಿಸುಗುಂ. ಅದು ಮೂವತ್ತಾಗಲೊಂದು ಕಲೆಯೆನಿಸುಗುಂ ಅದುಹದಿನೈದಾಗಲೊಂದು ಕ್ಷಣವೆನಿಸುಗುಂ. ಅದೆರಡಾಗಲೊಂದು ಮುಹೂರ್ತವೆನಿಸುಗುಂ. ಅದುನಾಲ್ಕಾಗಲೊಂದು ಘಳಿಗೆಯುಕ್ಕುಂ. ೬೭೮

ಮತ್ತಮಾ ಘಳಿಗೆಯೆಂಟಾಗಲೊಂದು ಜಾವವಹುದು. ಜಾವವೊಂದಕ್ಕೆ ಜೋತಿಷದಲ್ಲಿ ಏಳುವರೆ ಘಳಿಗೆ ಸಲ್ವುದು. ಆ ಜಾವವೆಂಟಾಗೆ ಪಗಲಿರುಳಿಂದ ಅರವತ್ತು ಘಳಿಗೆಗೆ ಒಂದು ದಿನವಹುದು. ಆ ದಿನವೇ ಆದಿತ್ಯವಾರ, ಸೋಮವಾರ, ಮಂಗಳವಾರ, ಬುಧವಾರ, ಬೃಹಸ್ಪತಿವಾರ, ಶುಕ್ರವಾರ, ಶನಿವಾರಮೆಂದು, ಏಳುತೆರನಾಗಿಹುದು.

ಆ ವಾರ ಹದಿನೈದಾಗಲೊಂದು ಪಕ್ಷಮಕ್ಕುಂ. ಮತ್ತಮಾ ಪಕ್ಷವೆ ಶುಕ್ಲಪಕ್ಷವೆಂದು ಕೃಷ್ಣಪಕ್ಷವೆಂದು ಇತ್ತೆರನಹುದು. ಆ ಪಕ್ಷಂಗಳೊಳಗೆ ಅಗ್ನಿ ಅಧಿದೇವತೆಯಾದ ಪಾಡ್ಯ, ಸೂರ್ಯನಧಿದೇವತೆಯಾದ ಬಿದಿಗೆ, ಕುಬೇರನಧಿದೇವತೆಯಾದ ತದಿಗೆ, ವಿನಾಯಕನಧಿದೇವತೆಯಾದ ಚತುರ್ಥಿ, ಲಕ್ಷ್ಮಿಯಧಿದೇವತೆಯಾದ ಪಂಚಮಿ, ಷಣ್ಮುಖನಧಿದೇವತೆಯಾದ ಷಷ್ಠಿ, ರವಿಯಧಿದೇವತೆಯಾದ ಸಪ್ತಮಿ, ರುದ್ರನಧಿ ದೇವತೆಯಾದ ಅಷ್ಟಮಿ, ದುರ್ಗಿಯಧಿದೇವತೆಯಾದ ನವಮಿ, ಮನುವಧಿದೇವತೆ ಯಾದ ದಶಮಿ, ಇಂದ್ರನಧಿದೇವತೆಯಾದ ಏಕಾದಶಿ, ವಿಷ್ಣುವಧಿದೇವತೆಯಾದ ದ್ವಾದಶಿ, ಕಾಮನಧಿದೇವತೆಯಾದ ತ್ರಯೋದಶಿ, ಈಶ್ವರನಧಿದೇವತೆಯಾದ ಚತುರ್ದಶಿ, ಚಂದ್ರನಧಿದೇವತೆಯಾದ ಪೌರ್ಣಮಿಯೆಂಬ ಶುಭಾಶುಭರೂಪ ಮಾದ ಹದಿನೈದು ತಿಥಿಗಳುಳ್ಳುದೇ ಶುದ್ಧವೆನಿಸಿ ಶುಕ್ಲಪಕ್ಷವಹುದು. ಈ ಕ್ರಮ ದಿಂದವೆ ಮರಳಿ ಪಾಡ್ಯಂ ಮೊದಲಾಗಿ ಪಿತೃದೇವತೆಯಾದ ಅಮಾವಾಸ್ಯೆ ಪರ್ಯಂತ ಮಾಗಿ ಹದಿನೈದು ತಿಥಿಗಳನುಳ್ಳುದೇ ಬಹುಳವೆನಿಸಿ ಕೃಷ್ಣಪಕ್ಷಮಕ್ಕುಂ ೬೭೯

## ರಾಶಿ ನಕ್ಷತ್ರ ಯೋಗವಿಚಾರ :

ಮತ್ತಮಾ ಪಕ್ಷದ್ವಯದಲ್ಲಿಯು ಮೇಷಾದಿ ಹನ್ನೆರಡು ರಾಶಿಗಳುಂ; ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳುಂ :

| | | | | | |
|---|---|---|---|---|---|
| ವಿಷ್ಕಂಭ | ಸೌಭಾಗ್ಯ | ಆಯುಷ್ಮಾನ್ | ಪ್ರೀತಿ | ಶಿವ | ಶುಕ್ಲ |
| ಸುಕರ್ಮ | ಅತಿಗಂಡ | ವ್ಯತೀಪಾತ | ಗಂಡ | ವೃದ್ಧಿ | ಧ್ರುವ |
| ವ್ಯಾಘಾತ | ಹರ್ಷಣ | ಪರಿಘ | ಸಿದ್ಧಿ | ವಜ್ರ | ಧೃತಿ |
| ವರ್ಗ್ಯಾಷ್ಟ್ರ | ಶೋಭನ | ಸಿದ್ಧ | ಸಾಧ್ಯ | ಶುಭ | ಶೂಲ |

ಬ್ರಹ್ಮ ಇಂದ್ರ ವೈಧೃತಿಗಳೆಂಬ ಇಪ್ಪತ್ತೇಳು ಯೋಗಂಗಳುಂ;
ಶಕುನಿ, ಚತುಷ್ಕ, ನಾಗ, ಕಿಂಸ್ತುಘ್ನಮೆಂಬ ನಾಲ್ಕು ಸ್ಥಿರಕರಣಂಗಳುಂ;
ಬವ, ಬಾಲವ, ಕೌಲವ, ತೈತಿಲ, ಗರಜೆ, ಒಣಿಜೆ, ಭದ್ರೆಗಳೆಂಬವೇಳು ಚರಕರಣಂ ಗಳುಂ; ತಮ್ಮ ತಮ್ಮ ಕ್ರಮದಿಂದ ಅರುವತ್ತು ಘಳಿಗೆಗೊಂದೆನಿಸಿ ಕ್ಷಯಗಾಮಿ ವೃದ್ಧಿಗಾಮಿಗಳಾಗಿ ಶುಭಾಶುಭರೂಪದಿಂ ವರ್ತಿಸುತ್ತಿಹವಲ್ಲಿ ಸ್ಥಿರಕರಣಂಗಳೇ ಚತುರ್ದಶಿ, ಹುಣ್ಣಿವೆ, ಅಮಾವಾಸ್ಯೆಗಳಲ್ಲಿಯೇ ವರ್ತಿಸುತ್ತಿಹವು. ಮಿಕ್ಕ ಚರ ಕರಣಂಗಳೆ ಮೂವತ್ತು ಘಳಿಗೆಗೊಂದೆನಿಸಿ, ದಿನಕ್ಕೆರಡೆರಡು ವರ್ತಿಸುತ್ತಿರ್ಪವಿಂತು. ತಿಥಿ, ವಾರ, ನಕ್ಷತ್ರ, ಯೋಗಂಕರಣವೆಂಬ ಪಂಚಾಂಗಯುಕ್ತಮಾದ ಪಕ್ಷದ್ವಯ ದಿಂದೊಂದು ಮಾಸಮಕ್ಕುಂ. ೬೮೦

## ಮಾಸ ಋತು ಅಯನಾದಿಗಳು :

ಬಳಿಕ ಮಾಸವೇ ಚೈತ್ರ, ವೈಶಾಖ, ಜೇಷ್ಠ, ಆಷಾಢ, ಶ್ರಾವಣ, ಭಾದ್ರಪದ ಆಶ್ವೀಜ, ಕಾರ್ತೀಕ, ಮಾರ್ಗಶಿರ, ಪುಷ್ಯ, ಮಾಘ, ಪಾಲ್ಗುಣವೆಂದು ಹನ್ನೆರಡು ತೆರನಾಗಿಹುದು. ಆ ಮಾಸವೆರಡಕ್ಕೊಂದು ಋತುವಹುದು. ಆ ಋತುವೆ ಹಿಮ,

ಶಿಶಿರ, ವಸಂತ, ಗ್ರೀಷ್ಮ, ವರ್ಷ, ಶರದೃತುಗಳೆಂದಾರು ತೆರನಾಗಿ, ಮಾರ್ಗಶಿರಂ ಮೊದಲಾಗಿ ಎರಡೆರಡು ತಿಂಗಳಿಗೊಂದೊಂದು·ವರ್ತಿಸುತ್ತಿಹುದಾ ಋತು ಮೂರಾಗ ಲೊಂದು ಅಯನವೆನಿಸೂದು. ಆ ಅಯನವೆ ದಕ್ಷಿಣಾಯನವೆಂದು, ಉತ್ತರಾಯನ ವೆಂದು ಎರಡುತೆರೆನಾಗಿಹುದು. ಆ ಅಯನಂಗಳೆರಡಾಗಲೊಂದು ವರ್ಷಮಕ್ಕುಂ ೬೮೧

## ಸಂವತ್ಸರ ವಿಚಾರ :

ಮತ್ತಮಾ ವರ್ಷವೆ

ಪ್ರಭವ ವಿಭವ ಶುಕ್ಲ ಪ್ರಮೋದೂತ ಪ್ರಜೋತ್ಪತ್ತ್ಯ ಆಂಗೀರಸ ಭಾವ, ಶ್ರೀಮುಖ ಯುವ ಧಾತು ಈಶ್ವರ ಬಹುಧಾನ ಪ್ರಮಾಥಿ ವಿಕ್ರಮ ವಿಷು ಚಿತ್ರಭಾನು ಸ್ವಭಾನು ತಾರಣ ಪಾರ್ಥಿವ ವ್ಯಯ ಸರ್ವಜಿತು ಸರ್ವಧಾರಿ ವಿರೋಧಿ ವಿಕೃತಿ ಖರ ನಂದನ ವಿಜಯ ಜಯ ಮನ್ಮಥ ದುರ್ಮುಖ ಹೇವಿಳಂಬಿ ವಿಳಂಬಿ ವಿಕಾರಿ ಶಾರ್ವರಿ ಪ್ಲವ ಶುಭಕೃತು ಶೋಭನಕೃತು ಕ್ರೋಧಿ ವಿಶ್ವಾವಸು ಪರಾಭವ ಪ್ಲವಂಗ ಕೀಲಕ ಸೌಮ್ಯ ಸಾಧಾರಣ ವಿರೊಧಿಕೃತು ಪರಿಧಾವಿ ಪ್ರಮಾದೀಚ ಆನಂದ ರಾಕ್ಷಸ ನಳ ಪಿಂಗಳ ಕಾಳಾಯುಕ್ತಿ ಸಿದ್ಧಾರ್ಥಿ ರೌದ್ರಿ ದುರ್ಮತಿ ದುಂದುಭಿ ರುಧಿರೋ ದ್ಗಾರಿ, ರಕ್ತಾಕ್ಷಿ, ಕ್ರೋಧನ ಕ್ಷಯವೆಂದರುವತ್ತು ತೆರನಾಗಿಹುದವಾದೊಡೆ ಬೇರೆಬೇರೆ ಶುಭಾಶುಭ ಫಲಂಗಳುಳ್ಳುವಾಗಿ ಕ್ರಮದಿಂದುತ್ತಮಂ ಬಿಸಿಗೆ, ಮಧ್ಯಮಂ ಬಿಸಿಗೆ, ಕನಿಷ್ಟಂ ಬಿಸಿಗೆಗಳೆನಿಸಿ ಇಪ್ಪತ್ತಿಪ್ಪತ್ತು ವರ್ತಿಸುತ್ತಿರ್ಕುಂ. ೬೮೨

ಮತ್ತಮಾ ದಿನ ಪಕ್ಷ ಮಾಸ ಋತು ಅಯನ ವರ್ಷಂಗಳೆಲ್ಲಂ ಮನುಷರ್ಗೆ ಪೂರ್ವೋಕ್ತ ಸೂರ್ಯನೆಡೆಯಾಟದಿಂದವೆ ಪ್ರಮಾಣಿಸಿಕೊಳುತ್ತಿಹವು. ದೇವತೆ ಗಳಿಗವರ ಈಡ, ಪಿಂಗಳೆಗಳೆಂಬ ಚಂದ್ರಸೂರ್ಯರ, ರೇಚಕ ಪೂರಕವೆಂಬೆಡೆಯಾಟ ದಿಂದವೆ ಲಕ್ಷಿಸಿಕೊಳುತ್ತಿರ್ಕುಂ.

ಮತ್ತಮಾ ಲೌಕಿಕರಾದ ಮನುಷ್ಯರದೊಂದುಮಾಸವೆ ಪಿತೃಗಳಿಗೆ ಒಂದು ದಿನವಹುದು. ಆ ದಿನ ಮುನ್ನೂರರುವತ್ತಾದೊಡೆ ಒಂದು ವರ್ಷವಹುದು. ಆ ಕ್ರಮದಿಂದವರ್ಗೆ ಶತಾಯುಷವೆಂದರಿಯಲ್ವೇಳ್ಕುಂ.

ಮತ್ತಮಾ ಸೂರ್ಯನ ದಕ್ಷಿಣಾಯಣಾಯನವೇ ದೇವತೆಗಳರಾತ್ರಿ ಉತ್ತರಾ ಯನವೆ ದಿವಸವಂತಪ್ಪ ದಿನರಾತ್ರಿಗಳ್ಕೂಡಲೊಂದು ದಿನ ಆ ದಿನ ಮುನ್ನೂರರು ವತ್ತಾಗಲಾ ದೇವತೆಗಳಿಗೆ ಒಂದು ದಿವ್ಯ ವರ್ಷ ಅಂತಪ್ಪ ದಿವ್ಯವರ್ಷ ನೂರು ಪರ್ಯಂತರಮವರ ಸ್ಥಿತಿಯಕ್ಕುಂ. ೬೮೩

## ಯುಗ ಪರಿಮಾಣ ಮತ್ತು ಧರ್ಮ :

ಬಳಿಕಾ ಮನುಷ್ಯರ ವರ್ಷಾನುಕ್ರಮದಿಂದಿಲ್ಲಿ ಕೃತಾದಿಯುಗಂಗಳ್ಪ್ರವರ್ತಿಸುತ್ತಿರ್ಪವದೆಂತೆನೆ; ಕೃತಯುಗವೆ ಹದಿನೇಳು ಲಕ್ಷದಮೇಲೆ ಇಪ್ಪತ್ತೆಂಟು ಸಾವಿರವರ್ಷ ವರ್ತಿಸುತ್ತಿಹುದು. ತ್ರೇತಾಯುಗವೆ ಹನ್ನೆರಡು ಲಕ್ಷದಮೇಲೆ ತೊಂಭತ್ತಾರುಸಾವಿರ ವರ್ಷ ವರ್ತಿಸುತ್ತಿಹುದು. ದ್ವಾಪರಯುಗವೆ ಎಂಟುಲಕ್ಷದಮೇಲೆ ಅರವತ್ತನಾಲ್ಕು ಸಾವಿರ ವರ್ಷವರ್ತಿಸುತ್ತಿಹುದು. ಕಲಿಯುಗವೆ ನಾಲ್ಕುಲಕ್ಷದಮೇಲೆ ಮೂವತ್ತೆರಡು ಸಾವಿರ ವರ್ಷ ವರ್ತಿಸುತ್ತಿಹುದು. ಈ ನಾಲ್ಕು ಯುಗಂಗಳಲ್ಲಿ ಕ್ರಮದಿಂ ನಾಲ್ಕು ಪಾದ, ಮೂರುಪಾದ, ಎರಡುಪಾದ, ಒಂದುಪಾದವಾಗಿ ಧರ್ಮವರ್ತಿಸುತ್ತಿಹುದು. ಮತ್ತಮಾ ಕೃತಯುಗದಲ್ಲಿ ಯೋಗ, ತ್ರೇತಾಯುಗದಲ್ಲಿ ಜ್ಞಾನ, ದ್ವಾಪರಯುಗದಲ್ಲಿ ಯಜ್ಞ, ಕಲಿಯುಗದಲ್ಲಿ ದಾನ, ಈಶ್ವರ ಕ್ಷೇತ್ರ ಯಾತ್ರಗಳೇ ಮುಖ್ಯವಾಗಿ ಭೋಗ ಮೋಕ್ಷ ಸಾಧನಂಗಳಾಗಿರ್ಕುಂ. ೬೮೪

## ಯುಗ ಭೇದದಿಂ ಕರ್ಮಸಿದ್ಧಿ ಭೇದ :

ಮತ್ತಮಾ ಯುಗಂಗಳಲ್ಲಿ ಕೃತಯುಗದಲ್ಲಿ ಹತ್ತು ವರ್ಷಕ್ಕೆ ಸಿದ್ಧಿಸುವ ತಪಸ್ಸು ಮೊದಲಾದ ಸತ್ಕರ್ಮವೆ ತ್ರೇತಾಯುಗದಲ್ಲಿ ಒಂದು ವರ್ಷಕ್ಕೆ ಸಿದ್ಧಿಸೂದು. ತ್ರೇತಾ ಯುಗದಲ್ಲಿ ಒಂದು ವರ್ಷಕ್ಕೆ ಸಿದ್ಧಿಸುವ ತಪಸ್ಸು ದ್ವಾಪರಯುಗದಲ್ಲಿ ಒಂದು ತಿಂಗಳಿಗೆ ಸಿದ್ಧಿಸೂದು. ದ್ವಾಪರಯುಗದಲ್ಲಿ ಒಂದು ತಿಂಗಳಿಗೆ ಸಿದ್ಧಿಸುವ ತಪಸ್ಸು, ಕಲಿಯುಗದಲ್ಲಿ ಒಂದು ದಿನಕ್ಕೆ ಸಿದ್ಧಿಸುವುದಾಗಿ ರಾಗಾದಿದೋಷವಿಲ್ಲದ ಮನಸ್ಸುಂ ಅನೃತಾದಿ ದುಷ್ಕೃತ ವಿಲ್ಲದ ವಾಕ್ಕು ಹಿಂಸಾದಿ ಕಲುಷವಿಲ್ಲದ ಕಾಮವೆಂಬ ತ್ರಿಕರಣ ಶುದ್ಧರಾದ ಮಹಾಪುರುಷರ್ಗೆ ಈ ಕಲಿಯುಗದಲ್ಲಿಯೇ ಶೀಘ್ರಮಾಗಿ ಭೋಗಮೋಕ್ಷಂಗಳಕ್ಕುಂ. ೬೮೫

## ಚತುರ್ಯುಗ ದಿವ್ಯ ಪರಿಮಿತಿ :

ಮತ್ತಮಾ ಚತುರ್ಯುಗಂಗಳ ಆಯಾಯ ಗಣನೆಗಳಂ ಬೇರೆ ಬೇರಿಕ್ಕಿ ಮೂನ್ನೂರರುವತ್ತರಿಂ ಕಳೆದು ಗುಣಿಸಿನೋಡೆ ನಿಂದುದೇ ದೇವತೆಗಳ ದಿವ್ಯ ವರ್ಷವಹುದಾಗಿ ಕೃತಯುಗವೆ ನಾಲ್ಕು ಸಾವಿರದೆಂಟುನೂರು ದಿವ್ಯವರ್ಷವಹುದು. ತ್ರೇತಾಯುಗವೆ ಮೂರು ಸಾವಿರದರನೂರು ದಿವ್ಯವರ್ಷವಹುದು. ದ್ವಾಪರಯುಗವೆ ಎರಡು ಸಾವಿರದ ನಾನೂರು ದಿವ್ಯವರ್ಷವಹುದು. ಕಲಿಯುಗವೆ ಸಾವಿರದಿನ್ನೂರು ದಿವ್ಯವರ್ಷವಹುದು. ಇಂತೆಣಿಸಿ ಹನ್ನೆರಡು ಸಾವಿರ ದಿವ್ಯವರ್ಷಂಗಳಾದ ಕೃತಾದಿ ನಾಲ್ಕು ಯುಗಂಗಳುಂ ಕೂಡಲೊಂದು ದಿವ್ಯಯುಗವೆನಿಸೂದು. ಆ ದಿವ್ಯ ಯುಗಂಗಳೆ ಎಪ್ಪತ್ತೊಂದಾಗಲು ಒಂದು ಮನ್ವಂತರ ವೆನಿಸೂದು, ಆ ಮನ್ವಂತರಂಗಳು ಹದಿನಾಲ್ಕು ಆಗಲೊಂದು ಸೃಷ್ಟಿಕಲ್ಪವೆನಿಸೂದು. ಆ ಸೃಷ್ಟಿಕಲ್ಪವೆ

ದಿವ್ಯಯುಗ ಸಾವಿರವಪ್ಪುದರಿಂ ಬ್ರಹ್ಮಂಗೊಂದು ದಿವಸ. ಆ ದಿವಸ ಒಂದರೊಳಗೆ ಹದಿನಾಲ್ಕು ಮನುಗಳಿಗೆ, ಅನೇಕರಾದ ಇಂದ್ರರುಗಳಿಗೆ ಅಧಿಕಾರ ಸಮಾಪ್ತಿಯಾಗಿ ಬೇರಧಿಕಾರಿಗಳುದಿಸುತ್ತಿರ್ಕುಂ. ೬೮೬

## ಬ್ರಹ್ಮಾದಿಗಳ ಪರಿಮಿತಿ :

ಬಳಿಕ ಅಂತಪ್ಪ ದಿವ್ಯಯುಗವೆ ಬ್ರಹ್ಮಂಗೊಂದುರಾತ್ರಿಯಹುದು. ಆ ಸಂಹಾರ ಕಲ್ಪವಂತಪ್ಪ ದಿವರಾತ್ರಿಗಳ್ಕೂಡಿದ ದಿನ, ಮುನ್ನೂರರುವತ್ತಾಗಲೊಂದು ವರ್ಷ, ಅಂತಪ್ಪ ವರ್ಷ ನೂರು ಪರ್ಯಂತಮಾ ಬ್ರಹ್ಮನಸ್ಥಿತಿ. ಆ ಸ್ಥಿತಿಯೊಳಗೆ ಅನೇಕ ಮನುಗಳಿಗೆ, ಅನೇಕ ಶಕ್ರರಿಗಧಿಕಾರ ಸಮಾಪ್ತಿಯಾಗಿ ಬೇರಧಿಕಾರಿಗಳುದಿಸುತ್ತಿರ್ಕುಂ. ೬೮೭

ಬಳಿಕಾ ಬ್ರಹ್ಮನ ಸ್ಥಿತಿಯೆಂಬುದೇ ವಿಷ್ಣುವಿಗೊಂದು ಮಾಸವಹುದು. ಆ ಮಾಸವೊಂದರಲ್ಲಿ ಬ್ರಹ್ಮಂಗಧಿಕಾರ ಸಮಾಪ್ತಿಯಾಗಿ ಬೇರೊಬ್ಬಧಿಕಾರಿಯುದಿಸುತ್ತಿರ್ಪನು. ಅಂತಪ್ಪ ಮಾಸ ಹನ್ನೆರಡಾಗಲೊಂದು ವರ್ಷ. ಅಂತಪ್ಪ ವರ್ಷ ಪರಿಯಂತರಮಾ ವಿಷ್ಣುವಿನ ಸ್ಥಿತಿ. ಆ ಸ್ಥಿತಿಯೊಳಗನಂತ ಬ್ರಹ್ಮರಿಗೆ ಅಧಿಕಾರ ಸಮಾಪ್ತಿಯಾಗಿ ಬೇರೊಬ್ಬಧಿಕಾರಿಯುದಿಸುತ್ತಿರ್ಪಂ. ೬೮೮

ಬಳಿಕಾ ವಿಷ್ಣುವಿನ ಸ್ಥಿತಿಯೆಂಬುದೇ ರುದ್ರಂಗೊಂದುಮಾಸ, ಆ ಮಾಸವೊಂದರಲ್ಲಿ ವಿಷ್ಣುವಿಂಗಧಿಕಾರ ಸಮಾಪ್ತಿಯಾಗಿ ಬೇರೊಬ್ಬಧಿಕಾರಿಯುದಿಸುತ್ತಿರ್ಪನು. ಅಂತಪ್ಪ ಮಾಸಹನ್ನೆರಡಾಗಲು ಒಂದು ವರ್ಷ, ಅಂತಪ್ಪ ವರ್ಷ ನೂರು ಪರ್ಯಂತವಮಾ ರುದ್ರನಸ್ಥಿತಿ. ಆ ಸ್ಥಿತಿಯೊಳಗನಂತ ನಾರಾಯಣರಿಂಗಧಿಕಾರ ಸಮಾಪ್ತಿಯಾಗಿ ಬೇರಧಿಕಾರಿಗಳುದಿಸುತ್ತಿರ್ಕುಂ. ೬೮೯

ಬಳಿಕಾ ರುದ್ರನ ಸ್ಥಿತಿಯೆಂಬುದೆ ಈಶ್ವರಂಗೊಂದುದಿನ, ಆ ದಿನವೊಂದರೊಳಗೆ ರುದ್ರಂಗಧಿಕಾರ ಸಮಾಪ್ತಿಯಾಗಿ ಬೇರೊಬ್ಬಧಿಕಾರಿ ಯುದಿಸುತಿರ್ಪಂ. ಅಂತಪ್ಪ ದಿನ ಮುನ್ನೂರರವತ್ತಾಗಲೊಂದು ವರ್ಷ. ಅಂತಪ್ಪ ವರ್ಷ ನೂರು ಪರಿಯಂತಮೀಶ್ವರನ ಸ್ಥಿತಿ. ಆ ಸ್ಥಿತಿಯೊಳಗಸಂಖ್ಯಾತ ರುದ್ರರುಗಳಿಗಧಿಕಾರ ಸಮಾಪ್ತಿಯಾಗಿ ಬೇರಧಿಕಾರಿಗಳುದಿಸುತ್ತಿರ್ಕುಂ. ೬೯೦

ಬಳಿಕಾ ಈಶ್ವರನ ಸ್ಥಿತಿಯೆಂಬುದೆ ಸದಾಶಿವಂಗೊಂದು ನಿಮಿಷಮಾನಿಮಿಷದೊಳಗೆ ಈಶ್ವರಂಗಧಿಕಾರ ಸಮಾಪ್ತಿಯಾಗಿ ಬೇರೊಬ್ಬಧಿಕಾರಿಯುದಿಸುತಿರ್ಪನಾ ಕ್ರಮದಿಂ ಪೆರ್ಚಿದ ಘಳಿಗೆ, ಜಾವ, ದಿನ, ಪಕ್ಷ, ಮಾಸ, ವರ್ಷಂಗಳಂತಪ್ಪ ವರ್ಷ ನೂರು ಪರಿಯಂತಮಾ ಸದಾಶಿವನಸ್ಥಿತಿ. ಆ ಸ್ಥಿತಿಯೊಳಗನೇಕ ಈಶ್ವರರ್ಗಧಿಕಾರ ಸಮಾಪ್ತಿಯಾಗಿ ಬೇರಧಿಕಾರಿಗಳುದಿಸುತ್ತಿರ್ಕುಂ. ೬೯೧

ಬಳಿಕಾ ಸದಾಶಿವನ ಸ್ಥಿತಿಯೆಂಬುದೆ ಬಿಂಪೂಪಾಧಿಯಿಂ ಮಂತ್ರ ಮೂರ್ತಿತ್ವಮುಂ ಮುಮುಕ್ಷುಗಳ ಧ್ಯಾನ ಪೂಜಾರ್ಥಮಾಗಿ ತಳೆದು, ಸಕಲ, ಸಕಲ-ನಿಷ್ಕಳ,

ನಿಷ್ಕಳವೆನಿಸಿಕೊಳುತ್ತಿರ್ದ ಮಹೇಶ್ವರ, ಸದಾಶಿವ, ಶಿವಸ್ವರೂಪನಾದ ಪರಶಿವಂಗೊಂದು ತೃಟಿಮಾತ್ರದನಿತೆಂಬಾರೋಪಿತವಹುದು. ಅನಿತರೊಳನಂತ ಸದಾಶಿವರ್ಗಧಿಕಾರ ಸಮಾಪ್ತಿಯಾಗಿ ಬೇರಧಿಕಾರಿಗಳುದಿಸುತ್ತಿರ್ಪರ್. ೬೯೨

## ಮಹಾಸಂಹಾರ ಕ್ರಮ :

ಬಳಿಕ್ಕಿಂತಾಗಲಾ ಸಂಹಾರ ಕ್ರಮದಲ್ಲಿ ಸ್ವರ್ಗಮರ್ತ್ಯ ಪಾತಾಳವೆಂಬ ಲೋಕತ್ರಯ ಸಂಹಾರವೇ ಅಧಮ ಪ್ರಳಯವೆನಿಸೂದು. ಅಲ್ಲಿ ಮೇಲಣ ಮಹರ್ಲೋಕಾದಿಗಳ ಸ್ಥಿತಿಯುಂಟಾಗಿಹುದು. ೬೯೩

ಮತ್ತಮಾ ಪೃಥುವ್ಯಾದಿ ಪ್ರಕೃತ್ಯಂತಮಾದ ತತ್ವಂಗಳ ಸಂಹಾರವೇಮಧ್ಯಮ ಪ್ರಳಯವೆನಿಸೂದು. ಅಲ್ಲಿ ಮೇಲಣ ರಾಗಾದಿತತ್ವಭುವನ ಸ್ಥಿತಿಯುಂಟಾಗಿಹುದು. ಬಳಿಕ ಪೃಥುವ್ಯಾದಿ ಶಿವತತ್ವಾಂತಮಾದ ಸಕಲತತ್ವಾಧ್ವಾದಿ ಷಡಧ್ವನೊಳಕೊಂಡು ಬಿಂದು ನಿಂದವಸ್ಥೆಯೇ ಮಹಾಪ್ರಳಯಮಕ್ಕುಂ. ೬೯೪

ಮತ್ತಮಾ ಮಹಾಪ್ರಳಯದಲ್ಲಿಯೂ ಪರಶಿವನು ಮಲವಿಶಿಷ್ಟ ಪರಿಪಾಕ ತಾರತಮ್ಯಾಪೇಕ್ಷೆಯಿಂ ಬೋಧಿಸಲು ಯೋಗ್ಯರಾದವರುಗಳನನುಗ್ರಹೈಕ ರಸಿಕ ಶಕ್ತಿ ಮಾತ್ರದಿಂ ಬೋಧಕ್ಕುಪಯೋಗ್ಯರನಾಗಿ ಸಂಸ್ಕರಿಸುತ್ತಂ; ನಿಬಿಡತರ ಮಲಪಾಕದಿಂ ರೋಧಿಸಲು ಯೋಗ್ಯರಾದವರುಗಳಂ ರೋಧ ಶಕ್ತಿಮಾತ್ರದಿಂ ರೋಧಿಸುತ್ತಂ; ಕರ್ಮಿಗಳ ಮಂದತರ ಮಲಪರಿಪಾಕದೊಡಗೂಡಿದ ಕರ್ಮವನುತ್ತರಸ್ಥಿತಿ ಕಾಲಭಾವಿಯಾದ ಭೋಗನಿಮಿತ್ತಮಾಗಿ ಕ್ರಿಯಾಶಕ್ತಿಯಿಂ ಪಚನಂಗೈಯ್ಯುತ್ತಂ, ಶಾಂತಮಾದ ಶುದ್ಧಾಶುದ್ಧ ಮಾಯಾಶಕ್ತಿಗಳಂ ಸೃಷ್ಟಿವಿಷಯಮಾದ ಅಭಿವ್ಯಕ್ತಿಗೆ ಯೋಗ್ಯಂಗಳನಾಗುಮಾಡುತ್ತಮಿಂತು ಪ್ರಕಾರಾಂತರದಿಂದಖಿಳ ಕಾರ್ಯಂಗಳಂ ಮಾಡುತ್ತಿರ್ಪಂ. ೬೯೫

ಮತ್ತಮಾ ಬಿಂದುವನತಿಕ್ರಮಿಸಿರ್ದ ಶುದ್ಧ ನಿಷ್ಕಲ ಚಿಚ್ಛಕ್ತಿಯಗ್ರದಲ್ಲಿ ಬೆಳಗುತ್ತಿರ್ಪ ಶ್ರೀಗುರು ಶಂಭುಲಿಂಗದಲ್ಲಿ ಕಾಲದೇಶಾದಿ ಕಲ್ಪನೆಯೊಂದುಮಿಲ್ಲ. ಅದರಿಂದಾ ಶ್ರೀಗುರು ಶಂಭುಲಿಂಗವೇ ನಿತ್ಯ, ನಿರ್ಮಲ, ನಿರಾವರಣ, ನಿರ್ಮಾಯ, ನಿರ್ಗುಣ, ನಿಷ್ಕರ್ಮ, ನಿಷ್ಕಳ, ನಿಃಪ್ರಪಂಚ, ನಿರಘ, ನಿರ್ಲೇಪ, ನಿರಾಮಯ, ನಿರವಧ್ಯ ನಿಸ್ಸಂಗ, ನಿರ್ದ್ವಂದ್ವ, ನಿರಾಕುಳ, ನಿರಾತಂಕ, ನಿಷ್ಕಂಪ, ನಿಸ್ತತ್ವ, ನಿರಾಶ್ರಯ, ನಿರವಶೇಷ, ನಿರವಧಿ, ನಿರುಪಮ, ನಿರತಿಶಯ, ನಿತ್ಯಮುಕ್ತ, ಸತ್ಯಾನಂದಸ್ವರೂಪದಿಂ ವಿರಾಜಿಸುತ್ತಿರ್ಪರ್. ೬೯೬

ಬಳಿಕ್ಕಿಂತಾಗಲಿನ್ನೇನೆಂತೆಂದೊಡೆ, ಆಯುರಾರೋಗ್ಯ, ರೂಪು, ಯೌವನ, ಲಾವಣ್ಯಲಕ್ಷಣ, ಸತ್ಕುಲ, ಸಾಹಸ, ವನಿತಾವಿಲಾಸ,ಪುತ್ರಪೌತ್ರ,ಬಂಧು ಬಾಂಧವ, ಧನಧಾನ್ಯ, ಬಲಪರಾಕ್ರಮ, ವಿದ್ಯಾ ವಿತರಣ, ನಯವಿನಯಾದಿ ಸಕಲ ಸೌಭಾಗ್ಯ ಸಮಗ್ರತೆ ಸಹಿತಮಾಗಿ ಸಪ್ತಸಮುದ್ರಮುದ್ರಿತ ವಸುಧಾಧಿಪತ್ಯ, ಸಂತೋಷ,

ಸಂಜನಿತ ಸುಖಮಂ ಶುಕ್ಲೀಮದಿಂದಿಹದೊಳನುಭವಿಸಿ ಮೇಲೆ ಸರ್ವೋತ್ಕರ್ಷಮಾದ ಶ್ರೀಗುರು ಶಂಭುಲಿಂಗದೊಡಗೂಡಿ ಸರ್ವಜ್ಞತ್ವ ಸರ್ವಕರ್ತೃತ್ವದಿಂ, ಸತ್ಯಾನಂದ ಸ್ವರೂಪರಾಗಿರ್ಪ, ಭೋಗಮೋಕ್ಷಂಗಳಿಂದಮೇಕಾಗ್ರಚಿತ್ತದಿಂ ಕೇಳಿತಿಳಿದರ್ಗಗಲೆಂಬಾಶೀರ್ವಾದ ಲಕ್ಷಣ ಮಂಗಳಾಚರಣದಿಂದೀ ವಿವೇಕ ಚಿಂತಾಮಣಿಯೆಂಬ ಪ್ರಕರಣಂ ಪರಿಪೂರ್ಣಮಕ್ಕುಂ. ೬೯೭

ಇತಿ ಕಾಲ ಕ್ರಮ ವರ್ಣನಂ
ದಶಮ ಪರಿಚ್ಛೇದಃ

ಶ್ರೀಮದನಂತ ಸೂರಿಜನ ಸಮ್ಮತದಿಂದೆಸೆವೀ ವಿವೇಕಚಿಂ
ತಾಮಣಿಯೆಂಬ ಸತ್ಕೃತಿಯನಾಲಿಸಿದರ್ಗಡೆಗೊಂಡ ಸಂಶಯ ।
ಸ್ತೋಮವಡಂಗಿ ಬೇರೆಬಹುಶಾಸ್ತ್ರವನೋದುವ ಬಾಧೆ ಹಿಂಗಿ ಸ
ತ್ಪ್ರೇಮದೊಳಕ್ಕುವಿಷ್ಟಫಲಸಿದ್ಧಿ ಸಮುನ್ನತಿ ಶಂಭುಲಿಂಗದಿಂ ॥

॥ ಗದ್ಯ ॥

ಸ್ವಸ್ತಿ ಸಮಸ್ತ ಸುರವಿಸರ ಮಕುಟಮಣಿಗಣ ಕಿರಣ ಪ್ರಚುರ ಪ್ರವಾಹ
ತರಂಗಿಣೀತಟ ವಿರಾಜಿತ ಪದರಾಜೀವಯುಗಳ ಶ್ರೀಶಂಭು
ಸತ್ಕೃಪಾ ಕಟಾಕ್ಷಸಾಂದ್ರ ಚಂದ್ರಿಕಾ ಸಂಕ್ರಾಂತ ನಿರಸ್ತ
ನಿಖಿಳ ಸಂಸಾರಶ್ರಮ ವಿಸ್ಫಾರಿತ ನಿಜಾನಂದ ಸ್ವಾದನಾಸಕ್ತ ಚಿತ್ತೋಪೇತ
ನಿಜಗುಣಾಹ್ವಯೇನ ಶಿವಯೋಗಿನಾ ವಿರಚಿತ
ವಿವೇಕ ಚಿಂತಾಮಣಿ ನಾಮ ಪ್ರಕರಣಂ ಪರಿಸಮಾಪ್ತಂ
ಮಂಗಳಂ ಮಹಾ ಶ್ರೀ ಶ್ರೀ ಶ್ರೀ

# ಅನುಬಂಧ

## ಸಂಖ್ಯಾಪದ ಸೂಚಿ ಹಾಗೂ ವಿಶಿಷ್ಟ ಪದ ಸೂಚಿ

# ಅನುಬಂಧ ೨

## ವ್ಯಕ್ತಿನಾಮ ಸೂಚಿ

## ನಮ್ಮ ಮುಂದಿನ ಪ್ರಕಟಣೆ

ಚೇಟರಾಯ ವಿರಚಿತ

# ಮಾರ್ಕಂಡೇಯ ಚರಿತೆ

(ಷಟ್ಪದಿ ಕಾವ್ಯ)

ಜ್ಯೋತಿಷ್ಯ, ಶಿವಾದ್ವೈತ ಸಿದ್ಧಾಂತ

ಶಿವನಲೀಲೆಗಳಿಂದ ಕೂಡಿದ ಸು. 4000 ಷಟ್ಪದಿಗಳುಳ್ಳ ಕಾವ್ಯ

**ಸಂ : ಜಿ. ಎ. ಶಿವಲಿಂಗಯ್ಯ**

ಆಕಾರ : ಕ್ರೌನ್ 1/4 ಬೆಲೆ 60 00

ಪ್ರಕಟಣ ಪೂರ್ವ ಬೆಲೆ 40-00

**ಶಿವಕವಿ ಪ್ರಕಾಶನ, ಮೈಸೂರು**